ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ೨೮

ಪ್ರಧಾನ ಸಂಪಾದಕ

ಕೆ. [illegible] ಪುಟ್ಟಪ್ಪ, ಎಂ.ಎ.

# ಸಾರ್ವಜನಿಕ ಹಣಕಾಸು



ಲೇಖಕರು

ವಿ. ಎಲ್. ಡಿ'ಸೋಜ, ಬಿ.ಎ., ಬಿ.ಕಾಂ. (ಲಂಡನ್)

ಬಿ. ಆರ್. ಸುಬ್ಬರಾವ್, ಎಂ.ಎ., ಡಿಪ್.-ಇನ್-ಕಾಂ.

ಮೈಸೂರು :

ಮೈಸೂರು ವಿಶ್ವವಿದ್ಯಾನಿಲಯ

೧೯೫೪

# ಮುನ್ನುಡಿ

'ಸಾರ್ವಜನಿಕ ಹಣಕಾಸು' ಮಾನವನ ಅಭ್ಯುದಯಕ್ಕೂ ಪ್ರಗತಿಗೂ ಸಾಧಕವಾಗುವ ಶಾಸ್ತ್ರ. "ಎಲ್ಲ ಉದ್ಯಮಗಳಿಗೂ ಆರ್ಥಿಕ ಪರಿಪೂರ್ಣತೆಯೇ ಮೂಲ" ಎಂದು ಕೌಟಿಲ್ಯ ಅರ್ಥಶಾಸ್ತ್ರದಲ್ಲಿ ಹೇಳಿದ್ದಾನೆ. ಸರಕಾರಗಳ ಆಡಳಿತ ದಕ್ಷತೆ ಹಣಕಾಸಿನ ವ್ಯವಹಾರ ನೀತಿಯಿಂದ ವ್ಯಕ್ತವಾಗುತ್ತದೆ. ಆಧುನಿಕ ಅರ್ಥಶಾಸ್ತ್ರಜ್ಞನೊಬ್ಬನು ಹೇಳುವಂತೆ "ಹಣಕಾಸು ಎಂದರೆ ಕೇವಲ ರೂಪಾಯಿ ಆಣೆ ಪೈಗಳ ಲೆಕ್ಕಮಾತ್ರವಲ್ಲ. ಅದೊಂದು ಹಿರಿಯ ಅರ್ಥನೀತಿ.' ಅಂತಹ ಆರ್ಥಿಕ ನೀತಿ ಸುವ್ಯವಸ್ಥೆಗೊಳ್ಳದೆ ಯಾವ ಸರಕಾರವೂ ಆಡಳಿತವನ್ನು ಸಮರ್ಪಕ ವಾಗಿ ನಡೆಸಲಾರದು. ಸರಿಯಾದ ಸರಕಾರವಿಲ್ಲದೆ ಸಮರ್ಪಕವಾದ ಹಣಕಾಸಿನ ನೀತಿ ಸಾಧ್ಯವಿಲ್ಲ." ಒಟ್ಟಿನಲ್ಲಿ ಹಣಕಾಸು ರಾಜ್ಯ ಜೀವನದ ಉಸಿರು.

ಸಾರ್ವಜನಿಕ ಹಣಕಾಸಿನ ಶಾಸ್ತ್ರದಲ್ಲಿ ಮುಖ್ಯವಾಗಿ ಎರಡು ಶಾಖೆಗಳಿವೆ. ಸಾರ್ವಜನಿಕ ಆದಾಯ ಮತ್ತು ಸಾರ್ವಜನಿಕ ವೆಚ್ಚ. ಇವಲ್ಲದೆ, ಸಾರ್ವಜನಿಕ ಸಾಲಸೋಲಗಳು ಮತ್ತು ಹಣಕಾಸಿನ ಆಡಳಿತ ಈ ಶಾಸ್ತ್ರದಲ್ಲಿ ಸೇರಿವೆ.

ಶ್ರೀಯುತರುಗಳಾದ ವಿ. ಎಲ್. ಡಿ'ಸೋಜ ಅವರು ಮತ್ತು ಬಿ. ಆರ್. ಸುಬ್ಬರಾಯರು ಬರೆದಿರುವ ಈ ಹಣಕಾಸಿನ ಶಾಸ್ತ್ರದಲ್ಲಿ ಮೂರು ಭಾಗಗಳಿವೆ: (1) ಸಾರ್ವಜನಿಕ ಹಣಕಾಸಿನ ನಿಯಮಗಳು (2) ಇಂಡಿಯಾ ಸರಕಾರದ ಹಣಕಾಸು (3) ಮೈಸೂರು ಸರಕಾರದ ಹಣಕಾಸು. ಲೇಖಕರು ಅತಿ ಕಠಿಣವಾದ ಈ ಸಮಸ್ಯೆಗಳನ್ನು ಮತ್ತು ಅವುಗಳ ರೂಪರೇಖೆಗಳನ್ನು ಉತ್ತಮ ರೀತಿಯಲ್ಲಿ ವಿವರಿಸಿದ್ದಾರೆ. ಮೊದಲನೆಯ ಭಾಗದಲ್ಲಿ ಸಾರ್ವಜನಿಕ ಹಣಕಾಸಿನ ನಿಯಮಗಳನ್ನು ವಿಶದವಾಗಿ ವಿವರಿಸಿದ್ದಾರೆ. ಆದರೆ ಇವರು ತೆಗೆದುಕೊಂಡಿರುವ ಅಂಕಿ ಅಂಶಗಳು ಬಹು ಹಳೆಯವು. ಈಗ ಯುದ್ಧಾನಂತರ, ಅನೇಕ ಕ್ರಾಂತಿ ದಾಯಕವಾದ ಬದಲಾವಣೆಗಳಿಂದ ಸಾರ್ವಜನಿಕ ಹಣಕಾಸಿನ ರೀತಿನೀತಿ

ನಿಯಮಗಳಲ್ಲಿ ಮಹತ್ತರ ಬದಲಾವಣೆಗಳಾಗಿವೆ. ಇದರಿಂದ ಇಲ್ಲಿ ಕೊಟ್ಟಿರುವ ಅಂಕಿ ಅಂಶಗಳು ಸದ್ಯಃಸ್ಥಿತಿಗೆ ಅಷ್ಟು ನೈಜವಾಗಿ ಕಾಣದಿರಬಹುದು.

ಭಾರತ ಸರಕಾರದ ಆಯವ್ಯಯವನ್ನು ಮತ್ತು ಮೈಸೂರು ಸರಕಾರದ ಆಯವ್ಯಯವನ್ನು ಸಂಕ್ಷೇಪವಾಗಿ ಪರಿಶೀಲಿಸಲಾಗಿದೆ. ಇಲ್ಲಿಯೂ ಭರತಖಂಡದ ಸ್ವಾತಂತ್ರ್ಯಪೂರ್ವದ ಪರಿಸ್ಥಿತಿಯ ಅಂಕಿ ಅಂಶಗಳನ್ನೆ ಗಮನಿಸಬೇಕಾದ ಅನಿವಾರ್ಯ ಗ್ರಂಥಕರ್ತರಿಗೆ ಒದಗಿದುದನ್ನು ಕಾಣಬಹುದು. ಮೈಸೂರು ಸಂಸ್ಥಾನದ ಆದಾಯ ಕ್ಷೇತ್ರದಲ್ಲಿ ಹಲವು ಪ್ರಚಲಿತ ತೆರಿಗೆಗಳನ್ನು ಪರಿಶೀಲಿಸಿದೆ. ಇತ್ತೀಚೆಗೆ ಮೈಸೂರು ರಾಜ್ಯದ ಆಯವ್ಯಯ ಒಂದನ್ನೊಂದು ಹಿಡಿಯಲಾರದ ವೇಗ ದಲ್ಲಿ ಸಾಗುತ್ತಿವೆ. ದೇಶದ ಸಂಪದಭಿವೃದ್ಧಿಯ ಕ್ಷೇತ್ರದಲ್ಲಿ, ಸಮಾಜಾಭಿ ವೃದ್ಧಿಯ ಕ್ಷೇತ್ರದಲ್ಲಿ ಸಾರ್ವಜನಿಕ ವೆಚ್ಚ ಏರುತ್ತಿದೆ. ವಿದ್ಯಾಭ್ಯಾಸ, ಸಾರ್ವಜನಿಕ ಆರೋಗ್ಯ—ಈ ಕ್ಷೇತ್ರಗಳಲ್ಲಿ ವೆಚ್ಚದ ವೇಗವನ್ನು ತಡೆಗಟ್ಟುವುದರಿಂದ ಹಾನಿಯೇ ಹೆಚ್ಚು. ಸರಕಾರ ಮಿತವ್ಯಯದ ನೀತಿಯನ್ನು ಅನುಸರಿಸಿದೆ. ಕಾರ್ಯಕ್ಷೇತ್ರದಲ್ಲಿ ಇದು ಯಶಸ್ವಿಯಾಗು ತ್ತಿದೆಯೆ ನೋಡಬೇಕು. ಮಿತವ್ಯಯ ಶಾಸ್ತ್ರೀಯವಾದ ಮತ್ತು ಬುದ್ಧಿ ಪೂರ್ವಕವಾದ ವೆಚ್ಚದ ರೂಪವನ್ನು ತಾಳಬೇಕೇ ಹೊರತು ಲೋಭ ಕಾರ್ಪಣ್ಯಗಳ ರೂಪವನ್ನು ತಾಳಬಾರದು.

ಆರ್ಥಿಕ ವಿಲಯನದ ದೆಸೆಯಿಂದ ಉದ್ಭವಿಸಬಹುದಾದ ಹಣ ಕಾಸಿನ ವ್ಯವಸ್ಥೆ ಮತ್ತು ಸಮಸ್ಯೆಗಳನ್ನು ಇಲ್ಲಿ ಪರಿಶೀಲಿಸಿದ್ದರೆ ಹೆಚ್ಚು ಪ್ರಯೋಜನವಾಗುತ್ತಿತ್ತೆಂದು ವಾಚಕರಿಗೆ ತೋರಬಹುದು. ಅದಕ್ಕೆ ಸಮಾಧಾನ : ಈ ಗ್ರಂಥ ಹಲವು ವರ್ಷಗಳ ಹಿಂದೆಯೇ ಅಚ್ಚಿಗೆ ಸಿದ್ಧವಾಗಿತ್ತು. ಮುದ್ರಣ ಮತ್ತು ಇತರ ಅನಿವಾರ್ಯ ಕಾರಣಗಳಿಂದಾಗಿ ಇಷ್ಟು ತಡವಾಗಿ ಇದು ಪ್ರಕಟವಾಗುತ್ತಿದೆ. ಕೆಲವು ಅಂಕಿ ಅಂಶಗಳಲ್ಲಿ ಮತ್ತು ಅಂತಹ ಅಂಕಿ ಅಂಶಗಳಿಂದ ಉದ್ಭವವಾಗುವ ಆಲೋಚನಾ ಸಿದ್ಧಾಂತಗಳಲ್ಲಿ ಸದ್ಯಃಪರಿಸ್ಥಿತಿಯ ದೃಷ್ಟಿಗೆ ಸರಿಹೋಗದೆ ಬಹುದೂರ ವಾಗಿ ಕಂಡು ಬರುವ ನ್ಯೂನತೆಗಳೇನಾದರೂ ಇದ್ದರೆ ಅದಕ್ಕೆ ಮೇಲೆ ಹೇಳಿದ ಸಂಗತಿಯೇ ಮುಖ್ಯ ಕಾರಣವೆಂದು ವಾಚಕರ ಸಹಾನುಭೂತಿ ಯನ್ನು ಬೇಡಬೇಕಾಗುತ್ತದೆ. ಆದರೂ ಈ ಗ್ರಂಥ ಪ್ರಾಕ್ತನವಸ್ತು

ಸಂಗ್ರಹಾಲಯ ಎಂದು ಯಾರೂ ಭಾವಿಸಬಾರದು. ಎಲ್ಲ ಕಾಲದ ಆರ್ಥಿಕ ವ್ಯವಹಾರಕ್ಕೂ ಅನ್ವಯವಾಗುವ ಜೀವಂತ ವಿಚಾರಗಳು ಇಲ್ಲಿ ಯಥೇಚ್ಛವಾಗಿರುವುದರಿಂದ ಇಂದೂ ಮುಂದೆಯೂ ಇದನ್ನು ಓದುವವರು ಸಫಲರಾಗಿಯೇ ಆಗುತ್ತಾರೆ.

ಮೈಸೂರು,
೪-೯-೧೯೫೩.

ಕೆ. ವಿ. ಪುಟ್ಟಪ್ಪ,
ಅಧ್ಯಕ್ಷ,
ಕನ್ನಡ ಗ್ರಂಥ ಪ್ರಕಟನ ಸಮಿತಿ.

# ವಿಷಯಾನುಕ್ರಮಣಿಕೆ



## ಮೊದಲನೆಯ ಭಾಗ

### ಸಾರ್ವಜನಿಕ ಹಣಕಾಸಿನ ಸಾಮಾನ್ಯ ನಿಯಮಗಳು



## ಎರಡನೆಯ ಭಾಗ

### ಇಂಡಿಯಾ ಸರಕಾರದ ಹಣಕಾಸು

# ಮೂರನೆಯ ಭಾಗ

## ಮೈಸೂರು ಸಂಸ್ಥಾನದ ಹಣಕಾಸು

# ಪೀಠಿಕೆ

ಈ ಗ್ರಂಥವು ಸಾರ್ವಜನಿಕ ಹಣಕಾಸಿಗೆ ಸಂಬಂಧಪಟ್ಟದ್ದು. ದ್ರವ್ಯಸಂಗ್ರಹ ಮತ್ತು ವ್ಯಯ ಇವು ಸರಕಾರದ ಗುರಿಯಲ್ಲ. ಅವು ಸರಕಾರದ ಅಂತಿಮಗುರಿಯನ್ನು ಸಾಧಿಸುವುದಕ್ಕೆ ಸಾಧನ ಮಾತ್ರ. ಆದುದರಿಂದ ಸಾರ್ವಜನಿಕ ಹಣಕಾಸಿನ ಶಾಸ್ತ್ರವ್ಯಾಸಂಗವು ಸರಕಾರದ ಕರ್ತವ್ಯನಿರ್ವಾಹಕ್ಕೆ ಅತ್ಯಾವಶ್ಯಕವಾದ ಒಂದು ಪೂರ್ವಸಿದ್ಧತೆಯೆನ್ನುವುದರಲ್ಲಿ ಸಂದೇಹವಿಲ್ಲ.

ಹಣಕಾಸಿನ ಆಡಳಿತ ಒಂದು ಕಲೆ. ಇಂತಹ ಹಣಕಾಸಿನ ಆಡಳಿತಕ್ಕಾಗಿ ಕಟ್ಟು ನಿಯಮಗಳನ್ನಾಗಲಿ, ವಿಧಾನರೀತಿಗಳನ್ನಾಗಲಿ ಶಾಸ್ತ್ರರೂಪದಲ್ಲಿ ರಚಿಸುವುದು ಅಸಾಧ್ಯ. ಶ್ರೇಷ್ಠಕವಿಯಂತೆ ಶ್ರೇಷ್ಠ ಕೋಶಾಧ್ಯಕ್ಷನಿಗೆ ಇರಬೇಕಾದ ಗುಣಗಳು ಅಭ್ಯಾಸದಿಂದ ಬರುವವಲ್ಲ; ಅವು ಹುಟ್ಟುಗುಣಗಳು ಎಂಬ ಅಭಿಪ್ರಾಯವೊಂದಿದೆ. ಇದರಲ್ಲಿ ಸತ್ಯಾಂಶವಿಲ್ಲದೆ ಇಲ್ಲ. ಸಾರ್ವಜನಿಕ ಹಣಕಾಸಿಗೆ ಒಂದು ನಿಯಮವಾಗಲಿ, ವಿಧಾನವಾಗಲಿ, ಹುಟ್ಟುವ ಮೊದಲು ರಾಜ್ಯಸೂತ್ರಗಳನ್ನು ಕೈಯ್ಯಲ್ಲಿ ಹಿಡಿದು ಸರಕಾರದ ಹಣಕಾಸನ್ನು ಶ್ರೇಷ್ಠವಾದ ರೀತಿಯಲ್ಲಿ ವ್ಯವಸ್ಥೆಗೊಳಿಸಿದ ಕೋಶಾಧ್ಯಕ್ಷರಿರಲಿಲ್ಲವೆ? ಹಣಕಾಸಿನ ನಿಯಮಗಳನ್ನು ಕಂಠಪಾಠಮಾಡಿ ಆ ಶಾಸ್ತ್ರ ವ್ಯಾಸಂಗಮಾಡಿದ ಮಾತ್ರಕ್ಕೆ ಉತ್ತಮ ಕೋಶಾಧ್ಯಕ್ಷನಾಗಲು ಸಾಧ್ಯವೆ? ವೇದಾಂತ ಶಾಸ್ತ್ರವನ್ನು ಪಠನ ಮಾಡಿದವರೆಲ್ಲ "ಶಂಕರ" ರಾಗುವುದು ಎಷ್ಟು ಅಸಂಭವವೋ ಇದೂ ಅಷ್ಟೇ ಅಸಂಭವ. ಆದರೂ ರಾಜಕೀಯ ಕಾರ್ಯನಿರ್ವಾಹದಲ್ಲಿ ಕಡ್ಡಾಯವಾಗಿ ಅನುಸರಿಸಬೇಕಾದ, ರಾಜನೀತಿಜ್ಞರು ಮನಸ್ಸಿನಲ್ಲಿಡಬೇಕಾದ ಕೆಲವು ಆರ್ಥಿಕ ಮತ್ತು ರಾಜಕೀಯ ನಿಯಮಗಳು, ಸಂಪ್ರದಾಯಗಳು ಈಗಾಗಲೇ ರೂಢಮೂಲವಾಗಿ ಬಂದಿವೆ. ಪ್ರಪಂಚದ ಇತಿಹಾಸದಲ್ಲಿ ಶ್ರೇಷ್ಠಸಚಿವರೂ ಕೋಶಾಧ್ಯಕ್ಷರೂ ಎಂದು ಹೆಸರು ಪಡೆದ ಟರ್ಗಟ್ ಮತ್ತು ಪೀಲ್ ಮೊದಲಾದ ಮಹನೀಯರು ಅರ್ಥಶಾಸ್ತ್ರದ ಅಧ್ಯಯನ ಮಾಡಿದ್ದವರೆಂದು ತಿಳಿದುಬಂದಿದೆ. ಅವರು ತಮ್ಮ ರಾಜ್ಯಧಾರ

ನಿರ್ವಾಹಕಾಲದಲ್ಲಿ, ಸಾರ್ವಜನಿಕ ಹಣಕಾಸಿನ ವ್ಯವಸ್ಥೆ ಮಾಡುವುದರಲ್ಲಿ ಅನುಸರಿಸಿದ ಮಾರ್ಗಗಳು ಹೊಸ ವಿಧಾನಗಳಾಗಿ ಆ ಶಾಸ್ತ್ರವನ್ನು ಬೆಳಸಿವೆಯೆನ್ನಬಹುದು.

ಸಾರ್ವಜನಿಕ ಹಣಕಾಸಿಗೆ ಸಂಬಂಧಪಟ್ಟ ವಿಷಯವು ದುರ್ಬೋಧವಾದುದಲ್ಲವೆಂಬುದನ್ನೂ ಇದು ಕೋಶಾಧ್ಯಕ್ಷರ ಕೇವಲ ಐಂದ್ರಜಾಲೀಕೈವಾಡವಲ್ಲವೆಂಬುದನ್ನೂ ಸಾರ್ವಜನಿಕರು ಗಮನದಲ್ಲಿಡಬೇಕು. ಸಾರ್ವಜನಿಕ ಹಣಕಾಸಿನ ವ್ಯವಹಾರದಲ್ಲಿ ಅನುಸರಿಸಬೇಕಾದ ಸಾಮಾನ್ಯ ತತ್ವಗಳು ಕೆಲವಿವೆ. ಇದನ್ನು ಪ್ರಜೆಗಳು ತಿಳಿಯುವುದು ಸುಲಭ, ಮತ್ತು ಅಗತ್ಯ. "ಅಲಬ್ಧ ಲಾಭ, ಲಾಭಪರಿರಕ್ಷಣ, ರಕ್ಷಿತ ವಿವರ್ಧನ" ಇವು ರಾಷ್ಟ್ರದ ದಂಡನೀತಿಯ ಮೂರು ಅನುಬಂಧಗಳು. ಇವು ಯಶಸ್ವಿಯಾಗಬೇಕಾದರೆ, ಸರಕಾರದ ಹಣಕಾಸು ಸುವ್ಯವಸ್ಥಿತವಾಗಿರಬೇಕು. ಒಂದು ರಾಷ್ಟ್ರದ ಸಾರ್ವಜನಿಕ ಹಣಕಾಸು ಸುವ್ಯವಸ್ಥಿತವಾಗದಿದ್ದರೆ, ಅಲ್ಲಿಯ ಸರಕಾರ ಮತ್ತು ಪ್ರಜೆಗಳಿಗೆ ಅದರ ವಿಷಯದಲ್ಲಿ ಸಾಕಷ್ಟು ಆಸಕ್ತಿಯಿಲ್ಲದಿದ್ದರೆ ಅಲ್ಲಿಯ ನೀತಿ ಕುಸಿದು ಬಿದ್ದಂತೆಯೇ. ಸಾರ್ವಜನಿಕ ಹಣಕಾಸಿನ ವ್ಯವಸ್ಥೆಗೆ ರಾಷ್ಟ್ರಗಳನ್ನು ಉರುಳಿಸಬಲ್ಲ, ಉದ್ಧಾರಮಾಡಬಲ್ಲ ಶಕ್ತಿಯಿದೆ. ಅರ್ಥಶಾಸ್ತ್ರಾಧ್ಯಯನದಲ್ಲಿ ನಿಷ್ಣಾತರಾದ ವಿದ್ವಾಂಸರು, ಅಧಿಕಾರಿಗಳು, ಮತ್ತು ರಾಜಕಾರಣಪಟುಗಳಿಗೆ ಶಿಕ್ಷಣವನ್ನು ಕೊಡಬೇಕೆಂಬುದು ಈ ಗ್ರಂಥರಚನೆಯ ಉದ್ದೇಶವಲ್ಲ. ಕೇವಲ ಜನಸಾಮಾನ್ಯಕ್ಕೆ ಈ ಶಾಸ್ತ್ರದ ಪರಿಚಯುವನ್ನುಂಟುಮಾಡಿ ಕೊಡಬೇಕೆಂದೇ ಇದನ್ನು ಬರೆದವರ ಬಯಕೆ.

ಈ ಶಾಸ್ತ್ರವ್ಯಾಸಂಗಕ್ಕೆ ಎರಡು ಮಾರ್ಗಗಳಿವೆ. ಒಂದು ದೇಶದ ಸಂಪದಭಿವೃದ್ಧಿಯ ದೃಷ್ಟಿಯಿಂದ ಅಲ್ಲಿಯ ಸಾರ್ವಜನಿಕ ಹಣಕಾಸಿನ ವ್ಯಾಸಂಗಮಾಡುವುದು ಒಂದು; ರಾಷ್ಟ್ರರಕ್ಷಣಾ ದೃಷ್ಟಿಯಿಂದ ಅದನ್ನು ವಿಮರ್ಶಿಸುವುದು ಇನ್ನೊಂದು. ಮೊದಲನೆಯದು ಇಂಗ್ಲಿಷರ ಮಾರ್ಗ. ಎರಡನೆಯದು ಜರ್ಮನರು ಅನುಸರಿಸುವ ರೀತಿ. ಮೊದಲನೆಯದರಲ್ಲಿ ಹಣಕಾಸಿನ ವ್ಯಾಸಂಗವು, ಅನುಷ್ಠಾನದಲ್ಲಿರುವ ಅರ್ಥಶಾಸ್ತ್ರದ ಒಂದು ಅಂಗವಾಗಿ ಪರಿಣಮಿಸುತ್ತದೆ. ಎರಡನೆಯದರಲ್ಲಿ ಇದು ರಾಜ್ಯಾಡಳಿತದ ಒಂದು ಶಾಖೆಯಾಗಿ ನಿಲ್ಲುತ್ತದೆ. ಈ ಶಾಸ್ತ್ರವನ್ನು ಯಾರು ಹೇಗಾದರೂ ಕರೆಯಲಿ, ಇದಕ್ಕೂ ಇತಿಹಾಸ, ಸಮಾಜನೀತಿ, ಅರ್ಥಶಾಸ್ತ್ರ,

ರಾಜ್ಯಶಾಸ್ತ್ರ ಮೊದಲಾದ ನಾನಾವಿಧವಾದ ಸಮಾಜ ಶಾಸ್ತ್ರಗಳಿಗೂ ಇರುವ ಸಂಬಂಧವನ್ನು ಒಪ್ಪದವರಿಲ್ಲ.

ಸಮಾಜಶಾಸ್ತ್ರಗಳು ಸಾಮಾನ್ಯವಾಗಿ ಹೊಸವಿಧಾನಗಳಿಂದ, ಹೊಸ ಅನುಭವಗಳಿಂದ, ಕಾಲಪ್ರವಾಹದಲ್ಲಿ ಆಯಾಪರಿಸ್ಥಿತಿಗೆ ತಕ್ಕಂತೆ ಮಾರ್ಪಾಟಾಗಿ ಹೊಸ ಸ್ವರೂಪವನ್ನು ತಾಳಿ ಬೆಳೆಯತಕ್ಕುವುಗಳು. ಜೀವನದ ವಿಧಾನಗಳು, ಸಮಾಜದ ಆಚಾರವ್ಯವಹಾರಗಳು, ರಾಜಕೀಯ ರೂಪರಚನೆಗಳು, ಧರ್ಮ, ನ್ಯಾಯದ ದೃಷ್ಟಿಗಳು, ಇವೆಲ್ಲವೂ ಈ ವೈಜ್ಞಾನಿಕ ಯುಗದಲ್ಲಿ ಕ್ಷಣೇಕ್ಷಣೇ ರೂಪಾಂತರವನ್ನು ಪಡೆಯುತ್ತಿರುತ್ತವೆ. ಹೀಗಿರುವಾಗ ದಿನಂಪ್ರತಿ ವ್ಯತ್ಯಾಸ ಹೊಂದುವ ಅರ್ಥಶಾಸ್ತ್ರ, ರಾಜನೀತಿ, ಸಮಾಜನೀತಿ, ಮೊದಲಾದುವುಗಳ ಸಾಮಾನ್ಯತತ್ವಗಳ ವಿಷಯದಲ್ಲಿ ಕೂಡ "ಇದು ಹೀಗೆ, ಈ ಮಾರ್ಗವೇ ಸರಿ" ಎಂದು ಕಡ್ಡಾಯವಾಗಿ ಹೇಳುವ ಧೈರ್ಯ ಯಾರಿಗೂ ಸಾಲದು. ಅಂತಹ ಕೆಲಸಕ್ಕೆ ನಾವು ಇಲ್ಲಿ ಕೈಹಾಕಿಯೂ ಇಲ್ಲ. ಭಿನ್ನಭಿನ್ನದೃಷ್ಟಿಗಳೂ, ಅಭಿಪ್ರಾಯಗಳೂ ಪಂಥಗಳೂ ಇರುವ ಶಾಸ್ತ್ರಗಳ ವಿಷಯದಲ್ಲಿ ಹಾಗೆ ಹೇಳುವುದು ಸಾಧ್ಯವಾಗದ ಮಾತು. ಈ ಪುಸ್ತಕದಲ್ಲಿ ಸಾರ್ವಜನಿಕ ಹಣಕಾಸಿಗೆ ಅನ್ವಯಿಸುವ ಸಾಮಾನ್ಯ ತತ್ವಗಳನ್ನು ನಿರೂಪಣೆಮಾಡುವಾಗ ಇಂಗ್ಲಿಷ್ ಪಂಥವನ್ನು ನಾವು ಅನುಸರಿಸಿದ್ದೇವೆನ್ನಬಹುದು. ಆದರೂ ವಿಮರ್ಶಾತ್ಮಕ ದೃಷ್ಟಿಯನ್ನು ಬಿಟ್ಟಿಲ್ಲ.

ಅರ್ಥಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳು ಕನ್ನಡದಲ್ಲಿ ಬಹಳವಾಗಿಲ್ಲ. ಸಮಾಜಶಾಸ್ತ್ರಗಳಿಗೆ ಅನ್ವಯಿಸುವ ಗ್ರಂಥಗಳ ಪರಿಚಯವು ನಮ್ಮ ಕನ್ನಡನಾಡಿನ ಆಬಾಲವೃದ್ಧರಿಗೂ ಆಗಬೇಕಾದುದು ಅಗತ್ಯ. ಹೀಗೆ ಅರ್ಥಶಾಸ್ತ್ರದ ಒಂದು ಭಾಗವಾದ ಸಾರ್ವಜನಿಕ ಹಣಕಾಸಿನ ವಿಷಯದಲ್ಲಿ ಒಂದು ಗ್ರಂಥವನ್ನು ರಚಿಸಿ ಕನ್ನಡಿಗರ ಮುಂದಿಡುವ ಅವಕಾಶವನ್ನು ನಮಗೆ ಕಲ್ಪಿಸಿಕೊಟ್ಟ, ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಪ್ರಕಟನ ಸಮಿತಿಯವರಿಗೆ ನಾವು ಕೃತಜ್ಞರಾಗಿದ್ದೇವೆ.

ಈ ಪುಸ್ತಕದಲ್ಲಿ ವಿಷಯನಿರೂಪಣೆಯಲ್ಲಿಯೂ, ಭಾಷೆಯಲ್ಲಿಯೂ ಅನೇಕ ಲೋಪದೋಷಗಳಿವೆ. ಓದುಗರು, ಆ ತಪ್ಪುಗಳನ್ನು ಸೂಚಿಸಿ, ಉತ್ತಮಗೊಳಿಸುವ ಮಾರ್ಗವನ್ನು ತೋರಿಸಬೇಕೆಂದು ಬೇಡುತ್ತೇವೆ.

ನಮ್ಮಿಬ್ಬರಿಗೂ ಅರ್ಥಶಾಸ್ತ್ರದ ಪರಿಚಯವನ್ನು ಮೊದಲುಮಾಡಿ ಕೊಟ್ಟು ಅದರಲ್ಲಿ ಆಸಕ್ತಿ ಹುಟ್ಟುವಂತೆಮಾಡಿ, ಅದನ್ನು ಬೋಧಿಸಿ, ಅಭಿಮಾನ ವಾತ್ಸಲ್ಯಗಳಿಂದ ನಮ್ಮನ್ನು ಬಹುವಿಧವಾಗಿ ಉಪಕರಿಸಿರುವ, ನಮ್ಮ ವಿದ್ಯಾಗುರುಗಳಾದ ವಿಶ್ವವಿದ್ಯಾಲಯದ ವಿಶ್ರಾಂತ ವೈಸ್-ಛಾನ್ಸೆಲರ್, ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ.ಎ., ಬಾರ್-ಅಟ್-ಲಾ, ಅವರ ಉಪಕಾರವನ್ನು ಇಲ್ಲಿ ಕೃತಜ್ಞತಾ ಭಕ್ತಿಗಳಿಂದ ಸ್ಮರಿಸುತ್ತೇವೆ. ಈ ಪುಸ್ತಕದ ರಚನೆಯಲ್ಲಿ ಶ್ರೀಮಾನ್ ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರೀ, ಎಂ.ಎ., ಅವರು ಬಹುವಾಗಿ ನಮಗೆ ಸಹಾಯಮಾಡಿದ್ದಾರೆ. ಇದೇ ಗ್ರಂಥದ ಮೂರನೆಯ ಭಾಗದ ರಚನೆಯಲ್ಲಿ ಶ್ರೀಮಾನ್ ಕೆ. ಎಸ್. ನಂಜುಂಡಯ್ಯನವರು ಬಹಳ ಶ್ರದ್ಧೆವಹಿಸಿ ಬಹಳ ವಾಗಿ ಸಹಕರಿಸಿದ್ದಾರೆ. ಅವರ ಸಹಾಯ ಸಹಕಾರಗಳಿಗಾಗಿ, ನಮ್ಮ ಮನಃಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇವೆ.

ಈ ಪುಸ್ತಕವು ಸಾರ್ವಜನಿಕ ಹಣಕಾಸಿನ ಪರಿಚಯವನ್ನು ನಮ್ಮ ನಾಡಿನ ಬಂಧುಬಳಗದವರಿಗೆ ಉಂಟುಮಾಡಿಕೊಟ್ಟಲ್ಲಿ, ನಮ್ಮ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇವೆ.

ವಿ. ಎಲ್. ಡಿ'ಸೋಜ.

ಬಿ. ಆರ್. ಸುಬ್ಬರಾವ್.

# ಪ್ರಕರಣ ೧

## ಪ್ರವೇಶ

ಸಾಮಾನ್ಯವಾಗಿ ನಾವು "ನಮ್ಮ ದೇಶ, ನಮ್ಮ ರಾಜ್ಯ, ನಮ್ಮ ಸರಕಾರ" ಎಂದು ಪದೇ ಪದೇ ಹೇಳುತ್ತೇವೆ. ದೇಶವೆಂದರೆ ಕೆಲವು ನಿಯಮಿತವಾದ ಎಲ್ಲೆಗಳುಳ್ಳ ಒಂದು ಭೂಭಾಗ. ಈ ಪ್ರದೇಶದಲ್ಲಿ ನೆಲಸಿರುವ ಜನರಿಗೆ ಒಂದು ವಿಧವಾದ ಧ್ಯೇಯಗಳೂ ಆಶೋತ್ತರಗಳೂ ಸಂಪ್ರದಾಯಗಳೂ ರೀತಿನೀತಿಗಳೂ ಇರುತ್ತವೆ. ಹಾಗೆಯೇ ಅವರೆಲ್ಲರೂ ಒಂದು ಆಡಳಿತ ಕ್ರಮಕ್ಕೆ ಒಳಗಾಗಿರುತ್ತಾರೆ. ಅವರಲ್ಲಿ ಕ್ರಮೇಣ, ತಮ್ಮ ಬದುಕನ್ನು ಸರಾಗವಾಗಿ ನಡಸಿಕೊಳ್ಳಲು ಬೇಕಾದ ಅನ್ಯೋನ್ಯವಾದ ಮೈತ್ರಿ ಮತ್ತು ಒಗ್ಗಟ್ಟು ಬೆಳೆಯುತ್ತವೆ. ಒಬ್ಬರ ಆಶ್ರಯವು ಮತ್ತೊಬ್ಬರಿಗೆ ಆವಶ್ಯಕವಾದಂತೆಲ್ಲಾ ಆ ಜನರಿಗೆ ತಾವು ನೆಲಸಿರುವ ಪ್ರದೇಶದ ಮೇಲೆಯೂ ಅಲ್ಲಿ ವಾಸಿಸುವ ಜನರ ಮೇಲೆಯೂ ಅಭಿಮಾನವು ಬೆಳೆದು ಬರುತ್ತದೆ. ಆಗ ಅದನ್ನು ತಮ್ಮ ದೇಶವೆಂದು ಅವರು ಭಾವಿಸಲು ಮೊದಲುಮಾಡುತ್ತಾರೆ. ಹೀಗೆ ಅನ್ಯೋನ್ಯವಾದ ಸಹಾಯದಿಂದ ಬಾಳುವ ಜನರು ಒಂದು ಗೊತ್ತಾದ ವಾಸಸ್ಥಳವನ್ನು ಮಾಡಿಕೊಂಡ ಮೇಲೆ ಅಲ್ಲಿ ಒಂದು ಸಮಾಜವನ್ನು ಏರ್ಪಡಿಸಿಕೊಳ್ಳುವುದು ಸಹಜ. ಆಗ ಜನರು ಒಬ್ಬರೊಡನೊಬ್ಬರು ಹೆಚ್ಚಾಗಿ ಕಲೆತು ಕೆಲಸಮಾಡಲಾರಂಭಿಸುವರು. ಹೀಗೆ ಒಟ್ಟಾಗಿ ಸೇರಿ ಕೆಲಸಮಾಡುವುದರಿಂದ ಅವರು ಎಲ್ಲ ಶ್ರೇಯಸ್ಸನ್ನೂ ಸುಲಭವಾಗಿ ಸಾಧಿಸಲು ಅವಕಾಶವಾಗುವುದು. ಇಂತಹ ಸಮಾಜಜೀವನವನ್ನು ನಡಸಲು ಆರಂಭಿಸಿದ ಮೇಲೆ ಕ್ರಮೇಣ ಮನೆ, ಕೇರಿ, ಕುಟುಂಬ, ಕುಲ ಸಮಾಜಗಳು ಏರ್ಪಡುವುವು. ನಾಲ್ಕಾರು ಜನರು ಒಂದು ಕಡೆ ಸೇರಿದ ಕೂಡಲೆ ಒಬ್ಬ ಯಜಮಾನನ ಆವಶ್ಯಕತೆ ಕಂಡು ಬರುತ್ತದೆ. ಮೊದಮೊದಲು ಬಹು ಸಣ್ಣದಾಗಿ ಆರಂಭವಾದ ಇಂತಹ ವ್ಯವಸ್ಥಿತ ಗುಂಪುಗಳು ಅಥವಾ ಸಮಾಜಗಳು ಕ್ರಮವಾಗಿ ಬೆಳೆಯುತ್ತ ಬರುತ್ತವೆ. ಆಗ ಜನರ ಪರಸ್ಪರ ಸಂಬಂಧ ತೊಡಕಾಗುವುದು. ಕುಟುಂಬಗಳು ಹಳ್ಳಿಯಾಗಿ ಅಥವಾ ನಗರವಾಗಿ, ಹಳ್ಳಿಗಳೂ ನಗರಗಳೂ ಸೇರಿ ದೇಶಗಳಾಗುವುವು. ಹೀಗೆ ಸಮಾಜಜೀವನ ಬೆಳೆದಂತೆಲ್ಲಾ, ವ್ಯಕ್ತಿಯ ಮತ್ತು ಸಮಾಜದ ಸಂಬಂಧ ತೊಡಕಾದಂತೆಲ್ಲಾ, ಇದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಸರಕಾರವೆಂಬ ಸಂಸ್ಥೆಯೊಂದು ಅವತರಿಸಬೇಕಾಗುವುದು. ಈ ಸಂಸ್ಥೆ ಹುಟ್ಟಿದಮೇಲೆ ಆ ಸಮಾಜ ಅಥವಾ ದೇಶ ರಾಷ್ಟ್ರವೆನ್ನಿಸಿಕೊಳ್ಳುವುದು. ಈ "ರಾಷ್ಟ್ರ" ದಲ್ಲಿ ಆಡಳಿತವನ್ನು ನಿರ್ವಹಿಸುವ ಸರಕಾರ, ಆ ಆಡಳಿತಕ್ಕೊಳಗಾದ ಪ್ರಜಾಸಮುದಾಯ ಇವೆರಡೂ ಸೇರಿರುತ್ತವೆ. ರಾಷ್ಟ್ರವು ಪ್ರಗತಿಯನ್ನೈದ

ಬೇಕಾದರೆ ಅಲ್ಲಿಯ ಸರಕಾರ ಸಮರ್ಪಕವಾಗಿ ಕೆಲಸ ಮಾಡಬೇಕು. ಅಲ್ಲಿಯ ಪ್ರಜೆಗಳು ಪ್ರಜ್ಞಾವಂತರಾಗಿರಬೇಕು. ಸಮಾಜದ ಸುಖವು ವ್ಯಕ್ತಿಯ ಸುಖ, ಎಂಬ ಪೂರ್ಣ ಸಮಾಜ ಬುದ್ಧಿ ಅವರಲ್ಲಿ ಅಂಕುರಿಸಿದ ಮೇಲೆ ತಮಗೆ ಬೇಕಾದ ಮಹಾ ಕಾರ್ಯಗಳ ನಿರ್ವಾಹಕ್ಕಾಗಿ ಮತ್ತು ತಮ್ಮ ಶ್ರೇಯಃಸ್ಸಾಧನೆಗಾಗಿ ಅನೇಕ ಸಂಸ್ಥೆಗಳನ್ನು ಅವರು ಏರ್ಪಡಿಸಿಕೊಳ್ಳುವರು. ಇಂತಹ ಸಂಸ್ಥೆಗಳು ಆ ಸಮಾಜದ ಪ್ರಗತಿಯ ಅಂತಸ್ತನ್ನು ಸೂಚಿಸುವ ಚಿಹ್ನೆಗಳೆನ್ನಬಹುದು.

ಹೀಗೆ ಸಮಾಜದ ಹಿತಸಾಧನೆಗಾಗಿ ಮತ್ತು ಜನಸಾಮಾನ್ಯದ ಅಭಿವೃದ್ಧಿಗಾಗಿ ದುಡಿಯುವ ಮುಖ್ಯ ಸಾರ್ವಜನಿಕ ಸಂಸ್ಥೆಗಳಲ್ಲಿ ಸರಕಾರ ಪ್ರಧಾನವಾದುದು. ಸ್ಥೂಲವಾಗಿ ಸರಕಾರವೆಂದರೆ, ಸರಕಾರದ ನಾನಾ ಖಾತೆಗಳು, ಇಲಾಖೆಗಳು, ಅವುಗಳ ನೌಕರರು ನಮ್ಮ ಮನಸ್ಸಿಗೆ ತಟ್ಟನೆ ಹೊಳೆಯುತ್ತವೆ. ಇವು ಸರಕಾರದ ಹೊರಮೈ. ದೇಶದ ಜನರಲ್ಲಿ ಸಮಾಜಬುದ್ಧಿ ಅಂಕುರಿಸಿ ಅದು ಬೆಳೆದು ಸಮಾಜದ ಹಿತಸಾಧನೆಗಾಗಿ ನಡಸುವ ಏರ್ಪಾಡುಗಳ ವ್ಯವಸ್ಥೆಯೇ ಅದರ ಒಳಮೈ ಎನ್ನಬಹುದು. ನಾಗರಿಕ ಜೀವನಕ್ಕೆ ತಳಹದಿಯಂತಿರುವ ಕುಟುಂಬಗಳವರು ತಮ್ಮ ದೇಹದ ಮತ್ತು ಆಸ್ತಿಯ ರಕ್ಷಣೆಗಾಗಿ, ತಮ್ಮ ಆಶೋತ್ತರಗಳ ಸಾಧನೆಗಾಗಿ, ತಮ್ಮ ಸೌಖ್ಯವನ್ನು ಸುಲಭವಾಗಿ ಸಾಧಿಸಿಕೊಳ್ಳುವುದಕ್ಕಾಗಿ, ಒಟ್ಟುಗೂಡಿ, ಒಂದು ಅಧಿಕಾರಕ್ಕೆ ಒಳಪಟ್ಟು ಹೇಗೆ ರಾಷ್ಟ್ರನಿರ್ಮಾಣ ಮಾಡುವರೆಂಬುದರ ಇತಿಹಾಸವಾಗಲಿ, ಅಂತಹ ವ್ಯವಸ್ಥೆಯ ವರ್ಣನೆಯಾಗಲಿ ಇಲ್ಲಿ ಅಪ್ರಕೃತ. ಒಂದು ದೇಶದ ಸರಕಾರ ಯಾವ ತೆರನದೇ ಆಗಲಿ, ಅದು ಸಾಂಕುಶ ಪ್ರಭುತ್ವವಾಗಲಿ ನಿರಂಕುಶ ಪ್ರಭುತ್ವವಾಗಲಿ, ಅಲ್ಲಿ ಪ್ರಜಾಪ್ರಾತಿನಿಧ್ಯವಿರಲಿ ಇಲ್ಲದಿರಲಿ, ಗ್ರಾಮಪಂಚಾಯತಿಯಿಂದ ಹಿಡಿದು ಸಂಯುಕ್ತ ರಾಜ್ಯಾಂಗ ಸಂಸ್ಥೆಯವರೆಗೂ, ಆ ದೇಶದ ರಾಜಕೀಯ ಸಾಮಾಜಿಕ ಜೀವನವನ್ನು ಭದ್ರಗೊಳಿಸಿ ಜನರ ಕ್ಷೇಮವನ್ನು ಸಾಧಿಸುವುದೇ ಆ ಸರಕಾರದ ಮುಖ್ಯ ಕರ್ತವ್ಯ. ಪ್ರಜಾ ರಕ್ಷಣೆ, ಪ್ರಜಾಹಿತ ಸಾಧನೆ ಇವುಗಳಿಗಾಗಿ ಏರ್ಪಟ್ಟಿರುವ ಸಂಸ್ಥೆಯೇ ಸರಕಾರ. ಒಂದು ದೇಶದ ಸರಕಾರ ಆ ದೇಶದ ಒಂದು ಸುವ್ಯವಸ್ಥಿತವಾದ ದೊಡ್ಡ ಸಂಸ್ಥೆ. ಅಲ್ಲಿನ ಸಮಾಜದ ವ್ಯಕ್ತಿಗಳೆಲ್ಲರೂ ಈ ಸಂಸ್ಥೆಯ ಸದಸ್ಯರು. ಇದು ಐಚ್ಛಿಕವಾದುದಲ್ಲ ; ಅವಶ್ಯಕವಾದುದು ; ಮತ್ತು ಸ್ವಾಭಾವಿಕವಾದುದು. ಆದುದರಿಂದ "ಸರಕಾರ ಸಮಾಜದ ಕೈ ; ರಾಷ್ಟ್ರದ ಕಣ್ಣು ; ಪ್ರಜೆಗಳ ಪ್ರತಿನಿಧಿ ; ಪ್ರಜಾಸೇವೆಗಾಗಿ ಪ್ರಜೆಗಳಿಂದ ಏರ್ಪಟ್ಟಿರುವ ಅಧಿಕಾರ ಮಂಡಲ; ಯಂತ್ರ" ಎಂದು ಕೆಲವು ವಿದ್ವಾಂಸರು ಸರಕಾರವನ್ನು ವರ್ಣಿಸಿದ್ದಾರೆ.

ಈ ಸಂಸ್ಥೆ ಚೆನ್ನಾಗಿ ರೂಪುಗೊಳ್ಳದಿದ್ದಲ್ಲಿ ಅಲ್ಲಿಯ ಜನಜೀವನ ಉತ್ತಮಗೊಳ್ಳಲಾರದು. ದೇಶದಲ್ಲಿ ಶಾಂತಿ, ರಕ್ಷಣೆ, ತೃಪ್ತಿ ಇಲ್ಲದಿದ್ದಲ್ಲಿ ನಾಗರಿಕ ಜೀವನ ಸಾಧ್ಯವೆನಿಸಲಾರದು. ದೇಶ ಸುಖವಾಗಿರಬೇಕಾಗಿದ್ದರೆ ಸಂಪತ್ಸಾಧನೆಯ ಕಾರ್ಯ ಸರಿಯಾಗಿ ನಡೆಯಬೇಕು ; ಇದಕ್ಕಾಗಿ ಪ್ರಕೃತಿಯ ಆವರಣ, ಸಹಾಯ, ಅಲ್ಲಿಯ ಜನರು, ಅವರ ಲಕ್ಷಣಗಳು, ಅವರ ಕಾರ್ಯಕುಶಲತೆ, ಅವರ ರೀತಿನೀತಿಗಳು

ಎಷ್ಟು ಮುಖ್ಯಸಾಧನವೋ ಅಲ್ಲಿಯು ಸರಕಾರವೂ ಅಷ್ಟೇ ಮುಖ್ಯಸಾಧನ. ಸರಕಾರವಿಲ್ಲದೆ ಸಮಾಜದ ಅರ್ಥಸಾಧನಕಾರ್ಯ ಮುಂದುವರಿಯಲಾರದು. ಸಮಾಜದ ಶ್ರೇಯಸ್ಸಾಧನೆಗೆ ಸರಕಾರದ ಪ್ರತ್ಯಕ್ಷವಾದ ಕೈವಾಡ ಅವಶ್ಯಕ.

ಸರಕಾರ ಪ್ರಜೆಗಳ ಸಂಸ್ಥೆ. ಮಾನವನು ನಿರ್ಮಿಸಿದ ಮಹಾಸಂಸ್ಥೆ. ಪ್ರಜಾಹಿತವೇ ಸರಕಾರದ ಉದ್ದೇಶ. ಪ್ರಜಾಹಿತವೇ ಸರಕಾರದ ಹಿತ. ಪ್ರಜಾ ಹಿತಕ್ಕಾಗಿ ಮತ್ತು ಸಮಾಜದ ಅಭಿವೃದ್ಧಿಗಾಗಿ ಯಾವ ಯಾವ ಕಾರ್ಯಗಳು ಅವಶ್ಯಕವೋ ಅವೆಲ್ಲವನ್ನೂ ರಾಷ್ಟ್ರದ ಮುಖ್ಯ ಸಂಸ್ಥೆಯಾದ ಸರಕಾರ ನಿರ್ವಹಿಸ ಬೇಕು.

ಈ ಸರಕಾರ ಹುಟ್ಟಿದ ಬಗೆ, ಅದರ ಸ್ವರೂಪ, ಅದರ ಸ್ಥಾನ ಇವುಗಳ ವಿಷಯವನ್ನು ವಿದ್ವಾಂಸರು ವಿಸ್ತಾರವಾಗಿ ವರ್ಣಿಸಿದ್ದಾರೆ. ಸರಕಾರ ಮಾನವನ ಸಂಸ್ಥೆ ; ಕಾಲ ಕಾಲಕ್ಕೂ ರೂಪಗೊಳ್ಳುವಂತಹುದು ; ಪ್ರತಿ ಕ್ಷಣವೂ ಬೆಳೆಯುತ್ತಿರುವ ಸಂಸ್ಥೆ ; ಮಾನವನಿರ್ಮಿತವಾದ ಸಂಸ್ಥೆಯಾದುದರಿಂದ ನ್ಯೂನತೆಯೂ ಅದರಲ್ಲಿರಬಹುದು. ಮನುಷ್ಯರು, ತಮ್ಮ ಸುಖಕ್ಕಾಗಿ ಮತ್ತು ಶ್ರೇಯಸ್ಸಿಗಾಗಿ ಇದನ್ನು ನಿರ್ಮಾಣ ಮಾಡಿಕೊಂಡಿದ್ದಾರೆ ಎಂಬುದನ್ನು ನಾವು ನೆನಪಿನಲ್ಲಿಟ್ಟರೆ ಸಾಕು. ಸಮಾಜದ ಸುಖ ಮತ್ತು ಶ್ರೇಯಸ್ಸು ಲಭಿಸಬೇಕಾದರೆ ಅರ್ಥಸಾಧನೆಯು ಕಾರ್ಯದಿಂದ. ಆದುದರಿಂದ ಸರಕಾರವೆಂಬ ಮಾನವ ನಿರ್ಮಿತ ವಾದ ಮಹಾ ಸಂಸ್ಥೆಯನ್ನು ಆರ್ಥಿಕ ದೃಷ್ಟಿಯಿಂದ ನಾವು ಕಾಣಬೇಕು. ಅರ್ಥ ಸಂಪಾದನೆ, ತನ್ಮೂಲಕ ಸಮಾಜದ ಶ್ರೇಯಸ್ಸಾಧನೆ ಇವೇ ಸರಕಾರದ ಮುಖ್ಯ ಕರ್ತವ್ಯ. ಈ ಆರ್ಥಿಕ ದೃಷ್ಟಿಯಿಂದ ನಾವು ಸರಕಾರವನ್ನು ಪರೀಕ್ಷಿಸಿದರೆ ಈ ಯಂತ್ರಕ್ಕೆ ನಾಲ್ಕು ವಿಧವಾದ ಕರ್ತವ್ಯಗಳು ಅಥವಾ ಸ್ಥಾನಮಾನಗಳು ಇದ್ದಂತೆ ಕಂಡು ಬರುತ್ತದೆ.

ಸರಕಾರವು ಸಂಪತ್ಸಾಧನೆಗೆ ಕಾರಣಭೂತವಾದ ಮತ್ತು ಅವಶ್ಯಕವಾದ ಪರಿಸ್ಥಿತಿಗಳನ್ನು ಒದಗಿಸಿ ಕೊಡುತ್ತದೆ. ಸರಕಾರ ಸಂಪತ್ತನ್ನು ಒದಗಿಸಿ, ದೇಶ ದಲ್ಲಿನ ಪ್ರತಿಯೊಂದು ಅರ್ಥಸಾಧನ ಕಾರ್ಯವೂ ನಡೆಯುವಂತೆ ಅದರ ಆಡಳಿತವನ್ನು ನಡಸುತ್ತದೆ. ಹಾಗೆಯೇ ಸರಕಾರ ಇನ್ನೊಬ್ಬನೊಂದಿಗೆ ಸ್ಪರ್ಧಿಸಿ ತನ್ನ ವರಮಾನ ವನ್ನು ಅಭಿವೃದ್ಧಿಗೊಳಿಸಿಕೊಳ್ಳುವ ಬಂಡವಾಳಗಾರನಂತೆ ಅಥವಾ ಕೈಗಾರಿಕೆಯ ಆಡಳಿತಗಾರನಂತೆ, ವ್ಯಾಪಾರ ವಾಣಿಜ್ಯೋದ್ಯಮಗಳಲ್ಲಿ ಪ್ರವೇಶಿಸಿ ತನ್ನ ವರಮಾನ ವನ್ನು ಬಲಪಡಿಸಿಕೊಳ್ಳಲು, ಲಾಭ ಸಂಪಾದನೆ ಮಾಡಲು, ಪ್ರಯತ್ನಿಸುತ್ತದೆ. ಸರಕಾರ ದೇಶದಲ್ಲಿ ಉತ್ಪನ್ನವಾದ ಆದಾಯದಲ್ಲಿ ಒಂದು ಭಾಗವನ್ನು ಪಡೆಯಲು, ಆಸ್ತಿಯ ಹಕ್ಕುದಾರನಂತೆ ಪ್ರಯತ್ನಿಸುತ್ತದೆ. ಎಂದರೆ, ಆರ್ಥಿಕ ದೃಷ್ಟಿಯಿಂದ ಸರಕಾರದ ಅಧಿಕಾರ ಮತ್ತು ಕಾರ್ಯಕಲಾಪಗಳು ನಾಲ್ಕು ಮುಖವಾಗಿವೆಯೆನ್ನ ಬಹುದು : ಮೊದಲನೆಯದು ಸಂಪತ್ಸೃಷ್ಟಿ ; ಎರಡನೆಯದು ಸಾಧಿಸಿದ ಸಂಪತ್ತಿನ ಆಡಳಿತ; ಮೂರನೆಯದು ಬಂಡವಾಳಗಾರನಂತೆ ಲಾಭ ಸಂಪಾದನೆಯ ಪ್ರಯತ್ನ; ನಾಲ್ಕನೆಯದು ಉತ್ಪನ್ನವಾದ ವರಮಾನದ ಆರ್ಜನೆ.

ಈ ನಾಲ್ಕು ಮುಖವಾದ ಸರಕಾರದ ಕಾರ್ಯಕಲಾಪಗಳಲ್ಲಿ ನಾಲ್ಕನೆಯದಾದ ವರಮಾನದ ವಿಷಯವನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಾಗುವುದು. ಪ್ರತಿಯೊಂದು ಆರ್ಥಿಕ ಕಾರ್ಯಾಚರಣೆಯಲ್ಲಿಯೂ ಆದಾಯ ವೆಚ್ಚಗಳಿದ್ದೇ ಇರುತ್ತವೆ. ಸರಕಾರ ಮನುಷ್ಯನಿರ್ಮಿತವಾದ ಒಂದು ದೊಡ್ಡ ಆರ್ಥಿಕ ಸಂಸ್ಥೆಯಾದುದರಿಂದ, ಅದಕ್ಕೂ ಹೆಚ್ಚಿನ ಆಯವ್ಯಯಗಳಿರುತ್ತವೆ. ಸಾಮಾನ್ಯವಾಗಿ, ದೊಡ್ಡ ದೊಡ್ಡ ಕಾರ್ಯಭಾರಗಳನ್ನು ನಿರ್ವಹಿಸುವ ವ್ಯಕ್ತಿಗಳ ಅಥವಾ ಉದ್ಯಮ ಸಂಸ್ಥೆಗಳ ಆದಾಯ ವೆಚ್ಚಗಳ ರೀತಿಯಲ್ಲಿಯೇ ಸರಕಾರದ ಆದಾಯ ವೆಚ್ಚಗಳೂ ಇರುತ್ತವೆ.

ಆದರೆ ಸಾಮಾನ್ಯ ಮನುಷ್ಯನ ಆರ್ಥಿಕ ರೀತಿನೀತಿಗಳಿಗೂ, ಸರಕಾರದ ರೀತಿನೀತಿಗಳಿಗೂ ಕೆಲವು ವ್ಯತ್ಯಾಸಗಳಿವೆ—

೧. ಒಬ್ಬ ವ್ಯಕ್ತಿ ಅಥವಾ ಸಂಸ್ಥೆ ಒದಗಿಸುವ ಸೌಕರ್ಯಗಳಿಗಾಗಲಿ, ಮಾರುವ ವಸ್ತುಗಳಿಗಾಗಲಿ ಅವರು ವಿಧಿಸುವ ಮೌಲ್ಯವನ್ನು ಎಲ್ಲ ಪ್ರಜೆಗಳೂ ಕಡ್ಡಾಯವಾಗಿ ಕೊಡಲೇಬೇಕೆಂಬ ನಿರ್ಬಂಧವಿಲ್ಲ. ಅವರು ತಮಗೆ ಬೇಕಾಗುವ ವಸ್ತುಗಳ ಮೌಲ್ಯವನ್ನು ತಮ್ಮ ಚೈತನ್ಯಕ್ಕೆ ಸರಿಯಾಗಿ, ತಮ್ಮ ಅನುಕೂಲ ಕ್ಕೊದಗುವ ಹಾಗೆ ಕೊಡಬಹುದು. ಆದರೆ ಸರಕಾರದಿಂದ ಪ್ರಜೆಗಳ ಸೌಕರ್ಯಕ್ಕಾಗಿ ತಗಲುವ ವೆಚ್ಚವನ್ನು ಕೂಡಿಸಲು ಅವರಮೇಲೆ ವಿಧಿಸುವ ಹಣವನ್ನು ಮಾತ್ರ, ಅನುಕೂಲವಿರಲಿ ಇಲ್ಲದಿರಲಿ, ಜನರಿಗೆ ಬೇಕಾಗಲಿ ಬೇಡದಿರಲಿ, ಕೊಟ್ಟೇ ಕೊಡಬೇಕು.

೨. ವ್ಯಕ್ತಿಯ ಆರ್ಥಿಕ ಕಾರ್ಯಾಚರಣೆಯ ಉದ್ದೇಶ ಮುಖ್ಯವಾಗಿ ಲಾಭ ಸಂಪಾದನೆ, ಸರಕಾರದ ಮುಖ್ಯ ಉದ್ದೇಶ ಲಾಭ ಸಂಪಾದನೆಯಲ್ಲ. ಪ್ರಜೆಗಳ ರಕ್ಷಣೆ ಮತ್ತು ಅವರ ಸುಖ ಇವೇ ಸರಕಾರದ ಅಂತಿಮ ಗುರಿ. ಸರಕಾರ ಈ ಗುರಿಯನ್ನು ಸಾಧಿಸುವುದಕ್ಕೆ ದೇಶದಲ್ಲಿ ಶಾಂತಿ ಶಿಸ್ತು ಇರುವಂತೆ ತಕ್ಕ ಏರ್ಪಾಡು ಮಾಡಬೇಕು. ಅಲ್ಲಿ ಆರೋಗ್ಯ ಸಂಪತ್ತು ಮೆರೆಯುವಂತೆ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು. ಇದಕ್ಕಾಗಿ ಸರಕಾರಕ್ಕೆ ಹಣಬೇಕು. ಆದರೆ, ದ್ರವ್ಯಾರ್ಜನೆಯೇ ಸರಕಾರದ ಪರಮೋದ್ದೇಶವಲ್ಲ. ಉದ್ದೇಶ ಸಾಧನೆಗೆ ಕಾರಣರೂಪವಾದ ಮುಖ್ಯ ಸಾಮಗ್ರಿ ಮಾತ್ರ.

೩. ಸಾಮಾನ್ಯ ವ್ಯಕ್ತಿಗಳು ಅಥವಾ ವ್ಯಾಪಾರ ಸಂಸ್ಥೆಗಳು ಹಣವಿದ್ದಷ್ಟು ಮಾತ್ರ ಕಾರ್ಯಾಚರಣೆಯನ್ನು ಕೈಗೊಳ್ಳಬೇಕು. ಇಂತಹ ನಿರ್ಬಂಧ ಮತ್ತು ಆವಶ್ಯಕತೆಗಳು ಸರಕಾರಕ್ಕಿಲ್ಲ. ತನ್ನ ಕರ್ತವ್ಯನಿರ್ವಹಣೆಗಾಗಿ ಬೇಕಾದ ಹಣವನ್ನು ಪಡೆಯಲು ಅದಕ್ಕೆ ಶಕ್ತಿ ಸಾಮರ್ಥ್ಯಗಳಿವೆ.

ಹೀಗೆ ಸರಕಾರದ ಆರ್ಥಿಕ ಸ್ವರೂಪಕ್ಕೂ ಸಾಮಾನ್ಯ ಜನರ ರೀತಿಗೂ ಕೆಲವು ವ್ಯತ್ಯಾಸಗಳಿವೆ. ಸರಕಾರ ಸಂಪಾದಿಸುವ ಆದಾಯ ಮತ್ತು ಅದು ಮಾಡುವ ವೆಚ್ಚ ಮೊದಲು ತಿಳಿಸಿದಂತೆ ಪ್ರಜಾಹಿತಕ್ಕೆ ಕಾರಣರೂಪವಾದದ್ದು. ಹೀಗೆ ಸರಕಾರದ ಅಂತಿಮ ಗುರಿಯನ್ನು ಸಾಧಿಸುವುದಕ್ಕೆ ಸಹಾಯಭೂತವಾದ ಹಣಕಾಸಿನ ವ್ಯವಸ್ಥೆ ಬಹು ಮುಖ್ಯವಾದುದು. ಸರಕಾರದ ಎಲ್ಲ ವಿಧವಾದ

ಕರ್ತವ್ಯನಿರ್ವಹಣೆಗೂ ಹಣಕಾಸಿನ ವ್ಯವಸ್ಥೆ ಅತ್ಯಾವಶ್ಯಕ. ಯಾವ ಸರಕಾರ ತನ್ನ ಆಯವ್ಯಯವನ್ನು ಕ್ರಮವಾದ ರೀತಿಯಲ್ಲಿ ನೋಡಿಕೊಳ್ಳುವುದೋ ಅದು ಉತ್ತಮವಾದ ಸರಕಾರವೆನಿಸಿಕೊಳ್ಳುವುದು. ಒಂದು ರಾಷ್ಟ್ರದ ಹಿತ ಆ ಸರಕಾರದ ಆಯವ್ಯಯದ ಸ್ಥಿತಿಯನ್ನು ಅವಲಂಬಿಸಿರುತ್ತದೆ. ಒಂದು ಕುಟುಂಬದ ಯಜಮಾನನು ತನ್ನ ಸಂಪಾದನೆಯನ್ನೂ ವೆಚ್ಚವನ್ನೂ ಅಳತೆಮಾಡಿ ಮುಂದಾಲೋಚನೆಯಿಂದ ವರ್ತಿಸಿದರೆ, ಆ ಕುಟುಂಬ ಮುಂದಕ್ಕೆ ಬರುವಂತೆಯೇ ಲಕ್ಷಾಂತರ ಕುಟುಂಬಗಳ ರಕ್ಷಣೆ ಮತ್ತು ಶ್ರೇಯಸ್ಸನ್ನು ಸಾಧಿಸಬೇಕಾಗಿರುವ ಸರಕಾರ ನಿಯಮಬದ್ಧವಾದ ರೀತಿಯಲ್ಲಿ ಒಂದು ಕ್ರಮವನ್ನು ಅನುಸರಿಸಿ ಆಯವ್ಯಯವನ್ನು ವ್ಯವಸ್ಥೆಗೊಳಿಸಿ ಕೊಂಡರೆ, ತನ್ನ ಧ್ಯೇಯವನ್ನು ಸಾಧಿಸಲು ಶಕ್ತವಾಗುವುದು.

ಸಮಾಜದ ಅಭಿವೃದ್ಧಿಗೆ ಮೂಲಾಧಾರವಾದ ಸರಕಾರದ ಹಣಕಾಸಿನ ಸ್ಥಿತಿ, ಒಂದು ಕ್ರಮ, ನೀತಿ, ಶಿಸ್ತು ಇವುಗಳಿಗೆ ಒಳಪಟ್ಟಿರುತ್ತದೆ. ಇಂತಹ ಸಾರ್ವಜನಿಕ ಸಂಸ್ಥೆಯಾದ ಸರಕಾರದ ಹಣಕಾಸನ್ನು ವಿಮರ್ಶೆ ಮಾಡಬೇಕಾದರೆ, ಆ ಕ್ರಮ, ನೀತಿ, ಶಿಸ್ತು ಇವುಗಳ ಜ್ಞಾನ ಆವಶ್ಯಕ.

ಪ್ರಜಾಹಿತದ ಧ್ಯೇಯವು ಬಲಗೊಂಡು, ಸರಕಾರದ ಕಾರ್ಯ ಕ್ಷೇತ್ರ ವಿಸ್ತಾರವಾಗಿ, ಅದರ ವ್ಯಾಪ್ತಿ ವಿಶಾಲವಾದಂತೆಲ್ಲಾ ಸರಕಾರದ ಹಣಕಾಸಿನ ಪದ್ಧತಿಯೂ ಕೂಡ ವಿಸ್ತಾರವಾಗುವುದು ಸಹಜ. ಈ ಪದ್ಧತಿಯು ಬೆಳೆದಂತೆಲ್ಲಾ ಅದು ಅನುಸರಿಸುವ ನೀತಿ ನಿಯಮಗಳೂ ಬಲವಾಗುವುವು. ಸರಕಾರ ತನ್ನ ಹಣ ಕಾಸಿನ ವಿಚಾರದಲ್ಲಿ ಹೇಗೆ ನಡೆಯುತ್ತದೆ, ನಡೆಯಬೇಕು, ಎಂಬ ಅಂಶಗಳನ್ನು ಅರ್ಥಶಾಸ್ತ್ರ ಸ್ಪಷ್ಟಪಡಿಸುತ್ತದೆ. ದೇಶದ ಹಣಕಾಸಿನ ಒಂದು ಭಾಗವಾದ ಸರಕಾರದ ಹಣಕಾಸಿನ ವಿಷಯವನ್ನು ಮುಂದಿನ ಕೆಲವು ಅಧ್ಯಾಯಗಳಲ್ಲಿ ತಿಳಿಸಲು ಪ್ರಯತ್ನಪಟ್ಟಿದೆ.

ಸಾರ್ವಜನಿಕ ಮಹಾಸಂಸ್ಥೆಯಾದ ಸರಕಾರಕ್ಕೆ ಎಲ್ಲಿಂದ ಆದಾಯ ಬರುತ್ತದೆ, ಅದರ ವೆಚ್ಚದ ಬಾಬುಗಳೇನು, ಆದಾಯ ವೆಚ್ಚಗಳ ವಿಚಾರದಲ್ಲಿ ಅನುಸರಿಸುವ ಕ್ರಮ ರೀತಿ ನೀತಿಗಳೇನು, ಎಂಬ ವಿಷಯಗಳನ್ನು ಸೂಕ್ಷ್ಮವಾಗಿ ಇಲ್ಲಿ ತಿಳಿಸಲಾಗುವುದು. ಈ 'ಸಾರ್ವಜನಿಕ ಹಣಕಾಸಿನ' ವಿಷಯವನ್ನು ಈ ಕೆಳಗೆ ಕಂಡ ರೀತಿಯಲ್ಲಿ ವಿಂಗಡಿಸಲಾಗಿದೆ.—

೧. ಸಾರ್ವಜನಿಕ ವೆಚ್ಚ
೨. ಸಾರ್ವಜನಿಕ ಆದಾಯ
೩. ಸಾರ್ವಜನಿಕ ಸಾಲಸೋಲಗಳು.

ಇವುಗಳಿಗೆ ಸಂಬಂಧಪಟ್ಟ ಕೆಲವು ಸಾಮಾನ್ಯ ನಿಯಮಗಳನ್ನು ಮೊದಲು ಸೂಚಿಸಿ, ಆಮೇಲೆ ವಾಸ್ತವಿಕವಾದ ಅಂಕಿ ಮತ್ತು ಅಂಶಗಳ ದೃಷ್ಟಿಯಿಂದ ಸಾರ್ವಜನಿಕ ಹಣಕಾಸಿನ ವ್ಯವಸ್ಥೆಯನ್ನು ವಿಮರ್ಶೆ ಮಾಡಲಾಗಿದೆ. ಎರಡನೆಯ ಭಾಗದಲ್ಲಿ ಇಂಡಿಯಾದೇಶಕ್ಕೆ ಸಂಬಂಧಪಟ್ಟ ಆಯವ್ಯಯ ವ್ಯವಸ್ಥೆಯ ಮುಖ್ಯ ವಿಷಯಗಳನ್ನು

ಪರ್ಯಾಲೋಚಿಸಲಾಗಿದೆ. ಕೊನೆಯದಾಗಿ, ಮೂರನೆಯ ಭಾಗದಲ್ಲಿ ಮೈಸೂರು ಸಂಸ್ಥಾನದ ಆಯವ್ಯಯ ನೀತಿಯನ್ನು ವಿವರಿಸಲಾಗಿದೆ.

ಸಾರ್ವಜನಿಕ ಹಣಕಾಸಿನ ವ್ಯವಸ್ಥೆಗೆ ಸಂಬಂಧಪಟ್ಟ ನಿಯಮಗಳನ್ನು ವಿವರಿಸುವಾಗ ಅನುಸರಿಸಿರುವ ಕ್ರಮವನ್ನೇ ಹೆಚ್ಚುಕಡಮೆ ಎರಡು ಮೂರನೆಯ ಭಾಗಗಳಲ್ಲೂ ಅನುಸರಿಸಲಾಗಿದೆ.

ಸಾಮಾನ್ಯವಾಗಿ ಸಾರ್ವಜನಿಕ ಹಣಕಾಸಿನ ವ್ಯವಸ್ಥೆಗೆ ಸಂಬಂಧಪಟ್ಟ ನಿಯಮಗಳನ್ನು ಅದರ ವೆಚ್ಚ ಹುಟ್ಟುವಳಿ ಸಾಲಸೋಲಗಳು ಏನು, ಹೇಗೆ, ಎಂಬುದರ ವಿವಕ್ಷೆಯ ಮೂಲಕ ವಿವರಿಸುವುದು ವಾಡಿಕೆಯಲ್ಲಿದೆ. ಇದರ ನಿಯಮವನ್ನು ತಿಳಿಯಬೇಕಾದರೆ ಮತ್ತು ಸಾರ್ವಜನಿಕ ಹಣಕಾಸಿನ ವ್ಯವಸ್ಥೆಯನ್ನು ವಿಮರ್ಶಿಸಬೇಕಾದರೆ, ಈ ಭಾಗಗಳನ್ನು ಸಮನ್ವಯಮಾಡುವ ತತ್ವವನ್ನು ಮೊದಲು ಅರಿಯಬೇಕು. ಈ ಹಣಕಾಸಿನ ಬೇರೆ ಬೇರೆ ಭಾಗಗಳನ್ನು ಸಮನ್ವಯಮಾಡಿ ಐಕ್ಯವನ್ನುಂಟುಮಾಡುವ ತತ್ವವನ್ನು, ಸಮಾಜದ ಹಿತತತ್ವವೆಂದು ಕರೆಯಬಹುದು. ಸಾರ್ವಜನಿಕ ಹಣಕಾಸಿನ ವಿಂಗಡಣೆ ಮಾಡುವ ಮತ್ತು ಅದರ ನಿಯಮಗಳನ್ನು ಉಲ್ಲೇಖಿಸುವ ಮೊದಲು, ಮುಖ್ಯವಾದ ಆ ಸಮಾಜದ ಹಿತತತ್ವವನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಾಗುವುದು.

# ಪ್ರಕರಣ ೨

## ಸಮಾಜದ ಹಿತತತ್ವ

ಜನತೆಯ ಹಿತಕ್ಕಾಗಿ ದುಡಿಯುವುದು ಸರಕಾರದ ಕೆಲಸ. ಸರಕಾರದ ಈ ಉದ್ದೇಶಸಾಧನೆಗಾಗಿ ಮತ್ತು ಕಾರ್ಯನಿರ್ವಾಹಕಕ್ಕಾಗಿ ಹಣಕಾಸು ಬೇಕಾಗುವುದು ಸಹಜ. ಈ ಹಣ ಒದಗಿಸಿಕೊಡಬೇಕಾದವರು ಆ ಸರಕಾರದ ಕಾರ್ಯಗಳಿಂದುಂಟಾಗುವ ಫಲವನ್ನು ಅನುಭವಿಸುವ ಪ್ರಜೆಗಳು. ತಮ್ಮ ಸುಖಕ್ಕಾಗಿ ಮತ್ತು ಅಭ್ಯುದಯಕ್ಕಾಗಿ ಏರ್ಪಟ್ಟ ಕೆಲಸಗಳನ್ನು ನಡಸುವುದಕ್ಕಾಗಿ ಅವರು ಸರಕಾರಕ್ಕೆ ಹಣ ಒದಗಿಸಿಕೊಡಬೇಕಾದುದು ಕರ್ತವ್ಯವೆಂದೇ ಭಾವಿಸಬೇಕು. ಹಾಗೆಯೇ ಪ್ರಜೆಗಳಿಂದ ಹಣ ಸಂಗ್ರಹಿಸುವುದರಲ್ಲಿಯೂ, ಅದನ್ನು ವೆಚ್ಚಮಾಡುವುದರಲ್ಲಿಯೂ, ಒಂದು ಕ್ರಮವನ್ನು ಅನುಸರಿಸಬೇಕಾದುದೂ ಸರಕಾರದ ಧರ್ಮ. ಆದುದರಿಂದ ಸರಕಾರ ಪ್ರಜೆಗಳಿಂದ ಹಣ ಸಂಗ್ರಹಮಾಡುವ ಮಾರ್ಗಗಳು, ಅದನ್ನು ವೆಚ್ಚಮಾಡುವ ವಿಧಾನ, ಇವು ಯಾವಾಗಲೂ ಅರ್ಥಶಾಸ್ತ್ರದ ಕೆಲವು ನಿಯಮಗಳಿಗೆ ಒಳಪಟ್ಟಿರುತ್ತವೆ.

ಸರಕಾರ ತನ್ನ ವೆಚ್ಚವನ್ನು ಆದಷ್ಟು ತಗ್ಗಿಸಿ ಜನರಿಂದ ಅಲ್ಪವಾದ ತೆರಿಗೆಯನ್ನು ತೆಗೆದುಕೊಳ್ಳಬೇಕು ; ಇದರಿಂದ ದೇಶದ ಪ್ರಜೆಗಳಿಗೆ ಒಳ್ಳೆಯದಾಗುವುದು ; ಇದೇ ಅತ್ಯುತ್ತಮವಾದ ಮಾರ್ಗ—ಎಂದು ಹೇಳುತ್ತಿದ್ದ ಕಾಲ ಹೋಯಿತು. ಈ ತತ್ವ ಹಿಂದಿನ ಸಂಪ್ರದಾಯಕ್ಕೆ ಸೇರಿದುದು. ತೆರಿಗೆಯೆಂಬುದು ಒಂದು ಅನರ್ಥಕಾರಿ ಎಂಬ ಭಾವನೆಯಿಂದ ಈ ಅಭಿಪ್ರಾಯ ತಲೆದೋರಿರಬಹುದು. ಈಚೆಗೆ, ಸಾರ್ವಜನಿಕಸಂಸ್ಥೆಗಳ ವೆಚ್ಚಕ್ಕೆ ತೆರಿಗೆಯೇ ಮೂಲಾಧಾರ ಎಂಬ ಭಾವನೆ ತಲೆದೋರಿದೆ. ಅದರಿಂದ ಸರಕಾರದ ವೆಚ್ಚವನ್ನು ಹೆಚ್ಚಿಸುವುದು ಅನರ್ಥಕಾರಿ ಎಂಬ ನೆವಕ್ಕೆ ಈಗ ಅವಕಾಶವಿಲ್ಲದೆ ಹೋಗಿದೆ. ತೆರಿಗೆಯೆಂಬುದೇ ಹೇಯವಾದುದು ಎಂದು ಭಾವಿಸುವುದು ತಪ್ಪು ಎಂದು ಜನರು ಈಚೆಗೆ ಅರಿತಿದ್ದಾರೆ.

ಸರಕಾರ ಮಾಡುವ ವೆಚ್ಚವೆಲ್ಲವೂ ಸಾರ್ವಜನಿಕರ ದೃಷ್ಟಿಯಿಂದ ನ್ಯಾಯವಾದುದೆಂದಾಗಲಿ ಆವಶ್ಯಕವಾದುದೆಂದಾಗಲಿ ಹೇಳುವುದು ಕಷ್ಟ. ಅನಾವಶ್ಯಕವಾದ ಯುದ್ಧಗಳಿಗಾಗಿ ಹೆಚ್ಚಾಗಿ ವೆಚ್ಚಮಾಡಿ ಅದರ ಹೊರೆಯನ್ನು ಜನರ ಮೇಲೆ ಹೇರುವ ಕ್ರಮ ನ್ಯಾಯಸಂಮತವಾದುದಲ್ಲ. ಆದರೆ ಜನಜೀವನದ ಮಾರ್ಗವನ್ನು ಉತ್ತಮಗೊಳಿಸಲು ಸಾಧಕವಾದ ವಿಶೇಷ ಕಾರ್ಯಗಳಿಗಾಗಿ ತಗಲುವ ವೆಚ್ಚ ಕೆಲವುಬಾರಿ ಹೆಚ್ಚಾದರೂ ಅದರಿಂದ ಯಾರೂ ಕಳವಳಕ್ಕೆ ಈಡಾಗಬೇಕಾದುದಿಲ್ಲ. ಇಂತಹ ವೆಚ್ಚ ದಿನೇ ದಿನೇ ಏರುತ್ತಿರುವುದು ಜನರ ಗಮನಕ್ಕೆ

ಬಂದಿದೆ. ಸರಕಾರದ ವೆಚ್ಚದ ಹಾಗೆಯೇ ಸಾಲ ಸೋಲಗಳ ನೀತಿಯ ವಿಷಯ ದಲ್ಲಿಯೂ ಭಿನ್ನಾಭಿಪ್ರಾಯಗಳಿಗೆ ಅವಕಾಶವಿದೆ. ಆದರೆ ಸರಕಾರದ ವೆಚ್ಚ, ಅದರ ತೆರಿಗೆಯ ಕ್ರಮ, ಸಾಲದ ರೀತಿ, ಇವುಗಳಿಗೆಲ್ಲ ಅನ್ವಯಿಸುವ ಸಾಮಾನ್ಯ ನಿಯಮ ಒಂದಿದೆ. ಸಾರ್ವಜನಿಕ ಹಣಕಾಸು ಈ ನಿಯಮಕ್ಕೆ ಒಳಪಟ್ಟಿರಬೇಕೆಂಬ ವಿಷಯದಲ್ಲಿ ಮಾತ್ರ ಭಿನ್ನಾಭಿಪ್ರಾಯವಿಲ್ಲ. ಆ ನಿಯಮವನ್ನು ಸಾಮಾನ್ಯವಾಗಿ "ಸಮಾಜದ ಪರಮ ಹಿತತತ್ವ" (Maximum Social Advantage) ಎಂದು ಹೇಳಬಹುದು. ಈ ತತ್ವವೇ ಸರಕಾರದ ಆಯವ್ಯಯದ ನೀತಿಯನ್ನು ಪರೀಕ್ಷಿಸುವ ಒರೆಗಲ್ಲು.

ಸರಕಾರದ ಆಯವ್ಯಯ ನೀತಿಯನ್ನು ವಿಮರ್ಶೆಮಾಡುವಾಗ, ಆ ಮಹಾ ಸಂಸ್ಥೆಯ ಹುಟ್ಟುವಳಿ, ವೆಚ್ಚ ಮತ್ತು ಸಾಲ ಸೋಲಗಳು—ಹೀಗೆ ವಿಂಗಡಿಸಿ, ಇವು ಗಳಿಗೆ ಅನ್ವಯಿಸುವ ಸಾಮಾನ್ಯ ನಿಯಮಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವರ್ಣಿಸುವುದು ಸಂಪ್ರದಾಯವಾಗಿ ಬಂದಿದೆ. ಈ ಮಾರ್ಗವನ್ನೇ ಈ ಗ್ರಂಥದ ಮುಂದಿನ ಪ್ರಕರಣಗಳಲ್ಲಿಯೂ ಅನುಸರಿಸಿದೆ. ಈ ಪ್ರತ್ಯೇಕ ನಿಯಮಗಳ ಪರಿಚಯದಿಂದ ಸಾರ್ವಜನಿಕ ಸಂಸ್ಥೆಗಳ ವೆಚ್ಚದ ಕ್ರಮ ಸರಿಯೋ ಅಲ್ಲವೋ ಎಂದಾಗಲಿ, ತೆರಿಗೆಯ ರೀತಿ ಸಮರ್ಪಕವಾಗಿದೆಯೋ ಇಲ್ಲವೋ ಎಂದಾಗಲಿ, ಸಾಲದ ಕಟ್ಟುಕಟ್ಟಳೆಗಳು ಶಾಸ್ತ್ರಸಮ್ಮತವಾಗಿವೆಯೋ ಇಲ್ಲವೋ ಎಂದಾಗಲಿ ತಿಳಿಯುವುದಕ್ಕೆ ಸಾಧ್ಯವಾದರೂ, ಈ ಭಾಗಗಳೆಲ್ಲವೂ ಒಂದಕ್ಕೊಂದು ಹೊಂದಿ ಕೊಂಡಿರಬೇಕೆಂಬ ಮುಖ್ಯಾಂಶವನ್ನು ಮಾತ್ರ ನಾವು ಗಮನದಲ್ಲಿಟ್ಟಿರಬೇಕು. ಸರಕಾರದ ಹುಟ್ಟುವಳಿ, ವೆಚ್ಚ, ಸಾಲಸೋಲಗಳು, ಇವೆಲ್ಲವೂ, ದೇಶದ ಸೌಖ್ಯ, ಅದರ ಭದ್ರತೆ, ಅಲ್ಲಿಯ ಪ್ರಜೆಗಳ ಹಿತ, ಇವುಗಳಿಗಾಗಿ ಎಂಬ ವಿಷಯವನ್ನು ನಾವೆಂದಿಗೂ ಮರೆಯಬಾರದು. ಈ ಮೂಲತತ್ವ ಎಲ್ಲ ಭಾಗಗಳಿಗೂ ಅನ್ವಯಿಸು ವುದು. ಸಾರ್ವಜನಿಕ ಸಂಸ್ಥೆಗಳ ಆಯವ್ಯಯದ ಕಟ್ಟುಕಟ್ಟಳೆಗಳು ಸಮಾಜ ಶಾಸ್ತ್ರಗಳಲ್ಲಿ ಅಡಗಿರುವ ಈ ಮೂಲತತ್ವವನ್ನು ಎಂದರೆ "ಸಮಾಜದ ಪರಮ ಹಿತತತ್ವ" ವನ್ನು ಅವಲಂಬಿಸಿರಬೇಕು.

ಸರಕಾರದ ಹುಟ್ಟುವಳಿ ಮತ್ತು ವೆಚ್ಚ ನಾನಾಮುಖವಾಗಿರುವುವು. ದೇಶದ ವ್ಯವಸಾಯ ಕೈಗಾರಿಕೆಗಳಿಗಾಗಿ ಹಣ ಬೇಕು, ದೇಶದ ರಕ್ಷಣೆಗಾಗಿ ಮತ್ತು ಇತರ ಸೌಕರ್ಯಗಳಿಗಾಗಿ ವ್ಯಯ ಮಾಡಬೇಕು; ಪ್ರಜೆಗಳ ಮೇಲೆ ತೆರಿಗೆ ಯನ್ನು ವಿಧಿಸಿ, ಸುಂಕವನ್ನೆತ್ತಿ, ಲಾಭದಾಯಕವಾದ ವಾಣಿಜ್ಯೋದ್ಯಮಗಳನ್ನು ಕೈಗೊಂಡು ಹಣವನ್ನು ಕೂಡಿಸಬೇಕು. ಕೆಲಸಮಾಡುವ ನೌಕರರಿಗೆ ಸಂಬಳ ಕೊಡಬೇಕು. ಹೀಗೆ ಸರಕಾರ ನಾನಾವಿಧವಾದ ಕಾರ್ಯವ್ಯವಹಾರಗಳನ್ನು ಕೈಗೊಳ್ಳಬೇಕು. ಇದರಿಂದ ಜನಜೀವನದಲ್ಲಿ ಅನೇಕವಿಧವಾದ ವ್ಯತ್ಯಾಸಗಳು ತಲೆದೋರುವುದು ಸಹಜ. ಹೀಗೆ ಒಂದು ಸಮಾಜದಲ್ಲಿ ತಲೆದೋರುವ ವ್ಯತ್ಯಾಸ ಗಳು ಆ ಸಮಾಜದ ಹಿತವನ್ನು, ಅಭ್ಯುದಯವನ್ನು, ಅದರ ಶ್ರೇಯಸ್ಸನ್ನು ಸಾಧಿಸ ಬಲ್ಲವೇ ಎಂಬುದನ್ನು ನಾವು ವಿಮರ್ಶಿಸಬೇಕು. ಈ ವ್ಯತ್ಯಾಸಗಳು ಸಮಾಜದ

ಅಭ್ಯುದಯಕ್ಕೆ ಸಾಧಕವಾಗುವ ಪಕ್ಷದಲ್ಲಿ ಅದಕ್ಕೆ ಕಾರಣಭೂತವಾದ ಹುಟ್ಟುವಳಿಯ ಕ್ರಮ, ವೆಚ್ಚದ ರೀತಿ, ಸಾಲ ಸೋಲದ ನೀತಿ ಇವು ನ್ಯಾಯಬದ್ಧವಾದವೆಂದು ನಾವು ಧಾರಾಳವಾಗಿ ಒಪ್ಪಬಹುದು.

ಸಾಮಾನ್ಯವಾಗಿ ಯುದ್ಧಕಾಲದಲ್ಲಿ ಹೆಚ್ಚು ಹಣ ಬೇಕಾಗುತ್ತದೆ. ಇದನ್ನು ಸಾಲಮಾಡಿಯಾಗಲಿ ತೆರಿಗೆ ಹಾಕಿಯಾಗಲಿ ಪಡೆಯಬಹುದು. ಪ್ರಜೆಗಳ ಮೇಲೆ ತೆರಿಗೆ ಹಾಕುವುದು ಅನ್ಯಾಯವಾದುದು ಎಂಬ ಭಾವನೆ ಹೆಚ್ಚು ಜನರಲ್ಲಿ ಮೂಡಿದೆ. ಹೀಗೆ ಅನ್ಯಾಯವಾದುದೆಂಬ ತೆರಿಗೆಯನ್ನು ಹಾಕಿ ಹಣ ಅರ್ಜನೆ ಮಾಡುವ ಮಾರ್ಗ ಸರಿಯಾದುದೇ, ಅದರಿಂದ ಪ್ರಜಾಕ್ಷೇಮ ದೊರೆಯುವುದೇ, ಎಂಬುದನ್ನು ಸೂಕ್ಷ್ಮವಾಗಿ ಇಲ್ಲಿ ಪರಿಶೀಲನೆ ಮಾಡಬಹುದು. ಯುದ್ಧಕಾಲದಲ್ಲಿ ವ್ಯಾಪಾರ ಮತ್ತು ವಾಣಿಜ್ಯೋದ್ಯಮಗಳಲ್ಲಿ ನಿರತರಾದ ಸಮಾಜದ ಒಂದು ಭಾಗದ ಪ್ರಜೆಗಳ ಮೇಲೆ ಹೆಚ್ಚು ತೆರಿಗೆಗಳನ್ನು ಹಾಕಿ ಸರಕಾರ ತನಗೆ ಬೇಕಾದ ಹಣವನ್ನು ಪಡೆಯುವುದು ನಮ್ಮ ಅನುಭವಕ್ಕೆ ಬಂದಿದೆ ಇಂತಹ ತೆರಿಗೆಗಳಿಂದ ಸಮಾಜಕ್ಕೆ ಯಾವ ವಿಧದಲ್ಲಿಯೂ ತೊಂದರೆಯಾಗಲಾರದು ; ಏಕೆಂದರೆ, ಸಮಾಜದ ಆ ಒಂದು ಭಾಗದ ಪ್ರಜೆಗಳಿಗೆ ಯುದ್ಧ ಒದಗದಿದ್ದರೆ, ತಮ್ಮ ವ್ಯಾಪಾರದಿಂದಾಗಲಿ ಕೈಗಾರಿಕೆಗಳಿಂದಾಗಲಿ ಇಷ್ಟು ಅಪಾರವಾದ ಲಾಭ ಬರುತ್ತಿರಲಿಲ್ಲ. ಅವರಿಗೆ ಬರುವ ಲಾಭ ಕೆಲವು ಅನಿವಾರ್ಯವಾದ ಪರಿಸ್ಥಿತಿಗಳಿಂದ ಒದಗಿ ಬಂದುದೆಂಬುದರಲ್ಲಿ ಸಂದೇಹವಿಲ್ಲ. ಹೀಗೆ ನ್ಯಾಯಬದ್ಧವಾಗಿಲ್ಲದ ರೀತಿಯಲ್ಲಿ ಬಂದ ಈ ಹೆಚ್ಚು ಹಣ, ಪುನಃ ಸಮಾಜಕ್ಕೇ ಸೇರತಕ್ಕದ್ದು ನ್ಯಾಯ. ಹೀಗೆ ತೆರಿಗೆ ಹಾಕಿ ಸರಕಾರ ಹಣ ಪಡೆಯಲು ಪ್ರಯತ್ನಿಸುವುದರಿಂದ, ಸಮಾಜದ ಆ ಭಾಗದ ಪ್ರಜೆಗಳಲ್ಲಿ ಅನಿರೀಕ್ಷಿತವಾದ ಹಣ ನಿಲ್ಲಲು ಅವಕಾಶವಿಲ್ಲದಂತಾಗುವುದು. ಈ ಹಣ ಅವರಲ್ಲಿಯೇ ಉಳಿದಿದ್ದ ಪಕ್ಷದಲ್ಲಿ ಸಮಾಜದ ಪ್ರಜೆಗಳಿಗೆ ಬೇಕಾದ ಪದಾರ್ಥಗಳ ಮೇಲಿನ ಹತೋಟಿ ಸರಕಾರದ ಕೈತಪ್ಪಿ ಅವರ ಕೈಗೆ ಬಿದ್ದಂತಾಗುತ್ತಿತ್ತು. ಹೀಗೆ ತೆರಿಗೆಯನ್ನು ಹಾಕಿದುದರಿಂದ ಇದು ತಪ್ಪಿದಂತಾಗುವುದು. ಇದಲ್ಲದೆ ಸಾಲದ ಮಿತಿಯನ್ನು ಕಡಮೆಮಾಡಿದಂತಾಗುವುದು. ಈ ತೆರಿಗೆ ಹಾಕದಿದ್ದ ಪಕ್ಷದಲ್ಲಿ, ಆ ಹಣವನ್ನು ಸರಕಾರ ಸಾಲದ ಮೂಲಕ ಎತ್ತಬೇಕಾಗುವುದು. ಆಗ ಸಾಲವನ್ನು ತೀರಿಸುವ, ಅದಕ್ಕೆ ಬಡ್ಡಿಯನ್ನು ತೆರುವ ಹೊರೆಯನ್ನು ಈಗಿನ ಪ್ರಜೆಗಳಷ್ಟೇ ಅಲ್ಲ, ಮುಂದಿನ ಜನಾಂಗದವರೂ ಸಹ ಹೊರಬೇಕಾಗುವುದು. ತೆರಿಗೆಯನ್ನು ಹಾಕುವುದರಿಂದ, ಈ ಹೊರೆಯನ್ನು ತಪ್ಪಿಸಿದಂತಾಗುವುದು. ಇದು ವಿಶೇಷ ಪರಿಸ್ಥಿತಿಯ ಮಾತು. ಆದರೆ ಸಾಮಾನ್ಯ ಪರಿಸ್ಥಿತಿಯಲ್ಲಿಯೂ, ಆಯವ್ಯಯದ ರೀತಿ ಪ್ರಜಾಹಿತತತ್ವವನ್ನು ಅನುಸರಿಸಿದ್ದರೆ ಅದು ಶಾಸ್ತ್ರಸಮ್ಮತವಾದುದು ಎಂದು ಒಪ್ಪಲು ಹಿಂತೆಗೆಯಬೇಕಾಗಿಲ್ಲ.

ತೆರಿಗೆಯ ಹೊರೆ ಹೆಚ್ಚಾಯಿತು ಎನ್ನುವ ಬದಲು ಸರಕಾರ ಅನುಸರಿಸುವ ತೆರಿಗೆ ಕ್ರಮದಿಂದ, ಹುಟ್ಟುವಳಿಗೋಸ್ಕರ ಏರ್ಪಾಟಾದ ಇತರ ಕಾರ್ಯಗಳಿಂದ, ಸರಕಾರದ ವೆಚ್ಚದ ರೀತಿಯಿಂದ, ಸಾಲಸೋಲಗಳ ನೀತಿಯಿಂದ, ಅಲ್ಲಿಯ ಪ್ರಜೆಗಳ

ಜೀವನದ ಮಟ್ಟ ಮೇಲಕ್ಕೇರಲು ಸಾಧಕವಾಗಿದೆಯೇ ಎಂಬುದನ್ನು ಪರೀಕ್ಷೆ ಮಾಡಬೇಕು. ತೆರಿಗೆಯ ಸಿಸ್ತು ಪ್ರಜೆಗಳಿಗೆ ಯಾವ ವಿಧದಲ್ಲಿ ತೊಂದರೆಯನ್ನುಂಟು ಮಾಡಿದೆ ಎಂಬುದನ್ನು ನೋಡುವುದರ ಜತೆಗೆ, ತೆರಿಗೆ ಕೊಡುವ ಪ್ರಜಾಸಮುದಾಯ ತನ್ನ ಸುಖಸಂಪತ್ತಿಯನ್ನು ಹೆಚ್ಚಿಸಿಕೊಳ್ಳಲು ಸರಕಾರದ ಆಯವ್ಯಯ ವ್ಯವಸ್ಥೆ ಸಾಧಕವಾಗುವುದೇ ಇಲ್ಲವೇ ಎಂಬ ವಿಷಯವನ್ನು ನಾವು ವಿಚಾರಮಾಡಬೇಕು. ತೆರಿಗೆಗಳಿಂದ ಜನರ ಭೋಗಾಭಿಲಾಷೆಗಳಲ್ಲಿ ಉಂಟಾಗುವ ಬದಲಾವಣೆಗಳಿಂದ ಜನಜೀವನ ಉತ್ತಮಗೊಳ್ಳುವುದೇ ಇಲ್ಲವೇ ಎಂಬುದನ್ನು ತಿಳಿಯಬೇಕು. ತೆರಿಗೆಯಿಂದ ವಸೂಲಾದ ಹಣದ ವೆಚ್ಚದಿಂದ ಪ್ರಜೆಗಳ ದ್ರವ್ಯಾರ್ಜನಶಕ್ತಿಯಲ್ಲಿ ಉಂಟಾಗುವ ಬದಲಾವಣೆಗಳನ್ನೂ ನಾವು ಗಮನಿಸಬೇಕು. ಆದಾಯದ ಅಥವಾ ಆಸ್ತಿಪಾಸ್ತಿಗಳ ತೆರಿಗೆಗಳ ಮೂಲಕ ಸಂಗ್ರಹಿಸಿದ ಹಣವನ್ನು ಸರಕಾರ ಪ್ರಜೆಗಳ ವಿದ್ಯಾಭ್ಯಾಸ, ದೇಶದ ಕೈಗಾರಿಕೆ, ವ್ಯವಸಾಯ, ಸಮಾಜದ ವಿಮಾರಕ್ಷಣೆ, (Social Insurance) ಕೂಲಿಗಾರರ ವಸತಿ ಇವುಗಳಿಗಾಗಿ ವೆಚ್ಚಮಾಡಿದಲ್ಲಿ ಅಥವಾ ಇತರ ಪ್ರಜಾಹಿತ ಸಾಧನಕಾರ್ಯಗಳಿಗಾಗಿ ವ್ಯಯಮಾಡಿದಲ್ಲಿ, ಇದರಿಂದ ಪ್ರಜಾಸೌಖ್ಯವೂ ತೆರಿಗೆ ಕೊಡುವ ಪ್ರಜೆಗಳ ದ್ರವ್ಯಾರ್ಜನಶಕ್ತಿಯೂ ಹೆಚ್ಚಲು ಸಾಧಕವಾಗುತ್ತದೆ. ಹೀಗೆಯೇ ಸಾಲಸೋಲಗಳ ವಿಷಯದಲ್ಲಿಯೂ ಸಹ ದೇಶದ ಸುಖಸಂಪತ್ತುಗಳನ್ನು ಹೆಚ್ಚಿಸಬಲ್ಲ ಮತ್ತು ಉತ್ತಮಗೊಳಿಸಬಲ್ಲ ಕೈಗಾರಿಕೆಗಳಿಗಾಗಿ, ಪ್ರಜೆಗಳ ದ್ರವ್ಯಾರ್ಜನಶಕ್ತಿಯನ್ನು ಬಲಪಡಿಸಬಲ್ಲ ಕೆಲಸಗಳಿಗಾಗಿ, ಹಣ ಬೇಕಾದರೆ ಸರಕಾರ ಸಾಲ ಮಾಡಿ ಹಣವನ್ನು ಪಡೆದು ವ್ಯವಹಾರ ನಡಸುವುದರಿಂದ ನಷ್ಟವಿಲ್ಲ. ಸರಕಾರದ ಆಯವ್ಯಯ ವ್ಯವಸ್ಥೆಯಿಂದ ಜನಜೀವನದಲ್ಲಿ ಉಂಟಾಗಬಹುದಾದ ಪರಿಳಿತಗಳನ್ನೂ ಸಾಧಕಬಾಧಕಗಳನ್ನೂ ನಾವು ದೃಷ್ಟಿಯಲ್ಲಿಟ್ಟು, ತೆರಿಗೆಯ ಕ್ರಮ, ವೆಚ್ಚದ ರೀತಿ, ಸಾಲಸೋಲಗಳ ನೀತಿ ಇವುಗಳನ್ನು ವಿಮರ್ಶೆಮಾಡಬೇಕು. ಪ್ರಜಾಹಿತವೂ ಸಮಾಜದ ಉನ್ನತಿಯೂ ಅಭಿವೃದ್ಧಿಹೊಂದಲು ಒಟ್ಟಿನಲ್ಲಿ ಅನುಕೂಲಗಳು ಇವುಗಳಿಂದ ಹೆಚ್ಚುವುವೇ ಇಲ್ಲವೇ ಎಂಬುದನ್ನು ದೃಷ್ಟಿಯಲ್ಲಿಟ್ಟುಕೊಂಡು ಸರಕಾರದ ಆಯವ್ಯಯದ ಆಡಳಿತವನ್ನು ನಿರ್ವಹಿಸಬೇಕು. ವಿಮರ್ಶಕರೂ ಸಹ ಇದೇ ದೃಷ್ಟಿಯಿಂದ ಪರಿಶೀಲಿಸದಿದ್ದರೆ ಖಚಿತವಾದ ನಿರ್ಧಾರಕ್ಕೆ ಬರಲು ಸಾಧ್ಯವಿಲ್ಲ.

ಸಾರ್ವಜನಿಕ ಆಯವ್ಯಯ ವ್ಯವಸ್ಥೆಗೆ ಮೂಲಭೂತವಾದ ಈ "ಸಮಾಜದ ಪರಮ ಹಿತತತ್ತ್ವ" ಬಹು ಸುಲಭವಾಗಿ ಕಂಡುಬಂದರೂ, ಇದನ್ನು ಕಾರ್ಯರೂಪದಲ್ಲಿ ತರುವುದು ಕಷ್ಟಸಾಧ್ಯವಾದ ಕೆಲಸ.

ಈ ತತ್ತ್ವವನ್ನು ಕಾರ್ಯರೂಪಕ್ಕೆ ತರುವ ಸಂದರ್ಭದಲ್ಲಿ ಸಮಾಜಕ್ಕೆ ಹಿತ ಯಾವುದು, ಸಮಾಜದ ಅಭ್ಯುದಯಕ್ಕೆ ಸಾಧಕ ಯಾವುದು ಎಂಬುದನ್ನು ಮೊಟ್ಟಮೊದಲು ನಾವು ತಿಳಿಯಬೇಕು. ಸಮಾಜವನ್ನು ಹೊರಗಣ ಆಕ್ರಮಣಗಳಿಂದಲೂ ಒಳಗಿನ ಅಶಾಂತಿ ದಾಂಧಲೆಗಳಿಂದಲೂ ಪಾರುಮಾಡಬೇಕಾದುದು ಸರಕಾರದ ಆದ್ಯಕರ್ತವ್ಯ. ಹಾಗೆಯೇ ಅಲ್ಲಿಯ ಪ್ರಜೆಗಳು ತುಂಬು ಜೀವನವನ್ನು ನಡೆಸಲು

ಅನುಕೂಲಗಳನ್ನು ಕಲ್ಪಿಸಬೇಕಾದುದೂ ಸರಕಾರದ ಕರ್ತವ್ಯವೇ. ಹೀಗೆ ಸಮಾಜದ ಹಿತಕ್ಕೆ ಸಂಬಂಧಪಡುವ ಅರ್ಥಶಾಸ್ತ್ರಕ್ಕೆ ಸೇರುವ ಮತ್ತು ಅದರಿಂದ ಬೇರೆಯಾದ ಅನೇಕ ವಿಷಯಗಳುಂಟು.

ಅರ್ಥಶಾಸ್ತ್ರದ ದೃಷ್ಟಿಯಿಂದ ನೋಡುವುದಾದರೆ ಸಮಾಜದ ಹಿತವನ್ನು ಸಾಧಿಸುವ ಮಾರ್ಗಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು. ಒಂದು ಸರಕಾರದ ಆಯವ್ಯಯ ವ್ಯವಸ್ಥೆ ಆ ಸಮಾಜದ ಆರ್ಥಿಕ ಜೀವನವನ್ನು ಉತ್ತಮಗೊಳಿಸಿ, ಅಲ್ಲಿಯ ಪ್ರಜೆಗಳ ಸಂಪಾದನ ಶಕ್ತಿಯನ್ನು ಹೆಚ್ಚಿಸುವಂತಹುದಾಗಿರಬೇಕು. ಇದು ಮೊದಲನೆಯದು. ಹೀಗೆ ದೇಶದ ಸಂಪತ್ತು ಹೆಚ್ಚುವುದು ಮಾತ್ರವಲ್ಲದೆ, ಆ ಸಂಪತ್ತಿನ ವಿಭಾಗಕ್ರಮವೂ ಸುವ್ಯವಸ್ಥಿತವಾಗುವಂತಿರಬೇಕು. ಎಂದರೆ ಒಂದು ಸಮಾಜದಲ್ಲಿ ಅಲ್ಲಿಯ ಧನಿಕರು ಹೆಚ್ಚು ಹಣ ಗಳಿಸುವುದು ಮಾತ್ರವಲ್ಲದೆ, ಬಡವರ ಜೀವನವೂ ಉತ್ತಮಗೊಳ್ಳಬೇಕು. ಒಂದು ಜನಾಂಗ ಮುಂದುವರಿಯಬೇಕಾದರೆ ಆ ಜನಾಂಗದ ಸದಸ್ಯರ ಸಂಪಾದನಶಕ್ತಿ ಹೆಚ್ಚಿ ಸಂಪತ್ತು ಬೆಳೆಯಬೇಕಾದುದು ಹೇಗೆ ಆವಶ್ಯಕವೋ ಹಾಗೆಯೇ ಆರ್ಜಿತವಾದ ಸಂಪತ್ತು ಸರಿಯಾದ ರೀತಿಯಲ್ಲಿ ಹಂಚಿಕೆಯಾಗಬೇಕಾದುದೂ ಆವಶ್ಯಕ.

ಇಷ್ಟಲ್ಲದೆ, ರಾಜ್ಯದ ಆಯವ್ಯಯ ನೀತಿಯು ನಿರ್ಮಾಣ ಮುಂದಿನ ಪ್ರಜೆಗಳ ಸೌಖ್ಯವನ್ನು ಕಾಪಾಡಬೇಕು. ಸಮಾಜದ ಉನ್ನತಿಯನ್ನು ಸಾಧಿಸುವುದರಲ್ಲಿ ಸರಕಾರಕ್ಕೆ ಇರುವ ದೃಷ್ಟಿವೈಶಾಲ್ಯ ಒಂದು ವ್ಯಕ್ತಿಗಿರುವುದಿಲ್ಲ. ಜನಾಂಗಕ್ಕೆ ಸೇರಿದ ವ್ಯಕ್ತಿಗಳು ಇಂದಿದ್ದು ನಾಳೆ ಮಾಯವಾಗಬಹುದು. ಆದರೆ ಸಮಾಜವು ಹಾಗಲ್ಲ; ಅನಂತಕಾಲ ಬಾಳತಕ್ಕುದು. ರಾಜನೀತಿಜ್ಞರ ಮನಸ್ಸಿನಲ್ಲಿರಬೇಕಾದುದು ಒಬ್ಬ ವ್ಯಕ್ತಿಯ ಸುಖಸಂಪತ್ತಾಗಲಿ, ಒಂದು ಕಾಲದ ಮತ್ತು ಒಂದು ಪಕ್ಷದ ಅಭ್ಯುದಯವಾಗಲಿ ಅಲ್ಲ; ಇಡಿ ಸಮಾಜದ ಹಿತ ಸುಖ ಮತ್ತು ಅಭ್ಯುದಯ. ಸರಕಾರ ಪ್ರಜೆಗಳ ಸೌಖ್ಯಕ್ಕಾಗಿ ಕಾರ್ಯನಿರ್ವಾಹ ಮಾಡುವಾಗ ಜನತೆಯ ಇಂದಿನ ಸೌಖ್ಯ, ಮುಂದಿನ ಅಭ್ಯುದಯ, ಇವೆರಡನ್ನೂ ಗಮನದಲ್ಲಿಡಬೇಕು.

ಆರ್ಥಿಕದೃಷ್ಟಿಯಿಂದ ದ್ವಿಮುಖವಾದ ಈ "ಸಮಾಜದ ಪರಮಹಿತ"ಕ್ಕಾಗಿ ಸಂತತವಾಗಿ ಪ್ರಯತ್ನ ನಡೆಯಬೇಕು. ಸರಕಾರವೂ ಇದನ್ನು ಗಮನದಲ್ಲಿಟ್ಟುಕೊಂಡೇ ಸಮಾಜ ಸಂಸ್ಕರಣಕ್ಕೆ ಕಾರಣಭೂತವಾದ ಆಯವ್ಯಯ ವ್ಯವಸ್ಥೆಯನ್ನು ನಿರ್ಮಾಣಮಾಡಬೇಕು. ಇದೇ ದೃಷ್ಟಿಯಿಂದ ವಿಮರ್ಶಕರೂ ಅದನ್ನು ಚರ್ಚಿಸಿ ಪರಿಶೀಲಿಸಬೇಕು.

ಆಯವ್ಯಯ ವ್ಯವಸ್ಥೆಯಲ್ಲಿ ಸಾರ್ವಜನಿಕ ವೆಚ್ಚವೇ ಬಹು ಮುಖ್ಯವಾದ ಭಾಗವಾದುದರಿಂದ ಅದನ್ನು ಮುಂದಿನ ಪ್ರಕರಣಗಳಲ್ಲಿ ವಿಮರ್ಶಿಸಿ ಇತರ ಭಾಗಗಳನ್ನು ಆಮೇಲೆ ಪರ್ಯಾಲೋಚಿಸಲಾಗುವುದು.

---

# ಪ್ರಕರಣ ೩

## ಸಾರ್ವಜನಿಕ ವೆಚ್ಚ *

### ಬೆಳವಣಿಗೆ

ಪ್ರಜೆಗಳ ರಕ್ಷಣೆ ಮತ್ತು ಅಭ್ಯುದಯಕ್ಕಾಗಿ ದುಡಿಯುವ ಸಂಸ್ಥೆಗಳೆಲ್ಲವೂ ಸಾರ್ವಜನಿಕ ಸಂಸ್ಥೆಗಳು. ಇಂತಹ ಸಾರ್ವಜನಿಕ ಸಂಸ್ಥೆಗಳಲ್ಲಿ ಅತ್ಯಂತ ಮುಖ್ಯವಾದುದೂ ಶಕ್ತಿಯಿಂದ ಕೂಡಿದುದೂ ಸರಕಾರ. ಸರಕಾರ ಬಹುಮುಖವಾಗಿರುತ್ತದೆ. ಕೇಂದ್ರ ಸರಕಾರ, ಪ್ರಾಂತ ಸರಕಾರ, ಸ್ಥಳೀಯ ಸರಕಾರ, ಇವುಗಳು ಸರಕಾರದ ಬೇರೆ ಬೇರೆ ರೂಪಗಳು ಅಥವಾ ಅಂಗಗಳು. ಈ ಸಂಸ್ಥೆಗಳು ಒಂದು ಸಮಾಜದ ಅಥವಾ ದೇಶದ ಸ್ವಾತಂತ್ರ್ಯವನ್ನು ಕಾಪಾಡಿ, ಅಲ್ಲಿಯ ಜನರ ಸುಖ ಸಂಪತ್ತುಗಳನ್ನು ಹೆಚ್ಚಿಸಲು ಮಾಡಬೇಕಾದ ಕರ್ತವ್ಯಗಳಿಗಾಗಿ ವೆಚ್ಚಮಾಡುವ ಹಣವನ್ನು "ಸಾರ್ವಜನಿಕ ವೆಚ್ಚ" ವೆಂದು ಕರೆಯಬಹುದು.

ಬೆಳಕು ಹರಿದು ದಿನ ಮುಗಿಯುವುದರೊಳಗಾಗಿ ಇಂಗ್ಲೆಂಡ್ ಸರಕಾರ (ಈಗ ನಡೆಯುತ್ತಿರುವ ಯುದ್ಧಕ್ಕೆ ಮೊದಲೇ) ತನ್ನ ಆಡಳಿತಕ್ಕಾಗಿ ಸುಮಾರು ೩೫೦ ಲಕ್ಷ ರೂಪಾಯಿಗಳನ್ನು ವೆಚ್ಚಮಾಡುತ್ತಿತ್ತು †. ಮೈಸೂರು ಸರಕಾರ ದಿನ ಒಂದಕ್ಕೆ ಮೂರು ಲಕ್ಷ ರೂಪಾಯಿಗಳನ್ನು ವೆಚ್ಚಮಾಡುತ್ತದೆ. ಪ್ರಜಾರಕ್ಷಣೆ ಮತ್ತು ಪ್ರಜಾ ಸೌಖ್ಯಕ್ಕಾಗಿ, ಸರಕಾರವೆಂಬ ಪ್ರಧಾನ ಸಾರ್ವಜನಿಕಸಂಸ್ಥೆಯೊಂದನ್ನುಳಿದು, ಯಾವ ದೇಶದಲ್ಲಿ ಯಾವನೊಬ್ಬ ವ್ಯಕ್ತಿಯೂ ಇಷ್ಟು ಹಣವನ್ನು ವೆಚ್ಚಮಾಡಲಾರನು. ಹೀಗೆ ವೆಚ್ಚಮಾಡುವ ಯೋಗ್ಯತೆಯನ್ನು ಪಡೆದಿರುವುದು ಕಷ್ಟ. ಇತ್ತೀಚೆಗೆ ನಮ್ಮ ದೇಶದಲ್ಲಿ ಮಾತ್ರವೇ ಅಲ್ಲ, ಪ್ರಪಂಚದ ನಾನಾಭಾಗಗಳಲ್ಲಿರುವ ಅನೇಕ ರಾಷ್ಟ್ರಗಳ ಸರಕಾರಗಳ ವೆಚ್ಚ ಏರುತ್ತಿದೆ. ವೆಚ್ಚ ಏರದಿರುವ ಸರಕಾರ, ನಾಗರಿಕ ಸರಕಾರವೇ ಅಲ್ಲವೆನ್ನುವಷ್ಟು ಮಟ್ಟಿಗೆ ಕೆಲವು ದೇಶಗಳ ವೆಚ್ಚ ಹೆಚ್ಚಾಗುತ್ತಿದೆ. ೧೮೮೩ರಲ್ಲಿ ಮೈಸೂರು ಸರಕಾರ ವರ್ಷಕ್ಕೆ ಕೇವಲ ೬೫ ಲಕ್ಷ ರೂಪಾಯಿಗಳನ್ನು ವೆಚ್ಚಮಾಡುತ್ತಿತ್ತು. ಯುದ್ಧಕ್ಕೆ ಮುಂಚೆ ನಾಲ್ಕು ಕೋಟಿ ರೂಪಾಯಿ ವೆಚ್ಚ ಮಾಡುತ್ತಿದ್ದ, ಈಗ ಅದೇ ಸರಕಾರ ವರ್ಷಂಪ್ರತಿ

---

* ಈ ಭಾಗಕ್ಕೆ ಡಾ॥ ಎಂ. ಎಚ್. ಗೋಪಾಲ್, ಎಂ.ಎ., ಪಿಹೆಚ್.ಡಿ. ಯವರ "ಸಾರ್ವಜನಿಕವೆಚ್ಚ" ವೆಂಬ ಪುಸ್ತಕದಿಂದ ಸಹಾಯ ದೊರೆತಿದೆ.

† ಈಗಲಾದರೋ ಇಂಗ್ಲೆಂಡ್ ಸರಕಾರ ದಿನವೊಂದಕ್ಕೆ ೨೧ ಕೋಟಿ ರೂಪಾಯಿ ವೆಚ್ಚಮಾಡುತ್ತಿದೆ.

ಸುಮಾರು ಹತ್ತು ಕೋಟಿ ರೂಪಾಯಿ ವೆಚ್ಚಮಾಡುತ್ತಿದೆ. ೧೬೮೮ರಲ್ಲಿ ಮೂರು ಕೋಟಿ ರೂಪಾಯಿಗಳಷ್ಟು ವೆಚ್ಚಮಾಡುತ್ತಿದ್ದ ಇಂಗ್ಲೆಂಡ್ ಸರಕಾರ ಯುದ್ಧಕ್ಕೆ ಮುಂಚೆ ೧೨೦೦ ಕೋಟಿ ರೂಪಾಯಿ ವೆಚ್ಚಮಾಡುತ್ತಿತ್ತು. ಅಮೆರಿಕದ ಸಂಯುಕ್ತ ಸಂಸ್ಥಾನಗಳ ಸರಕಾರ ೧೮೦೦ ರಲ್ಲಿ ಮೂರು ಕೋಟಿ ವೆಚ್ಚಮಾಡುತ್ತಿದ್ದು ೧೯೩೦ ರ ವೇಳೆಗೆ ಅದರ ವೆಚ್ಚ ೧೦೦೦ ಕೋಟಿ ರೂಪಾಯಿಗಳನ್ನು ಮೀರಿತ್ತು.

ಕೇಂದ್ರ ಸರಕಾರದಂತೆಯೇ ಪ್ರಾಂತ ಮತ್ತು ಸ್ಥಳೀಯ ಸರಕಾರಗಳ ವೆಚ್ಚವೂ ಏರುತ್ತಿದೆ. ಕಳೆದ ಅರುವತ್ತು ವರ್ಷಗಳಲ್ಲಿ, ಪ್ರಪಂಚದ ಕೆಲವು ಮುಖ್ಯ ರಾಷ್ಟ್ರಗಳ ವೆಚ್ಚ ಹೇಗೆ ಏರಿದೆಯೆಂಬುದನ್ನು ಈ ಕೆಳಗಿನ ಅಂಕಿಗಳು ಸೂಚಿಸುತ್ತವೆ :—

| ದೇಶ. | ೧೮೬೦ ರ ವೆಚ್ಚ. | ೧೯೩೦ ರ ವೆಚ್ಚ. |
|---|---|---|
| ಅಮೇರಿಕಾದ ಸಂಯುಕ್ತ ಸಂಸ್ಥಾನ. | ೩,೧೦೦ ಲಕ್ಷ ಡಾಲರ್ | ೫೯,೪೬೦ ಲಕ್ಷ ಡಾಲರ್ |
| ಗ್ರೇಟ್‌ಬ್ರಿಟನ್ | ೬೯೦ ಲಕ್ಷ ಪೌಂಡು | ೮,೨೯೦ ಲಕ್ಷ ಪೌಂಡು |
| ಜಪಾನ್ | ೨೦೦ ಲಕ್ಷ ಯೆನ್ | ೧೬,೩೬೦ ಲಕ್ಷ ಯೆನ್ |
| ಇಂಡಿಯಾ | ೪,೫೦೦ ಲಕ್ಷ ರೂ. | ೨೦,೦೦೦ ಲಕ್ಷ ರೂ. |

ಹೀಗೆ ವೆಚ್ಚ ದಿನೇ ದಿನೇ ಏರುತ್ತಿರುವುದಕ್ಕೆ ಕಾರಣಗಳೇನು ? ಒಂದು ಸರಕಾರದ ವೆಚ್ಚಕ್ಕೂ ಇನ್ನೊಂದು ಸರಕಾರದ ವೆಚ್ಚಕ್ಕೂ ವ್ಯತ್ಯಾಸವಿರುವುದೇಕೆ ? ಎಂಬುದನ್ನು ತಿಳಿಯಬೇಕಾದುದು ಅಗತ್ಯ.

ಸಾರ್ವಜನಿಕ ವೆಚ್ಚವು ಏರುತ್ತಿರುವ ವಿಷಯದಲ್ಲಿ ಹಿಂದಿನ ಶತಮಾನದಲ್ಲಿದ್ದಷ್ಟು ಗಾಬರಿ ಈಗಿಲ್ಲ. ಅರ್ಥಶಾಸ್ತ್ರಜ್ಞರಲ್ಲಿಯೇ ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿವೆ. ೧೯ನೆಯ ಶತಮಾನದ ಹಿಂದಿನ ರಾಜನೀತಿಜ್ಞರೂ ಅರ್ಥಶಾಸ್ತ್ರಜ್ಞರೂ ಸರಕಾರದ ವೆಚ್ಚವನ್ನು ಹೆಚ್ಚಿಸಬಾರದೆಂದೂ, ಇದರಿಂದ ದೇಶದ ಪ್ರಜೆಗಳಿಗೆ ತೊಂದರೆಯಾಗುವುದೆಂದೂ ಅಭಿಪ್ರಾಯಪಡುತ್ತಿದ್ದರು. ಈಚೆಗೆ, ಸರಕಾರದ ವೆಚ್ಚ ಏರುತ್ತ ಹೋಗುವುದು ಸ್ವಾಭಾವಿಕವಾದುದು, ವೆಚ್ಚ ಹೆಚ್ಚಿದ ಮಾತ್ರಕ್ಕೇ ಪ್ರಜೆಗಳಿಗೆ ತೊಂದರೆಯಾಗುವುದಿಲ್ಲ, ಎಂದು ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಿದ್ದಾರೆ. ಸರಕಾರದ ಕಾರ್ಯಕ್ಷೇತ್ರ ವಿಸ್ತಾರವಾದಂತೆಲ್ಲಾ ವೆಚ್ಚ ಹೆಚ್ಚಾಗುವುದು ಸಹಜ. ಇದರಿಂದ ಯಾರೂ ಗಾಬರಿಪಡಬೇಕಾದದ್ದಿಲ್ಲ. ವೆಚ್ಚದ ಕ್ರಮ ಮತ್ತು ಅದರಿಂದುಂಟಾಗುವ ಪರಿಣಾಮಗಳನ್ನು ಪರೀಕ್ಷಿಸದೆ, ವೆಚ್ಚದ ಮೊತ್ತದಿಂದಲೇ ಒಂದು ನಿರ್ಧಾರಕ್ಕೆ ಬರುವುದು ತಪ್ಪು. ಸರಕಾರದ ಕಾರ್ಯಕ್ಷೇತ್ರ ವಿಸ್ತರಿಸುವುದು ಅವಶ್ಯಕವೆಂಬ ತತ್ವಕ್ಕೆ ಈಚೆಗೆ ಹೆಚ್ಚು ಬೆಂಬಲ ದೊರೆಯುತ್ತಿದೆ. ಆದುದರಿಂದ ಸರಕಾರದ ವೆಚ್ಚ ಹೆಚ್ಚುವುದು ತಪ್ಪಲ್ಲವೆಂಬ ಅಭಿಪ್ರಾಯಕ್ಕೂ ಒಪ್ಪಿಗೆ ದೊರೆತಂತಾಯಿತು. ಒಂದು ಸರಕಾರ ಮಾಡುವ ವೆಚ್ಚದ ಮೊತ್ತ ಹೆಚ್ಚಿದ ಮಾತ್ರಕ್ಕೇ ಆ ದೇಶದ ಪ್ರಜೆಗಳ ಮೇಲಿರುವ ಹೊರೆ ಹೆಚ್ಚಿತೆಂದು ವಾದಿಸುವುದು ಸರಿಯಲ್ಲ. ಬರಿಯ ವೆಚ್ಚದ ಮೊತ್ತವನ್ನು ಹೋಲಿಸುವಾಗ ನಮಗೆ ಕಂಡುಬರುವ

ವ್ಯತ್ಯಾಸ ಕೃತಕವಾದುದು. ನಿಜವಾಗಿಯೂ ವೆಚ್ಚ ಹೇಗೆ ಬೆಳೆದಿದೆಯೆಂಬುದನ್ನು ಇದರಿಂದ ತಿಳಿಯಲು ಸಾಧ್ಯವಾಗಲಾರದು. ವೆಚ್ಚ ಬೆಳೆದಿದೆಯೇ ಇಲ್ಲವೇ ಎಂಬುದನ್ನು ತಿಳಿಯಬೇಕಾದರೆ ವೆಚ್ಚದ ಬಾಬುಗಳನ್ನು ಪರಿಶೀಲಿಸಬೇಕು ; ವೆಚ್ಚ ಏರಲು ಕಾರಣಗಳನ್ನು ಪರೀಕ್ಷಿಸಬೇಕು ; ತಾರತಮ್ಯಗಳಿದ್ದರೆ, ಆ ಕಾರಣಗಳನ್ನು ವಿಮರ್ಶಿಸಬೇಕು.

ಒಂದು ದೇಶ ಬೆಳೆದು ತನ್ನ ಸರಹದ್ದನ್ನು ಹೆಚ್ಚುಮಾಡಿಕೊಂಡಿದ್ದ ಪಕ್ಷದಲ್ಲಿ ಅಲ್ಲಿಯ ಸರಕಾರದ ವ್ಯಾಪ್ತಿ ಮೊದಲಿಗಿಂತ ಹೆಚ್ಚಾಗುವುದು. ದೇಶ ಬೆಳೆದಂತೆ ಅದರ ಸರಕಾರದ ರಚನೆಯೂ ವ್ಯತ್ಯಾಸವಾಗುವುದು. ಹೆಚ್ಚು ಭೂಭಾಗವನ್ನು ರಕ್ಷಿಸುವ ಜವಾಬ್ದಾರಿ ಸರಕಾರದ ತಲೆಯ ಮೇಲೆ ಬೀಳುವುದು. ಇದರಿಂದ ಸರಕಾರದ ವೆಚ್ಚವೂ ಹೆಚ್ಚುವುದು. ಉದಾಹರಣೆಗಾಗಿ ೧೭೮೮ ರಲ್ಲಿದ್ದ ಇಂಗ್ಲೆಂಡ್ ದೇಶಕ್ಕೂ ಈಗಿನ ಇಂಗ್ಲೆಂಡಿಗೂ ಹೋಲಿಸಿದರೆ, ಆಗಿದ್ದ ಒಂದು ಚಿಕ್ಕರಾಜ್ಯ ದಿನೇ ದಿನೇ ವಿಸ್ತಾರವಾಗಿ ಪ್ರಪಂಚದಲ್ಲಿ ಒಂದು ದೊಡ್ಡ ಸಾಮ್ರಾಜ್ಯವಾಗಿ ಪರಿಣಮಿಸಿದೆ. ಆದುದರಿಂದ ಸರಕಾರದ ಕಾರ್ಯಕಲಾಪಗಳು ಹೆಚ್ಚದೆಯೇ ರಾಷ್ಟ್ರದ ವಿಸ್ತೀರ್ಣ ಹೆಚ್ಚುವುದರಿಂದ ಸರಕಾರದ ವೆಚ್ಚ ಹೆಚ್ಚಾಗಬಹುದು. ಈಗ ಕೆನಡಾ ಎಂಬ ರಾಷ್ಟ್ರ ಬಹು ವಿಶಾಲವಾದ ದೇಶ. ಅಲ್ಲಿ ಪಟ್ಟಣಗಳು ಹತ್ತಿರದಲ್ಲಿಲ್ಲ. ಕೆಲವು ಕಡೆ ಒಂದು ಪಟ್ಟಣದಿಂದ ಇನ್ನೊಂದು ಪಟ್ಟಣಕ್ಕೆ ಮೂರು ಸಾವಿರ ಮೈಲಿಗಳಷ್ಟು ದೂರವಾಗುವುದು ಈ ದೇಶದಲ್ಲಿ ಜನಸಾಂದ್ರತೆ ಇಲ್ಲದಿದ್ದರೂ, ಜನಗಳು ಬಹು ದೂರಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಈ ಸಂದರ್ಭಗಳಲ್ಲಿ ಸರಕಾರದ ಕಾರ್ಯಕಲಾಪಗಳಿಗಾಗಿ ಹೆಚ್ಚು ಹಣ ವೆಚ್ಚವಾಗುವುದು ಸಹಜ. ಅಲ್ಲಿಯ ಪ್ರಜಾಸಂಖ್ಯೆ ಸುಮಾರು ಒಂದು ಕೋಟಿ. ಅಲ್ಲಿ ೧೫೦ ಮಂದಿ ನ್ಯಾಯಾಧಿಪತಿಗಳಿದ್ದಾರೆ. ಇದನ್ನು ಕೇಳಿ, ಇದೇಕೆ ಇಷ್ಟು ಮಂದಿ ? ಇವರಿಗೇಕೆ ಇಷ್ಟು ವೆಚ್ಚ ? ಎನ್ನಬಹುದು. ಅಂತಹವರು ಕೆನಡಾದೇಶದಲ್ಲಿ ಒಂದು ಪಟ್ಟಣದಿಂದ ಇನ್ನೊಂದು ಪಟ್ಟಣಕ್ಕೆ ಇರುವ ದೂರವನ್ನು ನೆನಪಿನಲ್ಲಿಟ್ಟರೆ ಇದು ಅನ್ಯಾಯವಾದ ವೆಚ್ಚವಲ್ಲವೆನ್ನಬಹುದು. ಹೀಗೆ ಒಂದು ದೇಶದ ಸರಕಾರದ ಕಾರ್ಯಕಲಾಪಗಳಲ್ಲಿ ಬದಲಾವಣೆಯಾಗದಿದ್ದರೂ, ದೇಶದ ವಿಸ್ತೀರ್ಣ ಬೆಳೆದರೆ ವೆಚ್ಚವೂ ಬೆಳೆಯುತ್ತದೆ. ಇದರಿಂದ ಸರಕಾರದ ವೆಚ್ಚ ನಿಜವಾಗಿಯೂ ಏರಿದಂತಾಗುವುದಿಲ್ಲ.

ಒಂದು ದೇಶದ ಜನಸಂಖ್ಯೆ ಹೆಚ್ಚುವುದರಿಂದ ಆ ದೇಶದ ಸರಕಾರದ ವೆಚ್ಚ ಹೆಚ್ಚುವುದು. ಸಂಸಾರದಲ್ಲಿ ಜನಗಳು ಹೆಚ್ಚುತ್ತಾ ಸಂಸಾರದ ಖರ್ಚು ಹೆಚ್ಚುವಂತೆ ದೇಶದಲ್ಲಿ ಪ್ರಜಾಸಂಖ್ಯೆ ಹೆಚ್ಚಿದಂತೆಲ್ಲಾ ಸರಕಾರದ ಖರ್ಚೂ ಹೆಚ್ಚುವುದು ಸಹಜ. ೧೮೦೦ರಲ್ಲಿ ಅಮೆರಿಕಾ ದೇಶದಲ್ಲಿ ೮೦ ಲಕ್ಷ ಪ್ರಜೆಗಳಿದ್ದರು. ಅವರಿಗೋಸ್ಕರ ಮೊದಲು ಸುಮಾರು ಮೂರು ಕೋಟಿ ರೂಪಾಯಿ ಖರ್ಚಾಗುತ್ತಿತ್ತು. ೧೯೦೦ರಲ್ಲಿ ಅದೇ ದೇಶದ ಜನಸಂಖ್ಯೆ ೧೧ ಕೋಟಿಯಾದಾಗ ಆ ಹಣ ಒಂದು ಬಾಬಿಗೂ ಕೂಡ ಸಾಲದೆ ಹೋಯಿತು. ಇಂಡಿಯಾದೇಶದ ಪ್ರಜಾಸಂಖ್ಯೆ ೧೯೩೧ರಿಂದ ೧೯೪೧ರವರೆಗಿನ ಹತ್ತು ವರ್ಷಗಳಲ್ಲಿ ಸುಮಾರು ೩೨ ಕೋಟಿಯಿಂದ

೩೫ ಕೋಟಿಗೂ, ಆಮೇಲಿನ ಹತ್ತು ವರ್ಷಗಳಲ್ಲಿ ೩೯ ಕೋಟಿಗೂ ಏರಿತು. ಹೀಗೆ ಪ್ರಜಾಸಂಖ್ಯೆ ಹೆಚ್ಚಿದಂತೆಲ್ಲಾ, ಅವರ ರಕ್ಷಣಾಭಾರವೂ ಅವರಿಗೆ ಸೌಕರ್ಯಗಳನ್ನು ಒದಗಿಸಿಕೊಡುವ ಕೆಲಸವೂ ಸರಕಾರದಮೇಲೆ ಬೀಳುತ್ತವೆ. ಆದುದರಿಂದ ಸರ್ಕಾರದ ವೆಚ್ಚ ಹೆಚ್ಚಾಗುತ್ತದೆ.

ಸರಕಾರದ ಕಾರ್ಯಕಲಾಪಗಳಲ್ಲಿ ಯಾವ ಬಗೆಯ ವ್ಯತ್ಯಾಸವೂ ಆಗದೆಯೇ ವೆಚ್ಚ ಏರುತ್ತದೆ. ಹಿಂದೆ ನಮ್ಮ ದೇಶದಲ್ಲಿ ಎಲ್ಲ ಗ್ರಾಮಗಳಲ್ಲಿಯೂ ಆಯಾ ಗ್ರಾಮದ ದೇವಾಲಯ, ಕೆರೆ, ರಸ್ತೆ, ಭಾವಿ ಮೊದಲಾದವುಗಳನ್ನು ನಿರ್ಮಾಣ ಮಾಡುವ ಮತ್ತು ದುರಸ್ತು ಮಾಡಿ ಕಾಪಾಡಿಕೊಳ್ಳುವ ಕೆಲಸ ಆಯಾ ಗ್ರಾಮದ ಜನಗಳದಾಗಿತ್ತು. ಹೀಗೆ ರಸ್ತೆ, ಕೆರೆ, ಕಾಲುವೆ, ಮೊದಲಾದ ಕೆಲಸಗಳು ಒದಗಿದಾಗ ಆ ಗ್ರಾಮದ ಜನರೆಲ್ಲರೂ ಒಟ್ಟಿಗೆ ಸೇರಿ ಆ ಕೆಲಸವನ್ನು ಸ್ವಂತ ದುಡಿಮೆಯಿಂದ ನಡಸುತ್ತಿದ್ದರು. ಇದಕ್ಕಾಗಿ ಸರಕಾರ ಯಾವ ವಿಧವಾದ ಹಣ ವನ್ನೂ ವೆಚ್ಚ ಮಾಡುತ್ತಿರಲಿಲ್ಲ. ಹಾಗೆಯೇ ಹಿಂದಿನ ಕಾಲದಲ್ಲಿ ಹಳ್ಳಿಗಳ ಜನರು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಉಪಾಧ್ಯಾಯನೊಬ್ಬನನ್ನು ನಿಯಮಿಸಿಕೊಂಡು ಆತನ ಸಂಸಾರಕ್ಕೆ ಬೇಕಾಗುವ ಸೌಕರ್ಯಗಳೆಲ್ಲವನ್ನೂ ತಾವೇ ಒದಗಿಸಿ ಕೊಡುತ್ತಿದ್ದರು. ಹಿಂದಿನ ಕಾಲದಲ್ಲಿ ಇಂತಹ ಪದ್ಧತಿ ನಮ್ಮಲ್ಲಿ ಬಹಳ ಪ್ರಚಾರ ದಲ್ಲಿತ್ತು. ಈಗ ಒಂದು ಊರಿನ ಕೆರೆಯ ದುರಸ್ತಿಗಾಗಲಿ, ರಸ್ತೆಯ ರಿಪೇರಿಗಾಗಲಿ ಹುಡುಗರ ವಿದ್ಯಾಭ್ಯಾಸಕ್ಕಾಗಲಿ, ಸರಕಾರ ಹಣ ವೆಚ್ಚಮಾಡಿ ಕೆಲಸ ನಿರ್ವಹಣ ಮಾಡಬೇಕಾಗಿದೆ. ಎಂದರೆ ಯಾವ ಕಾರ್ಯಗಳು ಸೇವೆಯ ರೂಪದಲ್ಲಿ, ದೇಹಶ್ರಮದ ರೂಪದಲ್ಲಿ, ನಡೆಯುತ್ತಿದ್ದುವೋ ಆ ಕಾರ್ಯಗಳಿಗಾಗಿ ಈಗ ಸರಕಾರ ಹಣ ವೆಚ್ಚ ಮಾಡಬೇಕಾಗಿದೆ. ಹಾಗೆಯೇ ಜನಗಳ ಕಷ್ಟನಿಷ್ಠುರಗಳನ್ನು ತಿಳಿಸುವುದಕ್ಕಾಗಿ, ಸರಕಾರಕ್ಕೆ ಸಲಹೆ ಕೊಡುವುದಕ್ಕಾಗಿ, ಜನಜೀವನವನ್ನು ರೂಪುಗೊಳಿಸುವುದಕ್ಕಾಗಿ ಕೆಲಸ ಮಾಡುತ್ತಿದ್ದ, ಸಾರ್ವಜನಿಕ ಸೇವೆಯಲ್ಲಿ ನಿರತರಾಗಿದ್ದ, ಜನರಿಗೆ ಹಿಂದೆ ಯಾವ ವಿಧದ ಹಣವನ್ನೂ ಸಲ್ಲಿಸುತ್ತಿರಲಿಲ್ಲ. ಈಗ ಆ ಕೆಲಸಗಳನ್ನು ನಡಸುವ ಪ್ರಜೆಗಳ ಪ್ರತಿನಿಧಿಗಳಿಗೆ, ಎಂದರೆ, ಡಿಸ್ಟ್ರಿಕ್ಟ್ ಬೋರ್ಡ್, ಪ್ರಜಾಪ್ರತಿನಿಧಿ ಸಭೆ, ಶಾಸನಸಭೆ ಮೊದಲಾದವುಗಳ ಸದಸ್ಯರಿಗೆ ಸಂಭಾವನೆ ಸಲ್ಲಿಸಬೇಕಾಗಿದೆ. ಇದ ರಿಂದ ರಾಜ್ಯಾಡಳಿತದ ವೆಚ್ಚ ಏರಿರುವಂತೆ ಕಾಣುತ್ತದೆ.

ದೇಶದಲ್ಲಿ ಸಾಮಾನುಗಳ ಧಾರಣೆವಾಸಿಗಳು ಹೆಚ್ಚಿ ಸರಕಾರದ ವೆಚ್ಚವೂ ಹೆಚ್ಚಾಗಿರಬಹುದು. ಮೊದಲು ಒಂದಾಣೆಗೆ ಸಿಗುತ್ತಿದ್ದ ಪದಾರ್ಥದ ಬೆಲೆ ನಾಲ್ಕಾಣೆಯಾಗಿದ್ದರೆ, ಸರಕಾರದ ಆಶ್ರಯದಲ್ಲಿರುವ ನೌಕರರ ಜೀವನಕ್ಕೆ ಬೇಕಾ ಗುವಷ್ಟು ಹಣವನ್ನು ಸರಕಾರ ಕೊಡಬೇಕಾಗುವುದು. ಹಾಗೆಯೇ ಕೂಲಿಯ ದರವೂ ಏರುತ್ತದೆ. ೧೯೨೮ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಗಳು ಬೇರೆ ಬೇರೆ ಬಾಬುಗಳಿಗಾಗಿ ಸುಮಾರು ೧೨೬೦ ಕೋಟಿ ಡಾಲರುಗಳನ್ನು ವೆಚ್ಚಮಾಡಿ ದುವು. ಆಗಿನ ಧಾರಣೆವಾಸಿಗಳು ೧೯೧೩ನೆಯ ಇಸವಿಯಲ್ಲಿದ್ದಷ್ಟೇ ಆಗಿದ್ದರೆ ಈ ಬಾಬುಗಳಿಗಾಗಿ ೬೦೦ ಕೋಟಿ ಡಾಲರುಗಳಿಗಿಂತ ಹೆಚ್ಚು ವೆಚ್ಚವಾಗುತ್ತಿರಲಿಲ್ಲ.

ಈ ಮೇಲಿನ ಕಾರಣಗಳಿಂದ ಸರಕಾರದ ವೆಚ್ಚದ ಮೊತ್ತ ಏರುತ್ತದೆ. ಇದು ವಾಸ್ತವವಾಗಿ ಏರಿರುವ ವೆಚ್ಚವಲ್ಲ. ಕೇವಲ ಹೆಸರಿಗೆ ಮಾತ್ರ. ಇದು ಕೃತಕವಾದದ್ದು. ಹೆಸರಿಗೆ ಮಾತ್ರವಲ್ಲದೆ, ವಾಸ್ತವವಾಗಿಯೂ ಅನೇಕಬಾರಿ ಸರಕಾರದ ನಾನಾ ಬಾಬುಗಳ ವೆಚ್ಚ ಏರಿರುತ್ತದೆ. ಹೀಗೆ ಸರಕಾರದ ವೆಚ್ಚ ವಾಸ್ತವವಾಗಿ ಹೆಚ್ಚಿರುವುದಕ್ಕೆ ಮುಖ್ಯವಾದ ಕಾರಣಗಳು ಎರಡು :

೧. ಯುದ್ಧ.

೨. ಸರಕಾರ ಕೈಗೊಳ್ಳುವ ಕಾರ್ಯಭಾರಗಳ ವಿಸ್ತರಣೆ.

ಈಚೆಗೆ ಯುದ್ಧಗಳಿಂದ ಸರಕಾರಗಳು ಹೇರಳವಾದ ಹಣವನ್ನು ವೆಚ್ಚಮಾಡುತ್ತಿವೆ. ಒಂದು ದೇಶ ಇನ್ನೊಂದು ದೇಶದೊಡನೆ ಯುದ್ಧಮಾಡಿ ಅದಕ್ಕಾಗಿ ವೆಚ್ಚವಾಗುವ ಹಣದಿಂದ, ಆ ಸರಕಾರದ ವೆಚ್ಚದ ಮೊತ್ತವು ಏರುತ್ತದೆ. ಅಥವಾ ತನ್ನ ದೇಶವನ್ನು ಇತರ ರಾಷ್ಟ್ರಗಳ ಆಕ್ರಮಣದಿಂದ ರಕ್ಷಿಸಿಕೊಳ್ಳುವುದಕ್ಕಾಗಿ, ಯುದ್ಧವನ್ನು ನಿವಾರಣೆಮಾಡಿಕೊಳ್ಳುವುದಕ್ಕಾಗಿ, ತನ್ನ ಶಸ್ತ್ರಾಸ್ತ್ರಗಳ ಮತ್ತು ಸೈನಿಕರ ಬಲವನ್ನು ಬಲಪಡಿಸಿಕೊಳ್ಳುವುದಕ್ಕೆ ಹೆಚ್ಚು ಹಣ ವೆಚ್ಚಮಾಡುತ್ತದೆ. ಇದರಿಂದಲೂ ಸರಕಾರದ ವೆಚ್ಚ ಏರುವುದು. ಯುದ್ಧಗಳಿಗಾಗಿ ಮತ್ತು ಯುದ್ಧಸನ್ನಾಹಕ್ಕಾಗಿ, ಹೇರಳವಾಗಿ ಹಣವನ್ನು ವೆಚ್ಚಮಾಡುತ್ತಿದ್ದ ಪ್ರಸಂಗಗಳು ಹಿಂದಿನ ಕಾಲದಲ್ಲಿ ಕಡಮೆಯಾಗಿದ್ದುವು. ಈಗ ನಾಶಕಾರಕ ಶಸ್ತ್ರಾಸ್ತ್ರಗಳನ್ನು ವಿಶೇಷವಾಗಿ ನಿರ್ಮಿಸಲು ತೊಡಗಿರುವುದೇ ಹೆಚ್ಚು ವೆಚ್ಚಕ್ಕೆ ಮೂಲಕಾರಣ. ೧೯೨೦ನೆಯ ಇಸವಿಯಲ್ಲಿ ಯುದ್ಧಕ್ಕೆ ಬೇಕಾದ ಶಸ್ತ್ರಾಸ್ತ್ರ ಸಾಮಗ್ರಿಗಳಿಗಾಗಿ ಪ್ರಪಂಚದ ನಾನಾರಾಷ್ಟ್ರಗಳು ೧೦೦ ಕೋಟಿ ಪೌಂಡುಗಳ ಹಣವನ್ನು ವೆಚ್ಚಮಾಡಿದುವು. ಈಗ ಆ ಸಂಖ್ಯೆ ಇನ್ನೂ ಏರಿದೆ.* ಬ್ರಿಟನ್, ಫ್ರಾನ್ಸ್, ಅಮೆರಿಕಾ ದೇಶಗಳು ತಮ್ಮ ರಾಜ್ಯಾದಾಯದಲ್ಲಿ ಶೇಕಡ ೩೮ರಿಂದ ೩೮ರಷ್ಟು ಹಣವನ್ನು ಯುದ್ಧದ ವೆಚ್ಚಕ್ಕಾಗಿ ವಿನಿಯೋಗಿಸುತ್ತಿದ್ದುವು. ಅದೇ ಸಮಯದಲ್ಲಿ ಜಪಾನ್ ದೇಶ ತನ್ನ ಆದಾಯದಲ್ಲಿ ಅರ್ಧ ಹಣವನ್ನು ಯುದ್ಧಸಾಮಗ್ರಿಗಳಿಗಾಗಿ ವೆಚ್ಚಮಾಡುತ್ತಿತ್ತು. ಇಂಗ್ಲೆಂಡ್ ಸರಕಾರ ೧೯೧೮ರಿಂದ ೧೯೨೦ರವರೆಗಿನ ಆರು ವರ್ಷಗಳ ಯುದ್ಧಕಾಲದಲ್ಲಿ, ಯೂರೋಪು ಮಹಾಯುದ್ಧವಾಗುವುದಕ್ಕೆ ಮೊದಲು ಇನ್ನೂರೈವತ್ತು ವರ್ಷಗಳಲ್ಲಿ ಒಟ್ಟು ಎಷ್ಟು ಹಣವನ್ನು ವೆಚ್ಚಮಾಡಿತ್ತೋ ಅದಕ್ಕಿಂತ ಹೆಚ್ಚಾಗಿ ವೆಚ್ಚಮಾಡಿತು. ಇದರಿಂದ, ಯುದ್ಧಭೀತಿಯಿಂದ ಪಾರಾಗಲು ರಾಷ್ಟ್ರಗಳು ಎಷ್ಟು ಅಗಾಧವಾದ ಹಣವನ್ನು ವೆಚ್ಚಮಾಡುತ್ತವೆಯೆಂಬುದನ್ನು ಊಹಿಸಬಹುದು. ಸರಕಾರಗಳು ಯುದ್ಧಕಾಲದಲ್ಲಿ

* ೧೯೪೪ರಲ್ಲಿ ಇಂಗ್ಲೆಂಡ್ ಸರಕಾರವೊಂದೇ ಯುದ್ಧಕ್ಕೋಸ್ಕರ ೩೪೧ ಕೋಟಿ ಪೌಂಡುಗಳನ್ನು ವೆಚ್ಚಮಾಡಿತು. ೧೯೩೮ರಲ್ಲಿ ಅಲ್ಲಿನ ಸರಕಾರವು ಯುದ್ಧ ನಿವಾರಣೆಗಾಗಿ ಸುಮಾರು ೩೬ ಕೋಟಿ ಪೌಂಡು ವೆಚ್ಚಮಾಡುತ್ತಿತ್ತು. ಯುದ್ಧಕ್ಕೆ ಮುಂಚೆ ಸೈನ್ಯ ಮತ್ತು ರಕ್ಷಣೆಗಾಗಿ ೫೦ ಕೋಟಿ ರೂ. ವೆಚ್ಚಮಾಡುತ್ತಿದ್ದ ಇಂಡಿಯಾ ಸರಕಾರವು ೧೯೪೪-೪೫ರಲ್ಲಿ ಸುಮಾರು ೨೭೦ ಕೋಟಿ ರೂ. ಗಳನ್ನು ಈ ಬಾಬಿಗೆ ವೆಚ್ಚಮಾಡಿತು.

ಅಪಾರವಾದ ಹಣವನ್ನು ಸಾಲಮಾಡುತ್ತವೆ. ಆಮೇಲೆ ಆ ಹಣಕ್ಕೆ ಬಡ್ಡಿಯನ್ನು ಕೊಡುತ್ತ ಹೋಗಬೇಕು. ಸಾಲದ ಮೊಬಲಗನ್ನು ತೀರಿಸಲು ನಿಧಿಯನ್ನು ಸ್ಥಾಪಿಸಬೇಕು. ಇದಕ್ಕಾಗಿ ಪ್ರತಿವರ್ಷವೂ ಆ ಸರಕಾರಗಳು ಹೆಚ್ಚು ಹಣವನ್ನು ವೆಚ್ಚಮಾಡುತ್ತವೆ. ಇಂಗ್ಲೆಂಡ್ ಸರಕಾರ ಕಳೆದ ಯುದ್ಧಕ್ಕೆ ಮುಂಚೆ ಸುಮಾರು ಎರಡು ಕೋಟಿ ಪೌಂಡುಗಳಷ್ಟು ಬಡ್ಡಿ ಮತ್ತು ಸಾಲ ತೀರುವೆಯ ನಿಧಿಗಾಗಿ ವೆಚ್ಚ ಮಾಡುತ್ತಿತ್ತು. ೧೯೨೮ರ ವೇಳೆಗೆ ಈ ಬಾಬುಗಳ ವೆಚ್ಚ ಸುಮಾರು ೩೭ ಕೋಟಿ ಪೌಂಡುಗಳಿಗೇರಿತು. ಹೀಗೆ ಸರಕಾರಗಳ ವೆಚ್ಚದ ಮೊತ್ತ ಏರುತ್ತಿದೆ. ಇದರಲ್ಲಿನ ಬಹುಭಾಗ ಯುದ್ಧಪ್ರಯತ್ನ ಮತ್ತು ಅದರ ಪರಿಣಾಮದಿಂದ ಉಂಟಾದುದು.

ಸಾಮಾನ್ಯವಾಗಿ ಹಿಂದೆ ಪ್ರಜೆಗಳೇ ಸ್ವತಃ ನಿರ್ವಾಹ ಮಾಡಿಕೊಳ್ಳುತ್ತಿದ್ದ ಕಾರ್ಯಕಲಾಪಗಳು ಈಗ ಸರಕಾರದ ಕೈಸೇರಿ, ಸರಕಾರದ ಕಾರ್ಯಕ್ಷೇತ್ರ ವಿಸ್ತಾರವಾಗುತ್ತಿದೆ. ಸರಕಾರದ ಇಂದಿನ ಕಾರ್ಯಕಲಾಪಗಳನ್ನು ನಾವು ಪರಿಶೀಲಿಸಿದರೆ, ಸರಕಾರ ದಿನೇದಿನೇ ಹೆಚ್ಚುಹೆಚ್ಚಿನ ಸಮಾಜಸೇವೆ ಮತ್ತು ಸಂಪದಭ್ಯುದಯ ಕಾರ್ಯಗಳನ್ನು ಕೈಗೊಂಡು ಅವುಗಳನ್ನು ನಿರ್ವಹಿಸುತ್ತಿರುವುದು ತಿಳಿದುಬರುತ್ತದೆ. ಈಗ, ಹಿಂದೆ ಹಣದ ಖರ್ಚಿಲ್ಲದೆ ನಡೆಯುತ್ತಿದ್ದ ಕೆಲಸಗಳನ್ನು ಸರಕಾರ ಹಣಕೊಟ್ಟು ನಡಸಬೇಕಾಗಿದೆ. ದೇಶದ ಜನರು ನಾಗರಿಕರಾಗುತ್ತಾ ಬಂದಂತೆಲ್ಲಾ ಆ ಜನರಿಗೆ ಬೇಕಾದ ಸೌಲಭ್ಯಗಳಿಗಾಗಿ ಸರಕಾರ ಹೆಚ್ಚು ಹಣ ವೆಚ್ಚಮಾಡಬೇಕಾಗುತ್ತದೆ. ಜನರ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನವನ್ನು ಉತ್ತಮಗೊಳಿಸುವ ಭಾರ ಸರಕಾರದ ಮೇಲೆ ಬಿದ್ದು, ಅದು ಅನೇಕ ಕಾರ್ಯಭಾರಗಳನ್ನು ಹೊರಬೇಕಾಗುತ್ತದೆ. ಜನರಿಗೆ ಬೇಕಾದ ಕ್ರೀಡಾಕ್ಷೇತ್ರಗಳು, ವಿನೋದಸ್ಥಾನಗಳು, ವಿಶ್ರಾಂತಿ ಮಂದಿರಗಳು, ಬಡವರಿಗಾಗಿ ವಸತಿಗೃಹಗಳು, ನಿರುದ್ಯೋಗಿಗಳಿಗಾಗಿ ವಿಮೆ, ವೃದ್ಧಾಪ್ಯವೇತನ, ಆರೋಗ್ಯದ ಜೀವವಿಮೆ, ವಿಧವೆಯರಿಗೂ, ನಿರ್ಗತಿಕರಿಗೂ, ಸಹಾಯ ದ್ರವ್ಯ, ರೈಲ್ವೆ ಮತ್ತು ರಸ್ತೆಗಳ ನಿರ್ಮಾಣ, ಕೈಗಾರಿಕೆಗಳ ಸ್ಥಾಪನೆ, ವಾಣಿಜ್ಯ ವ್ಯಾಪಾರ ಪ್ರದರ್ಶನಗಳು, ವ್ಯವಸಾಯ ಪರಿಶೋಧನಾ ಕ್ಷೇತ್ರಗಳು, ಈ ತರದ ಅನೇಕ ವಿಧವಾದ ಹೆಚ್ಚುಹೆಚ್ಚು ಕಾರ್ಯಗಳನ್ನು ಕೈಗೊಳ್ಳುತ್ತಿದೆ. ಇದಕ್ಕಾಗಿ ಸರಕಾರ ಹೆಚ್ಚು ವೆಚ್ಚ ಮಾಡಬೇಕಾದುದು ಅವಶ್ಯಕ. ಒಟ್ಟಿನಲ್ಲಿ ಜನರ ಯೋಗಕ್ಷೇಮಕ್ಕೆ ಯಾವ ಯಾವ ಮುಖ್ಯಕಾರ್ಯಗಳು ನಡೆಯಬೇಕೋ ಆ ಕಾರ್ಯಗಳ ನಿರ್ವಾಹವನ್ನು ಇಂದು ಸರಕಾರವೇ ವಹಿಸಿಕೊಳ್ಳುತ್ತಿರುವುದರಿಂದ ಅದರ ವೆಚ್ಚ ಏರುತ್ತಿರುವುದಕ್ಕೆ ಕಾರಣವಾಗಿದೆ.

ಪ್ರಪಂಚದಲ್ಲಿನ ಕೆಲವು ಪ್ರಮುಖ ರಾಷ್ಟ್ರಗಳು ಸಮಾಜಸೇವೆಯ ಬಾಬುಗಳಿಗಾಗಿಯೇ ಎಷ್ಟು ವೆಚ್ಚಮಾಡುತ್ತಿವೆ ಎಂಬುದನ್ನು ಈ ಮುಂದಿನ ಪಟ್ಟಿಯು ತೋರಿಸುತ್ತದೆ :—

## ಬಾಬುಗಳು

| ದೇಶ | ವಿದ್ಯಾಭ್ಯಾಸ | ಆರೋಗ್ಯ | ನಿರುದ್ಯೋಗ ನಿವಾರಣೆ | ಬಡತನದ ಪರಿಹಾರ | ಅನಾಥರಕ್ಷಣೆ |
|---|---|---|---|---|---|
| | ಕೋಟಿ ರೂ. | ಕೋಟಿ ರೂ. | ಕೋಟಿ ರೂ. | ಕೋಟಿ ರೂ. | ಕೋಟಿ ರೂ. |
| ಇಂಗ್ಲೆಂಡ್ | ೨೬೪ | ೧೫೫ | ೧೪೧ | ೧೧೨ | ೧೧೬ |
| ಫ್ರಾನ್ಸ್ | ೩೬ | ೧೨ | .... | ೧೪ | .... |
| ರಷ್ಯ | ೪೦೭.೪ | ೨೧೧.೪ | .... | ೯೬ | .... |
| ಇಂಡಿಯಾ | ೧೨.೫ | ೫.೬ | .... | .... | .... |

ಈ ಸಮಾಜಸೇವೆ ಮತ್ತು ಸಂಪದಭ್ಯುದಯ ಕಾರ್ಯಗಳಿಗಾಗಿ ವೆಚ್ಚವಾಗುವ ಹಣವನ್ನು ಕೇಂದ್ರ ಪ್ರಾಂತ ಮತ್ತು ಸ್ಥಳೀಯ ಸರ್ಕಾರಗಳು ಮೂರೂ ವೆಚ್ಚ ಮಾಡುತ್ತವೆ.

ರಾಜ್ಯದ ವಿಸ್ತೀರ್ಣ ಮತ್ತು ಜನಸಂಖ್ಯೆ ಇವುಗಳನ್ನು ಅನುಸರಿಸಿ ವೆಚ್ಚದ ಮೊತ್ತ ವ್ಯತ್ಯಾಸವಾಗುತ್ತದೆ. ಹಾಗೆಯೇ ಒಂದು ರಾಷ್ಟ್ರದ ವೆಚ್ಚಕ್ಕೂ ಇನ್ನೊಂದು ರಾಷ್ಟ್ರದ ವೆಚ್ಚಕ್ಕೂ ವ್ಯತ್ಯಾಸ ಕಂಡುಬರುತ್ತದೆ. ಒಂದು ಸರ್ಕಾರದ ವೆಚ್ಚ ಯಾವಾಗಲೂ ಆ ದೇಶದ ಪ್ರಜೆಗಳ ಆದಾಯದ ಪ್ರಮಾಣ, ಅವರಿಗೆ ಕೊಡಬೇಕಾದ ಸೌಲಭ್ಯಗಳು, ಅಲ್ಲಿಯ ಸ್ವಾಭಾವಿಕ ಲಕ್ಷಣಗಳು, ಆ ದೇಶದ ಸುತ್ತಮುತ್ತಲ ರಾಷ್ಟ್ರಗಳ ಪರಿಸ್ಥಿತಿ, ಇವುಗಳನ್ನು ಅವಲಂಬಿಸಿರುತ್ತದೆ. ದೇಶದ ಆದಾಯ ಹೆಚ್ಚಿದಂತೆಲ್ಲಾ ಅಲ್ಲಿಯ ವೆಚ್ಚವೂ ಹೆಚ್ಚುತ್ತದೆ. ಇಂಗ್ಲೆಂಡ್ ದೇಶದಲ್ಲಿನ ಸರಾಸರಿ ವಾರ್ಷಿಕ ಆದಾಯ ೯೦೦ ರೂಪಾಯಿಗಳಷ್ಟಿರುವುದರಿಂದ ಅಲ್ಲಿಯ ಸರ್ಕಾರವು ೧೨೦೦ ಕೋಟಿ ರೂಪಾಯಿಗಳನ್ನು ವೆಚ್ಚಮಾಡಲು ಸಾಧ್ಯವಾಗಿದೆ. ನಮ್ಮ ದೇಶದ ಸರಾಸರಿ ಆದಾಯ ೮೦ ರೂಪಾಯಿ. ನಾವು ಅಷ್ಟು ವೆಚ್ಚಮಾಡಲು ಸಾಧ್ಯವೆ? ಅಮೆರಿಕಾ ಮತ್ತು ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ, ವೃದ್ಧರಿಗೆ ಮತ್ತು ನಿರ್ಗತಿಕರಿಗೆ ಲಕ್ಷಾಂತರ ರೂಪಾಯಿಗಳನ್ನು ವೆಚ್ಚ ಮಾಡುತ್ತಾರೆ. ಅವಿಭಕ್ತ ಕುಟುಂಬದ ಜೀವನ ಮತ್ತು ಧರ್ಮ ಸಂಸ್ಥೆಗಳುಳ್ಳ ನಾವು ಆ ಬಾಬುಗಳಿಗಾಗಿ ಅಷ್ಟು ಹಣವನ್ನು ವೆಚ್ಚ ಮಾಡಬೇಕಾಗಿಲ್ಲ. ಕ್ಷಾಮ ಬಾಧೆ, ಭೂಕಂಪದ ಭೀತಿ, ಪ್ರವಾಹಗಳ ತೊಂದರೆ, ಸಾಂಕ್ರಾಮಿಕ ರೋಗಗಳು ಇವುಗಳುಳ್ಳ ರಾಷ್ಟ್ರಗಳು ಎಷ್ಟು ಹಣ ವೆಚ್ಚ ಮಾಡಬೇಕೋ ಅಷ್ಟನ್ನು ಈ ತೊಂದರೆಗಳಿಲ್ಲದ ರಾಷ್ಟ್ರಗಳು ವೆಚ್ಚ ಮಾಡಬೇಕಾಗಿಲ್ಲ. ಪ್ರಬಲವಾದ ರಾಷ್ಟ್ರಗಳಿಂದ ಆವರಿಸಲ್ಪಟ್ಟ ರಾಜ್ಯದಲ್ಲಿ ರಕ್ಷಣೆಗೆ ತಗಲುವ ವೆಚ್ಚಕ್ಕೂ ಶಾಂತಿಯಲ್ಲಿ ನಂಬಿಕೆ

ಯಿಟ್ಟಿರುವ ರಾಷ್ಟ್ರಗಳ ಮಧ್ಯೆ ಇರುವ ದೇಶದಲ್ಲಿನ ರಕ್ಷಣೆಯ ಖರ್ಚಿಗೂ ವ್ಯತ್ಯಾಸ ವಿರಲೇಬೇಕು. ಹೀಗೆ ಒಂದು ದೇಶದ ವೆಚ್ಚ ಎಲ್ಲ ಕಾಲದಲ್ಲಿಯೂ ಒಂದೇ ವಿಧವಾಗಿರುವುದಿಲ್ಲ. ಇದು ಸಾಧ್ಯವೂ ಅಲ್ಲ. ಒಂದು ದೇಶದ ವೆಚ್ಚದ ಮೊತ್ತಕ್ಕೂ ಇನ್ನೊಂದು ದೇಶದ ವೆಚ್ಚದ ಮೊತ್ತಕ್ಕೂ ತಾರತಮ್ಯವಿರುತ್ತದೆ ; ಇದು ಸಹಜ. ಹಾಗೆಯೇ ವೆಚ್ಚದ ಬಾಬುಗಳಲ್ಲಿಯೂ ವ್ಯತ್ಯಾಸ ಕಂಡುಬರುತ್ತದೆ. ಇದೂ ಸ್ವಾಭಾವಿಕವಾದುದು.

# ಪ್ರಕರಣ ೪

## ಸರಕಾರದ ವೆಚ್ಚದ ವಿಂಗಡಣೆ

ಸರಕಾರ ವೆಚ್ಚಮಾಡುವ ಬಾಬುಗಳನ್ನು ವಿಂಗಡಿಸದಿದ್ದರೆ ಸರಕಾರದ ವೆಚ್ಚವೇನು, ವೆಚ್ಚದ ರೀತಿಯೇನು, ಎಂಬುದನ್ನು ಶಾಸ್ತ್ರೀಯವಾಗಿ ತಿಳಿಯಲು ಅಸಾಧ್ಯವಾಗುವುದು. ಹೀಗೆ ವೆಚ್ಚದ ಬಾಬುಗಳನ್ನು ಸಮರ್ಪಕವಾಗಿ ವಿಂಗಡಿಸುವುದು ಕಷ್ಟಸಾಧ್ಯ. ಅರ್ಥಶಾಸ್ತ್ರಜ್ಞರಲ್ಲಿ ವೆಚ್ಚದ ವಿಂಗಡಣೆಯನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ಮಾಡಿದ್ದಾರೆ.

ಸರಕಾರ ವರ್ಷಂಪ್ರತಿ ಮಾಡುವ ವೆಚ್ಚವನ್ನು ಆಯವ್ಯಯದ ಅಂದಾಜುಗಳಲ್ಲಿ ಕಾಣುವ ಪ್ರಕಾರ, ಸರಕಾರದ ನಾನಾ ಶಾಖೆಗಳನ್ನು ಅನುಸರಿಸಿ ವಿಂಗಡಣೆ ಮಾಡಬಹುದು. ಹುಟ್ಟುವಳಿಯನ್ನು ಸಂಗ್ರಹಿಸುವ ಇಲಾಖೆಗಳಿಗಾಗಿ ತಗಲುವ ವೆಚ್ಚ, ಪೋಲೀಸ್, ಕೋರ್ಟು ಕಚೇರಿಗಳಿಗಾಗಿ ಆಗುವ ಹಣ, ಸಾಲ ತೀರುವೆಯ ನಿಧಿ ಮತ್ತು ಬಡ್ಡಿಗಾಗಿ ಮಾಡುವ ವೆಚ್ಚ, ಒಳ ಆಡಳಿತದ ವೆಚ್ಚ, ನೌಕರರ ವಿಶ್ರಾಂತಿ ವೇತನಗಳು, ರಕ್ಷಣೆ, ವಿದ್ಯಾಭ್ಯಾಸ, ವೈದ್ಯಸಹಾಯ, ವ್ಯವಸಾಯ, ಕೈಗಾರಿಕೆ ಮೊದಲಾದ ಕಾರ್ಯಗಳಿಗಾಗಿ ಆಗುವ ವೆಚ್ಚ, ರಸ್ತೆ, ಕಾಲುವೆ, ಸೇತುವೆ, ಕಾಮಗಾರಿ ಕೆಲಸಗಳಿಗಾಗಿ ಬೇಕಾಗುವ ಹಣ, ಹೀಗೆ ವಿಂಗಡಣೆ ಮಾಡಬಹುದು. ಈ ವಿಧವಾದ ವಿಂಗಡಣೆಯಿಂದ, ಸರಕಾರದ ಬೇರೆಬೇರೆ ಇಲಾಖೆಗಳ ವೆಚ್ಚದ ಮೊತ್ತವನ್ನು ಮಾತ್ರ ತಿಳಿಯಲು ಸಾಧ್ಯವಾಗುವುದು. ಆದರೆ ಸರಕಾರದ ವೆಚ್ಚದ ಹಿಂದೆ ಅಡಗಿರುವ ತತ್ವವನ್ನಾಗಲಿ, ಇಂತಹ ವೆಚ್ಚದಿಂದ ಪ್ರಜೆಗಳಿಗುಂಟಾಗುವ ಸಾಧಕ ಬಾಧಕಗಳನ್ನಾಗಲಿ, ಸುಲಭವಾಗಿ ಮತ್ತು ಖಚಿತವಾಗಿ ಅರಿಯಲು ಸಾಧ್ಯವಿಲ್ಲದೆ ಹೋಗುವುದು.

ಸರಕಾರದ ವೆಚ್ಚವೆಲ್ಲವೂ ಪ್ರಜೆಗಳ ಸುಖ ಮತ್ತು ಅಭ್ಯುದಯಗಳಿಗಾಗಿ. ಪ್ರಜೆಗಳು ಸರಕಾರಕ್ಕೆ ಸಲ್ಲಿಸುವ ವರಮಾನಕ್ಕೆ ಪ್ರತಿಯಾಗಿ ಅವರಿಗೆ ದೊರೆಯುವ ಸೌಲಭ್ಯಗಳನ್ನು ಅನುಸರಿಸಿ ವೆಚ್ಚವನ್ನು ವಿಂಗಡಿಸುವುದು ಒಂದು ಕ್ರಮ. ಹೀಗೆ ವೆಚ್ಚವನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು.

ಒಂದನೆಯದು, ದೇಶದ ಎಲ್ಲ ಪ್ರಜೆಗಳಿಗೂ ಅತ್ಯಗತ್ಯವಾದ ಮತ್ತು ಏಕರೀತಿ ಅನ್ವಯಿಸುವ ರಕ್ಷಣಕಾರ್ಯಗಳಿಗಾಗಿ ಮಾಡುವ ವೆಚ್ಚ. ಸೈನ್ಯ ಮೊದಲಾದವುಗಳಿಗಾಗಿ ಆಗುವ ವೆಚ್ಚದಿಂದ ದೊರೆಯುವ ಸೌಕರ್ಯ, ದೇಶದ ಪ್ರಜೆಗಳೆಲ್ಲರಿಗೂ ಸೇರುತ್ತದೆ. ಎರಡನೆಯದು, ಸಮಾಜದ ಒಂದು ಭಾಗದವರಿಗಾಗಿ ಮಾತ್ರ ಅನ್ವಯಿಸುವಂತಹ ಕೆಲಸಗಳಿಗಾಗಿ ಆಗುವ ವೆಚ್ಚ. ಬಡವರ, ಕೂಲಿ

ಗಾರರ ಜೀವನವನ್ನು ಉತ್ತಮಗೊಳಿಸುವುದಕ್ಕಾಗಿ ವಸತಿಗೃಹಗಳನ್ನು ನಿರ್ಮಾಣ ಮಾಡುವುದು, ಅವರಿಗಾಗಿಯೇ ಶಾಲೆಗಳನ್ನು ತೆರೆಯುವುದು, ಉಚಿತವಾಗಿ ನೀರು ದೀಪ ಇವುಗಳ ಸೌಕರ್ಯಗಳನ್ನು ಕಲ್ಪಿಸುವುದು, ಈ ಬಾಬುಗಳಿಗಾಗಿ ಆಗುವ ವೆಚ್ಚ ಈ ಎರಡನೆಯ ಗುಂಪಿಗೆ ಸೇರಿದುದು. ಈ ವೆಚ್ಚದಿಂದ ದೊರೆಯುವ ಸೌಕರ್ಯಗಳು ದೇಶದ ಎಲ್ಲ ಪ್ರಜೆಗಳಿಗೂ ಸೇರುವುದಿಲ್ಲ. ಕೇವಲ ಕೆಲವು ಮಂದಿಗೆ ಮಾತ್ರ.

ಮೂರನೆಯ ವಿಂಗಡಣೆಯೆಂದರೆ, ಒಂದು ತೆರದ ವೆಚ್ಚದಿಂದ ಸಮಾಜದ ಒಂದು ಭಾಗದವರಿಗೆ ಹೆಚ್ಚು ಸಹಾಯ ಸೌಲಭ್ಯಗಳು ದೊರೆಯುತ್ತವೆ. ಆದರೂ ಅಂತಹ ಕೆಲಸಗಳ ನಿರ್ಮಾಣದಿಂದ, ಇತರರಿಗೂ ಅಲ್ಪಸ್ವಲ್ಪ ಸಹಾಯ ದೊರೆಯುತ್ತದೆ. ಉದಾಹರಣೆಗೆ, ಉತ್ತಮವಾದ ರಸ್ತೆಗಳ ನಿರ್ಮಾಣದಿಂದ ಮೋಟಾರು, ಬೈಸಿಕಲ್ಲು, ಗಾಡಿ ಮೊದಲಾದ ವಾಹನಗಳುಳ್ಳವರಿಗೆ ಹೆಚ್ಚು ಉಪಯೋಗವಾಗುತ್ತದೆ. ಕೆರೆ ಕಾಲುವೆಗಳ ನಿರ್ಮಾಣದಿಂದ ಜಮೀನುಳ್ಳವರಿಗೇ ಹೆಚ್ಚು ಸಹಾಯ ದೊರೆಯುವುದು. ಹಾಗೆಯೇ ನ್ಯಾಯಸ್ಥಾನಗಳ ಸ್ಥಾಪನೆಯಿಂದ ಹಣಕಾಸಿನ ವ್ಯವಹಾರದಲ್ಲಿ ನಿರತರಾಗಿರುವವರಿಗೇ ಉಪಯೋಗವಾಗುವುದು. ಆದರೂ, ಈ ವಿಧದ ವೆಚ್ಚದಿಂದ ಜನಸಾಮಾನ್ಯದವರಿಗೂ ಪರೋಕ್ಷವಾಗಿ ಸೌಕರ್ಯ ದೊರೆತಂತಾಗುತ್ತದೆ.

ಒಂದು ದೇಶದಲ್ಲಿ ಸರಕಾರ ಕೆಲವು ಜಾತಿಗಳ ಮತ್ತು ಕೋಮುಗಳ ಅಭಿವೃದ್ಧಿಗಾಗಿಯೇ ಕೊಂಚ ಹಣವನ್ನು ವೆಚ್ಚಮಾಡುತ್ತದೆ. ಹಿಂದುಳಿದ ಪಂಗಡದವರಿಗಾಗಿ ವಿದ್ಯಾರ್ಥಿ ವೇತನಗಳು, ವಿಶೇಷ ಶಾಲೆಗಳು, ವೈದ್ಯಸಹಾಯ, ಉಚಿತವಾಗಿ ಭೂಮಿಯನ್ನು ಕೊಡುವುದು, ಸಾಗುವಳಿಗೆ ಸಹಾಯ ಮಾಡುವುದು, ಈ ಬಾಬುಗಳಿಗೆ ತಗಲುವ ವೆಚ್ಚದಿಂದ ಸಮಾಜದ ಒಂದು ಕೋಮಿಗೆ ಮಾತ್ರ ಸುಖ ಸೌಲಭ್ಯಗಳು ದೊರೆಯುತ್ತವೆ. ಈ ವಿಧವಾದ ವಿಂಗಡಣೆ ನಾಲ್ಕನೆಯದು.

ಈ ತೆರದ ವಿಂಗಡಣೆಯಿಂದ ಸರಕಾರ ಮಾಡುವ ವೆಚ್ಚದ ಎಲ್ಲ ಬಾಬುಗಳನ್ನೂ ಖಚಿತವಾಗಿ ಇದರಲ್ಲಿ ತರುವುದು ಸಾಧ್ಯವಾಗುವುದಿಲ್ಲ. ಬಡವರ ವಸತಿಗಾಗಿಯೂ ಅವರ ಜೀವನವನ್ನು ಉತ್ತಮಗೊಳಿಸುವುದಕ್ಕಾಗಿಯೂ ಮಾಡುವ ವೆಚ್ಚದಿಂದ ದೊರೆಯುವ ಪ್ರಯೋಜನ ಸದ್ಯದಲ್ಲಿ ಸಮಾಜದ ಒಂದು ಭಾಗದವರಿಗೆ ಮಾತ್ರ ಸೇರುವಂತಾದರೂ, ದೇಶದಲ್ಲಿ ಕಳ್ಳತನ ದರೋಡೆಗಳು ನಿಂತು ಶಾಂತಿ ದೊರೆಯಲು ಅನುಕೂಲ ಮಾಡಿದಂತಾಗುವುದು. ಹಾಗೆಯೇ ಹಿಂದುಳಿದವರ ಸೌಲಭ್ಯಗಳಿಗಾಗಿ ವೆಚ್ಚವಾಗುವ ಹಣದ ಉಪಯೋಗವು ಕೇವಲ ಕೆಲವು ಮಂದಿಗೆ ಮಾತ್ರವೆಂದು ನಮಗೆ ತೋರಿದರೂ, ಮುಂದೆ, ಸಮಾಜದಲ್ಲಿರುವ ಅಂತರವು ಮಾಯವಾಗಿ, ಒಂದು ದೇಶದ ಎಲ್ಲ ಪ್ರಜೆಗಳೂ, ವಿದ್ಯಾವಂತರೂ ಸುಶಿಕ್ಷಿತರೂ ಸುಸಂಸ್ಕೃತರೂ ಆಗಲು ಅವಕಾಶವನ್ನುಂಟುಮಾಡುತ್ತದೆ. ಪ್ರಕೃತ ಆ ವೆಚ್ಚದಿಂದ ಒಂದು ಕೋಮಿನವರಿಗೆ ವಿಶೇಷವಾದ ಸೌಲಭ್ಯಗಳು ಒದಗಿದರೂ ಅದರಿಂದ ಮುಂದೆ ಆ ದೇಶದ ಸಾಮಾನ್ಯ ಜೀವನವೇ ಮೇಲಿನ ಮಟ್ಟಕ್ಕೆ ಏರಿದಂತಾಗುವುದು. ಹೀಗಿರುವುದರಿಂದ ಈ ವಿಧವಾದ ವೆಚ್ಚವನ್ನು ಸಮಾಜದ ಅಲ್ಪಸಂಖ್ಯೆಯ

ಪ್ರಯೋಜನಕ್ಕಾಗಿ ಮಾತ್ರ ವಿನಿಯೋಗವಾಗುವ ವೆಚ್ಚವೆಂದು ಪರಿಗಣಿಸುವುದು ಸಾಧ್ಯವೆ? ಹೀಗೆಯೇ ಸರಕಾರವು ನಿರ್ಮಿಸುವ ರಸ್ತೆಗಳು ನ್ಯಾಯಸ್ಥಾನಗಳು ಮೊದಲಾದವುಗಳಿಂದ ಕೇವಲ ಅಲ್ಪಸಂಖ್ಯೆಯ ಜನರು ಮಾತ್ರವೇ ಉಪಯೋಗ ಹೊಂದಿದರೂ, ಇದನ್ನು ದೇಶದ ಉನ್ನತಿಗಾಗಿ ಮತ್ತು ಇಡಿಯ ಜನಸಾಮಾನ್ಯದ ಅಭಿವೃದ್ಧಿಗಾಗಿ ಮಾಡುವ ವೆಚ್ಚವೆಂದು ಲೆಕ್ಕ ಮಾಡಬೇಡವೆ? ಈ ದೃಷ್ಟಿಯಿಂದ ನೋಡಿದರೆ ಮೇಲಿನ ವಿಂಗಡಣೆಯು ಅಸಮರ್ಪಕವಾದುದೆಂದು ತೋರಿಬರುವುದು.

ವೆಚ್ಚದ ಬಾಬುಗಳನ್ನು ಸಾಮಾನ್ಯ ಮತ್ತು ವಿಶೇಷ ವೆಚ್ಚಗಳೆಂದು ಎರಡು ಭಾಗವಾಗಿ ವಿಂಗಡಿಸಬಹುದು. ಆಯಾ ವರ್ಷದಲ್ಲಿ ಉತ್ಪತ್ತಿಯಾಗುವ ಸರಕಾರದ ಹುಟ್ಟುವಳಿಯಿಂದಲೇ ನಡೆಯಬಹುದಾದ ವೆಚ್ಚವನ್ನು ಸಾಮಾನ್ಯ ವೆಚ್ಚವೆಂದೂ ಯುದ್ಧ, ಕ್ಷಾಮನಿವಾರಣೆ, ಭೂಕಂಪ ಮೊದಲಾದ ವಿಶೇಷ ಪ್ರಸಂಗಗಳು ಒದಗಿದಾಗ ಅವುಗಳ ನಿವಾರಣೆಗಾಗಿ ಮಾಡುವ ವೆಚ್ಚವನ್ನು ವಿಶೇಷ ವೆಚ್ಚವೆಂದೂ ಕರೆಯಬಹುದು. ಸಾಲ ಮಾಡಿ ವೆಚ್ಚಮಾಡುವ ಹಣವನ್ನು ಬಹುಮಟ್ಟಿಗೆ ಎರಡನೆಯ ಗುಂಪಿಗೆ ಸೇರಿಸುವುದು ಸಂಪ್ರದಾಯ. ಒಂದು ದೇಶದಲ್ಲಿ ಯಾವುದಾದರೂ ಒಂದು ಸಮಯದಲ್ಲಿ, ನಾಲೆಗಳನ್ನು ತೆಗೆಯುವುದು, ಕೈಗಾರಿಕೆಗಳನ್ನು ಸ್ಥಾಪಿಸುವುದು, ರೈಲ್ವೆ ಮೊದಲಾದವುಗಳನ್ನು ನಿರ್ಮಿಸುವುದು ಮೊದಲಾದ ಮಹಾಕಾರ್ಯಗಳಿಗಾಗಿ ಸರಕಾರವು ಸಾಲ ಮಾಡಬಹುದು. ಹೀಗೆ ಮಾಡಿದ ಸಾಲದ ಬಡ್ಡಿಯನ್ನು ಪ್ರತಿವರ್ಷವೂ ವಾರ್ಷಿಕ ರಾಜಾದಾಯದಿಂದಲೇ ಪಾವತಿ ಮಾಡುತ್ತದೆ. ಯುದ್ಧಕ್ಕಾಗಿ ಮಾಡಿದ ಸಾಲದ ತೀರುವೆ ಮತ್ತು ಬಡ್ಡಿ, ಇವುಗಳಿಗಾಗಿಯೂ ವರ್ಷಂಪ್ರತಿ ಆಯಾ ವರ್ಷದ ಹುಟ್ಟುವಳಿಯಲ್ಲಿ ಒಂದು ಭಾಗವನ್ನು ತೆಗೆದಿಡುತ್ತದೆ. ಹೀಗೆ ಮೊದಲು ವಿಶೇಷ ವೆಚ್ಚವಾಗಿ ಪ್ರಾರಂಭವಾದ ಕೆಲವು ಬಾಬುಗಳು ಸಾಮಾನ್ಯ ವೆಚ್ಚದ ಬಾಬುಗಳಾಗಿ ಪರಿಣಮಿಸುತ್ತವೆ. ಅಲ್ಲದೆ ಈ ವಿಂಗಡಣೆಯಿಂದ, ವೆಚ್ಚದ ಪರಿಣಾಮವನ್ನಾಗಲಿ ವೆಚ್ಚದ ತತ್ವವನ್ನಾಗಲಿ ತಿಳಿಯಲು ಸಾಧ್ಯವಾಗುವುದಿಲ್ಲ.

ಸರಕಾರದ ವೆಚ್ಚವನ್ನು ಸರಿಯಾಗಿ ವಿಂಗಡಿಸಬೇಕಾಗಿದ್ದರೆ ಮೊದಲು ಸರಕಾರದ ಕಾರ್ಯಗಳ ವಿಭಜನೆ ಮಾಡಬೇಕು. ಅಂತಹ ವಿಭಜನೆಗೆ ಅನ್ವಯಿಸುವ ರೀತಿಯಲ್ಲಿ ವೆಚ್ಚದ ಬಾಬುಗಳನ್ನು ವಿಂಗಡಿಸಬೇಕು. ಹೀಗೆ ಮಾಡುವುದರಿಂದ ಸರಕಾರ ಹೇಗೆ ತನ್ನ ಉದ್ದೇಶವನ್ನು ಸಾಗಿಸುತ್ತಿದೆಯೆಂಬುದೂ, ಏತಕ್ಕಾಗಿ ಹೇಗೆ ವೆಚ್ಚಮಾಡುತ್ತಿದೆಯೆಂಬುದೂ, ವೆಚ್ಚದ ಬದಲಾವಣೆ ಯಾವ ಮಾರ್ಗವನ್ನು ಅನುಸರಿಸಿದೆಯೆಂಬುದೂ ಗೊತ್ತಾಗುತ್ತದೆ.

ಪ್ರತಿಯೊಂದು ಸರಕಾರವೂ ಅನೇಕ ಕಾರ್ಯಭಾಗಗಳನ್ನು ಕೈಗೊಂಡಿರುತ್ತದೆ. ಆ ಕಾರ್ಯಗಳನ್ನೂ ಅದಕ್ಕೆ ತಗಲುವ ವೆಚ್ಚವನ್ನೂ ಎರಡು ಭಾಗವಾಗಿ ವಿಂಗಡಿಸಬಹುದು: ೧. ಪ್ರಧಾನವಾದದ್ದು; ೨. ಐಚ್ಛಿಕವಾದದ್ದು. ಪ್ರತಿಯೊಂದು ಸರಕಾರವೂ ಅತ್ಯಗತ್ಯವಾಗಿ ಮಾಡಬೇಕಾದ ಕೆಲಸಗಳು ಕೆಲವಿರುತ್ತವೆ. ಒಂದು ದೇಶದ ಜನರ ಶರೀರ ಮತ್ತು ಆಸ್ತಿ ಪಾಸ್ತಿಗಳನ್ನು ಇತರ ದೇಶದ ಜನರ

ಆಕ್ರಮಣ ಮೊದಲಾದವುಗಳಿಂದ ರಕ್ಷಿಸಬೇಕಾದುದು ಮೊದಲನೆಯ ಕರ್ತವ್ಯ. ಇತರ ರಾಷ್ಟ್ರಗಳ ದೊರೆಗಳು ದಂಡೆತ್ತಿ ಬರದಂತೆ ಸೈನ್ಯವನ್ನು ಏರ್ಪಾಡು ಮಾಡಬೇಕು.

ದೇಶದಲ್ಲಿ ಅಂತಃಕಲಹ, ದರೋಡೆ, ಕಳ್ಳತನ, ಅತ್ಯಾಚಾರಗಳು ನಡೆಯದಂತೆ, ಪೋಲೀಸು, ನ್ಯಾಯಸ್ಥಾನ, ಇವುಗಳನ್ನು ಏರ್ಪಾಡು ಮಾಡಬೇಕು. ದೇಶದ ಆಡಳಿತವನ್ನು ಸುಸೂತ್ರವಾಗಿ ನಡಸಿಕೊಂಡು ಹೋಗುವುದಕ್ಕಾಗಿ ಅನೇಕ ಖಾತೆಗಳನ್ನೂ ಅದಕ್ಕೆ ತಕ್ಕ ಸಿಬ್ಬಂದಿಯನ್ನೂ ಏರ್ಪಡಿಸಬೇಕು. ಆಮೇಲೆ ತಾನು ಮಾಡಿರುವ ಸಾಲಕ್ಕಾಗಿ ಮತ್ತು ಬಡ್ಡಿಗಾಗಿ ಹಣವನ್ನು ಪಾವತಿ ಮಾಡಬೇಕು. ಈ ಕೆಲಸಗಳಿಗೆ ಎಂದರೆ, ಸೈನ್ಯ, ನಾವೆ, ಪೋಲೀಸು, ನ್ಯಾಯ ಖಾತೆ, ಆಡಳಿತ, ಸಾಲದ ಬಡ್ಡಿ ಇವುಗಳಿಗಾಗಿ ಆಗುವ ವೆಚ್ಚವನ್ನು ಪ್ರಧಾನ ಕಾರ್ಯಗಳಿಗಾಗಿ ಅಥವಾ ಆದ್ಯ ಕರ್ತವ್ಯಗಳಿಗಾಗಿ ತಗಲುವ ವೆಚ್ಚವೆಂದು ಭಾವಿಸಬಹುದು.

ಎರಡನೆಯ ವಿಧದ ವೆಚ್ಚವೆಂದರೆ: ಸಮಾಜ ಜೀವನವನ್ನು ಉತ್ತಮಗೊಳಿಸುವುದಕ್ಕಾಗಿ, ನಾನಾಮುಖವಾಗಿ ನಡೆಸುವ ವೆಚ್ಚ. ಇದು ಐಚ್ಛಿಕವಾದುದು. ಒಂದು ದೇಶವು ಮುಂದಕ್ಕೆ ಬರಬೇಕಾದರೆ ಆ ದೇಶದ ಜನರು ವಿದ್ಯಾವಂತರಾಗಬೇಕು. ದೇಶದಲ್ಲಿ ವಿದ್ಯೆಯನ್ನು ಪ್ರಚಾರ ಮಾಡುವುದಕ್ಕಾಗಿ ಶಾಲೆಗಳನ್ನು ಸ್ಥಾಪಿಸಬೇಕು. ಜನರ ಆರೋಗ್ಯಭಾಗ್ಯ ರಕ್ಷಣೆಗಾಗಿ ಪ್ರಜೆಗಳು ಆರೋಗಿಗಳಾಗಿ ದೃಢಕಾಯರಾಗಿ ಆಗುವಂತೆ, ರೋಗ ರುಜಿನಗಳಿಂದ ಪ್ರಜಾಸಂಖ್ಯೆ ಕ್ಷೀಣಿಸದಂತೆ ನೋಡಿಕೊಳ್ಳುವುದಕ್ಕಾಗಿ ವೈದ್ಯಶಾಲೆಗಳನ್ನು ನಿರ್ಮಾಣ ಮಾಡಬೇಕು. ಬಡವರ ಜೀವನವನ್ನು ಉತ್ತಮಗೊಳಿಸುವುದಕ್ಕಾಗಿ ನಾನಾತರದ ಏರ್ಪಾಟುಗಳನ್ನು ಮಾಡಬೇಕು. ನಿರುದ್ಯೋಗ ಸಮಸ್ಯೆಯನ್ನು ನಿವಾರಣೆ ಮಾಡಬೇಕು. ಕ್ಷಾಮನಿವಾರಣೋಪಾಯಗಳಿಗೆ ಗಮನ ಕೊಡಬೇಕು. ಹಾಗೆಯೇ ಒಂದು ದೇಶದ ಆರ್ಥಿಕ ಜೀವನವನ್ನು ಉತ್ತಮಗೊಳಿಸುವುದಕ್ಕೆ ವ್ಯವಸಾಯವನ್ನು ಉತ್ತಮಗೊಳಿಸಬೇಕು; ದೊಡ್ಡ ದೊಡ್ಡ ಕೈಗಾರಿಕೆಗಳನ್ನು ನಿರ್ಮಿಸಬೇಕು; ರಸ್ತೆ, ನಾಲೆ, ರೈಲು ಮೊದಲಾದವುಗಳನ್ನು ಹೆಚ್ಚು ಮಾಡಬೇಕು. ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಡಬೇಕು. ಇಂತಹ ಕಾರ್ಯಗಳಿಗಾಗಿ ಸರಕಾರವು ವೆಚ್ಚಮಾಡುವ ಹಣ ಎರಡನೆಯ ಗುಂಪಿಗೆ ಸೇರಿದ್ದು. ಈ ತೆರದ ವೆಚ್ಚವು ದೇಶದ ಜನರ ಜೀವನವನ್ನು ಉತ್ತಮಗೊಳಿಸುತ್ತದೆ; ಒಂದು ಜನಾಂಗದ ಸೌಖ್ಯವನ್ನೂ ಸಂಸ್ಕೃತಿಯನ್ನೂ ಮೇಲಿನ ಮಟ್ಟಕ್ಕೊಯ್ಯುತ್ತದೆ.

ಹೀಗೆ ಸರಕಾರದ ವೆಚ್ಚವನ್ನು ಪ್ರಧಾನ ಮತ್ತು ಐಚ್ಛಿಕ ಎಂಬುದಾಗಿ ವಿಂಗಡಿಸುವುದೇ ಸರಿಯಾದ ಮಾರ್ಗ. ಈ ಪ್ರಧಾನ ಮತ್ತು ಐಚ್ಛಿಕ ವೆಚ್ಚದ ಬಾಬುಗಳಲ್ಲಿಯೂ ಒಂದು ಒಳವಿಂಗಡಣೆಯನ್ನು ಮಾಡಬಹುದು. ಉದಾಹರಣೆಗೆ ದೇಶದ ಸಂರಕ್ಷಣೆಗಾಗಿ ಕಟ್ಟುವ ಕೋಟೆ ಕೊತ್ತಲಗಳು, ಬೇಕಾದ ಯುದ್ಧಸಾಮಗ್ರಿಗಳು, ಯುದ್ಧಕಾರ್ಯದಲ್ಲಿ ನಿರತರಾಗುವ ಸೈನಿಕರ ಪೋಷಣೆ ಇವೆಲ್ಲವನ್ನೂ ನಾವು ಪ್ರಧಾನವಾದ ವೆಚ್ಚವೆಂದೇ ಭಾವಿಸುತ್ತೇವೆ. ಆದರೆ ಕೋಟೆ ಕೊತ್ತಲಗಳ

ನಿರ್ಮಾಣಕ್ಕಾಗಿ ತಗಲುವ ವೆಚ್ಚವನ್ನು ಮೂಲಧನದ ವೆಚ್ಚವೆಂದು (Capital expenditure) ಕರೆಯಬಹುದು. ಅದರ ಉಸ್ತುವಾರಿಯನ್ನು ನೋಡಿಕೊಳ್ಳು ವವರ ಮತ್ತು ಸೈನಿಕರ ಪೋಷಣೆಗೂ ಸಾದಿಲ್ವಾರಿಗೂ ಆಗುವ ವೆಚ್ಚವನ್ನು ಸಿಬ್ಬಂದಿ ವೆಚ್ಚವೆಂದು (Revenue expenditure) ಕರೆಯಬಹುದು. ಈ ಒಳವಿಂಗಡಣೆ ಐಚ್ಛಿಕ ವೆಚ್ಚದ ಗುಂಪಿಗೆ ಸೇರಿದ ಬಾಬುಗಳಿಗೂ ಅನ್ವಯಿಸುತ್ತದೆ. ಒಂದು ದೇಶದ ವಿದ್ಯಾಭ್ಯಾಸಕ್ಕಾಗಿ ಆ ಸರಕಾರ ಹತ್ತಾರು ಲಕ್ಷ ರೂಪಾಯಿ ವೆಚ್ಚಮಾಡುತ್ತದೆಯೆನ್ನೋಣ. ಇದರಲ್ಲಿನ ಒಂದು ಭಾಗ ಶಾಲಾಮಂದಿರಗಳ ನಿರ್ಮಾಣಕ್ಕಾಗಿಯೂ ಬೋಧನ ಸಾಮಗ್ರಿಗಳಿಗಾಗಿಯೂ ವೆಚ್ಚವಾಗುತ್ತದೆ ; ಉಳಿದುದು ಉಪಾಧ್ಯಾಯರ ವೇತನ ವೊದಲಾದವುಗಳಿಗಾಗಿ. ಈ ವೆಚ್ಚದಲ್ಲಿ ಪಾಠಶಾಲೆಯ ಕಟ್ಟಡಗಳು, ಬೋಧನಸಾಮಗ್ರಿಗಳು ಇವುಗಳಿಗೆ ತಗಲುವ ವೆಚ್ಚವನ್ನು ಮೂಲಧನದ ವೆಚ್ಚವೆಂದು ಕರೆಯಬಹುದು. ಉಳಿದುದು ಸಿಬ್ಬಂದಿ ವೆಚ್ಚ. ಮೂಲಧನದ ವೆಚ್ಚದಿಂದ, ಆಯಾ ಶಾಖೆಗಳಲ್ಲಿ ಒಂದು ಹೊಸ ಆಸ್ತಿ ಉತ್ಪನ್ನ ವಾಗುತ್ತದೆ. ಅದರಿಂದ ಆದಾಯ ಬರಬಹುದು, ಬರದಿರಬಹುದು. ಅಂತೂ ನಾವು ಮಾಡಿದ ವೆಚ್ಚ ಒಂದು ಆಸ್ತಿಯ ರೂಪವನ್ನು ತಾಳಿ ನಿಲ್ಲುತ್ತದೆ. ಇದರ ಉಪ ಯೋಗ, ಆ ಕಾಲದ ಪ್ರಜೆಗಳಿಗೆ ಮಾತ್ರವಲ್ಲದೆ ಮುಂದಿನ ಜನಾಂಗದವರಿಗೂ ದೊರೆಯುತ್ತದೆ. ಇಂತಹ ಮೂಲಧನದ ವೆಚ್ಚಕ್ಕಾಗಿ ಪ್ರತಿ ವರ್ಷದ ರಾಜಾ ದಾಯದಿಂದ ಹಣವನ್ನು ತೆಗೆದುಕೊಳ್ಳಬಹುದು ; ಕೆಲವು ಸಂದರ್ಭಗಳಲ್ಲಿ ಸಾಲಮಾಡಿ ಅಂತಹ ಕರ್ತವ್ಯಗಳನ್ನು ನಿರ್ವಾಹಮಾಡಬಹುದು. ಆದರೆ ಆಸ್ತಿಯ ರೂಪದಲ್ಲಿ ನಿಲ್ಲದ ದಿನಂಪ್ರತಿಯಾಗುವ ಸಿಬ್ಬಂದಿ ವೊದಲಾದವುಗಳ ವೆಚ್ಚವನ್ನು ಸಾಮಾನ್ಯ ವಾಗಿ ವಾರ್ಷಿಕ ಹುಟ್ಟುವಳಿಯಿಂದಲೇ ಮಾಡಬೇಕು.* ಹೀಗೆ ಒಂದು ಸರಕಾರ ಮಾಡುವ ವೆಚ್ಚ ಪ್ರಧಾನವೇ ಆಗಲಿ ಐಚ್ಛಿಕವೇ ಆಗಲಿ ಅದಕ್ಕೆ ಒಂದು ಮಿತಿಯಿರ ಬೇಕು ; ಮಾಡುವ ವೆಚ್ಚ ಕೆಲವು ನಿಯಮಗಳನ್ನು ಅನುಸರಿಸಬೇಕು.

---

* ಯುದ್ಧ, ಕ್ಷಾಮ ಇವೇ ವೊದಲಾದ ಅನಿವಾರ್ಯಗಳಿಗಾಗಿ ಮಾಡುವ ಸರಕಾರದ ಸಿಬ್ಬಂದಿ ವೆಚ್ಚಕ್ಕೆ ಇದು ಅನ್ವಯಿಸುವುದಿಲ್ಲ.

# ಪ್ರಕರಣ ೫

## ವೆಚ್ಚದ ನಿಯಮಗಳು

ಸರಕಾರದ ಕಾರ್ಯಕ್ಷೇತ್ರ ವಿಸ್ತಾರವಾಗುತ್ತಿರುವುದೂ ಅದರಿಂದ ಸರಕಾರದ ವೆಚ್ಚ ದಿನೇ ದಿನೇ ಬೆಳೆಯುತ್ತಿರುವುದೂ ವಾಸ್ತವವಾದ ಅಂಶ. ಆದರೆ ಈ ವೆಚ್ಚಕ್ಕೆ ಯಾವುದಾದರೂ ಒಂದು ಮಿತಿಯುಂಟೆ? ವೆಚ್ಚಮಾಡುವುದರಲ್ಲಿ ಯಾವುದಾದರೂ ಒಂದು ನಿಯಮವನ್ನು ಅನುಸರಿಸಬೇಕೇ? ಎಂಬುದನ್ನು ನಾವು ಪರಿಶೀಲಿಸಬೇಕು. ಸರಕಾರ ಕೈಗೊಂಡಿರುವ ಕೆಲಸ ಯೋಗ್ಯವಾದುದೆ? ಅದು ದೇಶದ ಕ್ಷೇಮಕ್ಕೆ ಅಗತ್ಯವಾದುದೆ? ಇದನ್ನು ಗಳಿಸಲು ಬೇರೆ ಯಾವ ವಿಧವಾದ ಮಾರ್ಗವೂ ಇಲ್ಲವೆ? ಇದಕ್ಕಾಗಿ ತಗಲುವ ಹಣವನ್ನು ಜನಾಂಗ ಒದಗಿಸಿಕೊಡುವಷ್ಟು ಚೈತನ್ಯವಿದೆಯೆ? ಎಂಬ ಪ್ರಶ್ನೆಗಳಿಂದ ನಾವು ಸರಕಾರದ ವೆಚ್ಚವನ್ನು ಪರೀಕ್ಷಿಸ ಬಹುದಾದರೂ ಸಾರ್ವಜನಿಕ ವೆಚ್ಚಕ್ಕೆ ಇರುವ ಮಿತಿ ವಿಧಿನಿಯಮಗಳನ್ನು ತಿಳಿಯ ಬೇಕು.

ಸರಕಾರದ ವೆಚ್ಚದ ಮೊತ್ತದ ಮಿತಿಯನ್ನು ಎರಡು ದೃಷ್ಟಿಯಿಂದ ವಿಮರ್ಶಿಸ ಬಹುದು: ಸರಕಾರದ ವೆಚ್ಚದ ಒಟ್ಟು ಮೊತ್ತ ಪ್ರಜಾಚೈತನ್ಯವನ್ನು ಮೀರಿದೆಯೆ? ಎಂಬುದೊಂದು ದೃಷ್ಟಿ; ಸರಕಾರದ ಬೇರೆಬೇರೆ ಶಾಖೆಗಳಲ್ಲಿ ಆಗುವ ವೆಚ್ಚ ತಮ್ಮ ಎಲ್ಲೆಯಲ್ಲಿದೆಯೆ? ಎಂಬುದು ಇನ್ನೊಂದು.

ಸರಕಾರದ ವೆಚ್ಚ ಹೆಚ್ಚಿದಷ್ಟೂ ದೇಶದಲ್ಲಿನ ಪ್ರಜಾವರ್ಗದ ಸುಖ ಹೆಚ್ಚುತ್ತಿರು ವುದು ವ್ಯಕ್ತವಾಗಬೇಕು. ವೆಚ್ಚದ ಕ್ರಮ ಮತ್ತು ತೆರಿಗೆಗಳ ಕ್ರಮ, ಈ ಎರಡನ್ನೂ ಒಟ್ಟುಗೂಡಿಸಿ, ಇವುಗಳಿಂದುಂಟಾಗುವ ಬದಲಾವಣೆಗಳನ್ನೂ ನಾವು ಪರಿಶೀಲಿಸ ಬೇಕೆಂಬುದನ್ನು ಮರೆಯಬಾರದು. ಸರಕಾರ ಕೈಗೊಳ್ಳುತ್ತಿರುವ ಕಾರ್ಯಗಳಿಂದ ದೊರೆಯುವ ಸೌಕರ್ಯಗಳಿಗಿಂತ ಹೆಚ್ಚಿನ ಸೌಕರ್ಯ, ಸರಕಾರಕ್ಕೆ ಸಲ್ಲಿಸುವ ಹಣ ಪ್ರಜಾ ಸಮುದಾಯದಲ್ಲಿಯೇ ಉಳಿದಿದ್ದರೆ ಆ ಜನತೆಗೆ ದೊರೆಯುತ್ತಿರಲಿಲ್ಲವೆಂಬುದು ವ್ಯಕ್ತ ವಾದರೆ ಸರಕಾರದ ಆ ವೆಚ್ಚ ಸಾರ್ಥಕವಾದುದು ಎಂದೇ ಭಾವಿಸಬೇಕು. ಸರ ಕಾರದ ವೆಚ್ಚಕ್ಕೆ ಬೇಕಾದ ಹಣವನ್ನು ಒದಗಿಸಲು ತೆರಿಗೆ ಕೊಡಬೇಕಾದ ಸನ್ನಿವೇಶ ಗಳಿಂದ ಉಂಟಾಗುವ ಬಾಧಕಗಳಿಗಿಂತ ಪ್ರಜಾಸಮುದಾಯಕ್ಕೆ ಆ ವೆಚ್ಚದಿಂದ ಹೆಚ್ಚಿನ ಬೆಲೆಯ ಸೌಕರ್ಯ ದೊರೆತರೆ ಸರಕಾರದ ಅಂತಹ ವೆಚ್ಚ ಮಿತಿಮೀರಿಲ್ಲವೆಂದು ಹೇಳಬಹುದು. ಪ್ರಜೆಗಳು ತಮ್ಮ ಉತ್ಪತ್ತಿಯಲ್ಲಿ ಕೊಡುವ ಹೆಚ್ಚಿನ ತೆರಿಗೆಗಳಿಂದ ತಮಗುಂಟಾಗುತ್ತಿದ್ದ ಪ್ರಯೋಜನಕ್ಕಿಂತಲೂ ಸರಕಾರದವರು ಕೈಗೊಂಡಿರುವ ಕಾರ್ಯದಿಂದ ಪ್ರಜೆಗಳ ಜೀವನ ಉತ್ತಮಗೊಳ್ಳುವುದು ಎಂಬ ಭರವಸೆಯಿದ್ದರೆ ಸರಕಾರದ ವೆಚ್ಚ ಮಿತಿಯಲ್ಲಿದೆಯೆಂದು ತಿಳಿಯಬೇಕು.

ಹೀಗೆಯೇ ಸರಕಾರದ ಬೇರೆ ಬೇರೆ ಶಾಖೆಗಳಿಗೆ ತಗಲುವ ವೆಚ್ಚವನ್ನು ಹೆಚ್ಚಿಸುವುದರಲ್ಲಿಯೂ ಈ ತತ್ವವನ್ನು ಅನುಸರಿಸಬೇಕು. ನಾವು ನಮ್ಮ ಆದಾಯವನ್ನು ಆಹಾರ, ಬಟ್ಟೆ, ವಸತಿ ಮೊದಲಾದವುಗಳಿಗೆ ವೆಚ್ಚಮಾಡುವುದರಲ್ಲಿ ಅನುಸರಿಸುವ ನಿಯಮವನ್ನೇ ಸರಕಾರ ತನ್ನ ಹುಟ್ಟುವಳಿಯನ್ನು ವೆಚ್ಚಕ್ಕಾಗಿ ತನ್ನ ಬೇರೆ ಬೇರೆ ಶಾಖೆಗಳಿಗೆ ಹಂಚುವುದರಲ್ಲಿಯೂ ಅನುಸರಿಸಬೇಕು. ಸರಕಾರ ಬೇರೆ ಬೇರೆ ಶಾಖೆಗಳ ಮೂಲಕ ಮಾಡುವ ವೆಚ್ಚದಿಂದ ಆ ದೇಶದ ಪ್ರಜೆಗಳಿಗೆ ದೊರೆಯುವ ಸೌಕರ್ಯಗಳಲ್ಲಿ ಆದಷ್ಟುಮಟ್ಟಿಗೆ ಸಮಾನತೆ ಇರಬೇಕು ರಕ್ಷಣೆಯ ಬಾಬಿಗಾಗಿ ಮೀಸಲಾಗಿಟ್ಟ ಹಣದಿಂದ ದೊರೆಯುವ ಪ್ರಯೋಜನಕ್ಕಿಂತ ಆ ಹಣದಲ್ಲಿನ ಒಂದು ಭಾಗವನ್ನು ವಿದ್ಯಾಭ್ಯಾಸಕ್ಕಾಗಿಯೋ ಆರೋಗ್ಯ ಸಾಧನೆಗಾಗಿಯೋ ವೆಚ್ಚಮಾಡಿದರೆ ಆ ಜನತೆಗೆ ಹೆಚ್ಚು ಹಿತ ದೊರೆಯುವುದೆಂದು ತಿಳಿದರೆ ಆ ಬಾಬಿನ ಹಣವನ್ನು ಇತರ ಶಾಖೆಗಳಿಗೆ ವರ್ಗಾಯಿಸಬೇಕು.

ಸರಕಾರವು ಬೇರೆಬೇರೆ ಶಾಖೆಗಳಿಗೆ ಮಾಡುವ ವೆಚ್ಚದ ಮೊತ್ತ ಇಷ್ಟೇ ಇರಬೇಕೆಂದು ನಿರ್ಧಾರವಾಗಿ ಹೇಳುವುದು ಸಾಧ್ಯವಿಲ್ಲ. ದೇಶದ ಸ್ಥಿತಿಗತಿಗಳನ್ನೂ ಅಲ್ಲಿಯ ಪ್ರಜೆಗಳ ಸರಾಸರಿ ಆದಾಯವನ್ನೂ ಅನುಸರಿಸಿ ಸರಕಾರದ ನಾನಾ ಶಾಖೆಗಳ ವೆಚ್ಚದ ಮೊತ್ತ ನಿಷ್ಕರ್ಷೆಯಾಗುತ್ತದೆ. ರಕ್ಷಣೆಯ ಬಾಬಿಗಾಗಿ ಒಂದೊಂದು ದೇಶ ಒಂದೊಂದು ವಿಧವಾಗಿ ವೆಚ್ಚಮಾಡುತ್ತದೆ.

೧೯೩೯ ರಲ್ಲಿ

| | | |
|---|---|---|
| ಇಂಡಿಯಾದೇಶ ತನ್ನ ರಕ್ಷಣೆಗಾಗಿ | ೫೦ ಕೋಟಿ ರೂಪಾಯಿಗಳನ್ನೂ | |
| ಅಮೆರಿಕದ ಸಂಯುಕ್ತ ಸಂಸ್ಥಾನಗಳು | ೪೮೦ ಕೋಟಿ | ,, |
| ಇಂಗ್ಲೆಂಡ್ | ೧೭೫ ಕೋಟಿ | ,, |
| ಜಪಾನ್ | ೧೭೯ ಕೋಟಿ | ,, |
| ಫ್ರಾನ್ಸ್ | ೯೯ ಕೋಟಿ | ,, |
| ಕೆನಡಾ | ೧೧ ಕೋಟಿ | ,, |

ವೆಚ್ಚಮಾಡಿದುವು. ಇದರಲ್ಲಿ ಕಂಡುಬರುವ ವ್ಯತ್ಯಾಸಕ್ಕೆ ಅನೇಕ ಕಾರಣಗಳಿವೆ. ಅಕ್ಕಪಕ್ಕದ ರಾಷ್ಟ್ರಗಳವರು ಯುದ್ಧಕಾಂಕ್ಷಿಗಳಾಗದೆ ಶಾಂತಿಪರರಾಗಿದ್ದರೆ, ಆ ದೇಶದ ರಕ್ಷಣೆಗಾಗಿ ಹೆಚ್ಚು ವೆಚ್ಚಮಾಡಬೇಕಾಗಿಲ್ಲ. ಶಾಂತಿಯುತವಾದ ನೆರೆ ಇರುವುದರಿಂದ ಕೆನಡಾರಾಜ್ಯವು ರಕ್ಷಣೆಗಾಗಿ ಕೇವಲ ೧೧ ಕೋಟಿ ರೂಪಾಯಿಗಳನ್ನು ವೆಚ್ಚಮಾಡುತ್ತದೆ. ದೇಶದ ರಕ್ಷಣೆಗಾಗಿ ಆಗುವ ವೆಚ್ಚದಂತೆಯೇ ರಾಜ್ಯಾಡಳಿತಕ್ಕಾಗಿ ಆಗುವ ವೆಚ್ಚವೂ ಅತ್ಯಾವಶ್ಯಕವಾದುದು. ರಾಜ್ಯಾಡಳಿತದ ಬಾಬಿನಲ್ಲಿ ಸಂಬಳ ಸಾರಿಗೆಗಳಿಗೆ ಆಗುವ ವೆಚ್ಚವನ್ನು ಕಡಮೆಮಾಡಿ ಇತರ ಶಾಖೆಗಳಿಗೆ ಆ ಹಣವನ್ನು ಒದಗಿಸಬೇಕೆಂದು ಹೇಳುವ ಮಾತುಂಟು. ಇದು ಸಾಧ್ಯವೆ ಅಥವಾ ಸಾಧುವಾದುದೇ ಎಂಬುದನ್ನು ವಿಚಾರಮಾಡಬಹುದು. ಹೀಗ ವಿಚಾರಮಾಡಲು ಒಂದೆರಡು ತತ್ವಗಳನ್ನು ನಿರೂಪಣೆ ಮಾಡಬಹುದು. ಸರಕಾರದ ಕೆಲಸಗಳು ಸಮರ್ಪಕವಾಗಿ ನಡೆಯದಿದ್ದರೆ ಸರಕಾರದ ಉದ್ದೇಶ

ಸಾಧನೆಯಾಗುವುದಿಲ್ಲ. ಸರಕಾರದ ಕೆಲಸಗಳು ಸುಸೂತ್ರವಾಗಿ ನಡೆಯಬೇಕಾದರೆ ದಕ್ಷತೆಯ ತತ್ವವನ್ನು (Principle of efficiency) ಅನುಸರಿಸಿ ಸಂಬಳ ಸಾರಿಗೆಗಳನ್ನು ನಿರ್ಧರಿಸಬೇಕು. ಸರಕಾರದ ನೌಕರರು, ಬೇರೆ ಖಾಸಗಿ ಮಾರ್ಗಗಳಲ್ಲಿ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಉಪಯೋಗಿಸಿದ್ದರೆ ಎಷ್ಟು ಹಣ ಸಂಪಾದಿಸಿಕೊಳ್ಳುತ್ತಿದ್ದರೋ ಅದಕ್ಕೂ ಈಗ ಅವರು ಪಡೆಯುವ ವೇತನಗಳಿಗೂ ಹೆಚ್ಚಿನ ಅಂತರವಿರಬಾರದು. ಈ ಪರಿಹಾರ ತತ್ವವನ್ನು (Principle of compensation) ಅನುಸರಿಸಿ ಸರಕಾರದ ನೌಕರರ ವೇತನ ನಿರ್ಧಾರವಾಗಬೇಕು. ಒಂದು ದೇಶದ ಸರಕಾರದ ನೌಕರರ ಸಂಬಳಗಳು ಮತ್ತೊಂದು ದೇಶದವರ ಸಂಬಳಗಳಿಗಿಂತ ವ್ಯತ್ಯಾಸವಾಗಿರುವುದು ಸಹಜ. ಇದು ಆಯಾ ದೇಶದ ಜನರ ಆದಾಯ ಮತ್ತು ಜೀವನದ ಮಟ್ಟವನ್ನು ಅನುಸರಿಸಿ ಹೋಗುತ್ತದೆ. ನಮ್ಮ ದೇಶದ ಆದಾಯವನ್ನೂ ಜೀವನದ ಮಟ್ಟವನ್ನೂ ನೋಡಿದರೆ ಇಲ್ಲಿಯ ಸರಕಾರದ ನೌಕರರಿಗೆ ಇಂಗ್ಲೆಂಡ್ ಅಮೆರಿಕಾ ದೇಶದವರು ಕೊಡುವಷ್ಟು ವೇತನಗಳನ್ನು ಕೊಡುವುದು ಸಾಧ್ಯವೇ ಅಥವಾ ಸಾಧುವಾದುದೇ? ಎಂಬುದನ್ನು ಪರ್ಯಾಲೋಚಿಸಬಹುದು.

ಇದಿಷ್ಟೂ ಸರಕಾರದ ವೆಚ್ಚದ ಒಟ್ಟು ಮೊತ್ತ ಮತ್ತು ಸರಕಾರದ ನಾನಾ ಶಾಖೆಗಳ ವೆಚ್ಚದ ಮೊತ್ತ ಇವುಗಳಿಗಿರುವ ಮಿತಿಯ ಮಾತಾಯಿತು. ಇನ್ನು ಸರಕಾರ ವೆಚ್ಚಮಾಡುವುದರಲ್ಲಿ ಅನುಸರಿಸಬೇಕಾದ ನಿಯಮಗಳನ್ನು ತಿಳಿಯಬೇಕು. ಈ ನಿಯಮಗಳು ನಾಲ್ಕು:

೧. ಪ್ರಜಾಸೌಲಭ್ಯ ನಿಯಮ
೨. ಮಿತವ್ಯಯ ನಿಯಮ
೩. ಒಪ್ಪಿಗೆಯ ನಿಯಮ
೪. ಉಳಿತಾಯದ ನಿಯಮ

೧. ಯಾವ ಸರಕಾರವೇ ಆಗಲಿ ದೇಶದ ಕ್ಷೇಮದ ಹೆಸರಿನಲ್ಲಿ ಹೆಚ್ಚು ಹಣವನ್ನು ವೆಚ್ಚಮಾಡಲಾಗದು. ಸರಕಾರ ವೆಚ್ಚಮಾಡುವ ಹಣದಿಂದ ಜನಗಳಿಗೆ ಪ್ರಯೋಜನವಾಗಬೇಕು. ಜನರ ಹೊರೆ ಇದರಿಂದ ಕಡಮೆಯಾಗಬೇಕು. ದೇಶದಲ್ಲಿನ ಅಂತಃಕಲಹಗಳನ್ನು ನಿವಾರಿಸಿಕೊಂಡು ಹೊರಗಿನ ಅವಾಂತರಗಳನ್ನು ಎದುರಿಸಬಲ್ಲ ಶಕ್ತಿ ಜನರಿಗೆ ಉಂಟಾಗಬೇಕು. ದೇಶದಲ್ಲಿ ಜನರ ಉತ್ಪತ್ತಿ ಹೆಚ್ಚಬೇಕು. ಸರಕಾರ ಮಾಡುವ ವೆಚ್ಚದಿಂದ ರಕ್ಷಣೆಯು ಹೆಚ್ಚಿ, ಜನಗಳಲ್ಲಿರುವ ಅತೃಪ್ತಿ ತೊಲಗಿ ಪ್ರಜಾಸಮುದಾಯದಲ್ಲಿರುವ ಸಂಪತ್ತಿನ ವ್ಯತ್ಯಾಸಗಳು ಕಡಮೆಯಾಗಿ ದೇಶದ ಸಂಪತ್ತು ಅಭಿವೃದ್ಧಿಯಾಗಬೇಕು.

೨. ಸರಕಾರದ ವೆಚ್ಚದಲ್ಲಿ ಒಂದು ಹಿಡಿತವಿರಬೇಕು. ಪ್ರತಿಕ್ಷಣವೂ ಜನಗಳ ಮೇಲಿನ ಭಾರವನ್ನು ಕಡಮೆ ಮಾಡಬೇಕೆಂಬ ಆಶೆ ಸರಕಾರಕ್ಕಿರಬೇಕು. ಪ್ರಜಾವರ್ಗಕ್ಕೆ ದೊರೆಯಬೇಕಾದ ಸೌಲಭ್ಯಗಳು ಕಡಮೆಯಾಗದಂತೆ ವೆಚ್ಚವನ್ನು ಎಷ್ಟು ಕಡಮೆ ಮಾಡಬಹುದೋ ಅಷ್ಟೂ ಮಾಡಬೇಕು. ಸರಕಾರವೂ ಕೂಡ,

ಸಾಮಾನ್ಯವ್ಯಕ್ತಿಯಂತೆಯೇ ತನ್ನ ಹಣ ಪೋಲಾಗದಂತೆ, ಅನ್ಯಾಯವಾಗಿ ವೆಚ್ಚವಾಗದಂತೆ, ನೋಡಿಕೊಳ್ಳಬೇಕು.

೩. ಸರಕಾರ ಮಾಡುವ ವೆಚ್ಚಕ್ಕೆ ಪ್ರಜೆಗಳ ಒಪ್ಪಿಗೆಯನ್ನು ಪಡೆಯಬೇಕು. ಸರಕಾರದ ವೆಚ್ಚ ಮುಂದಾಲೋಚನೆಯಿಂದ ವ್ಯವಸ್ಥೆಯಾಗಬೇಕು. ಕೆಲವು ನಿರ್ದಿಷ್ಟವಾದ ಕಟ್ಟು ಕಾಯಿದೆಗಳಿಗೆ ಒಳಗಾಗಬೇಕು. ಸರಕಾರ ತಾನು ಮಾಡುವ ವೆಚ್ಚಕ್ಕೆ ಆಯವ್ಯಯದ ಅಂದಾಜು ("ಬಜೆಟ್") ತಯಾರ್ಮಾಡಿ ಪೂರ್ವಭಾವಿಯಾಗಿ ಪ್ರಜೆಗಳ ಮತ್ತು ರಾಷ್ಟ್ರಾಧಿಪತಿಯ ಒಪ್ಪಿಗೆಯನ್ನು ಪಡೆಯಬೇಕು.

೪. ಸಾಮಾನ್ಯ ಪ್ರಜೆಯಂತೆಯೇ ಸರಕಾರವೂ ತನ್ನ ಆದಾಯವನ್ನೆಲ್ಲಾ ವೆಚ್ಚಮಾಡಬಾರದು. ಎಂದರೆ ಸಾಮಾನ್ಯ ಪ್ರಜೆಯಂತೆ ವೆಚ್ಚವನ್ನು ಕಡಮೆಮಾಡಿ ಹಣವನ್ನು ಉಳಿಸಬೇಕೆಂದಲ್ಲ. ಆದರೆ ವೃಥಾ ಸಾಲಸೋಲಗಳನ್ನು ಮಾಡಬಾರದು. ಆಯಾ ವರುಷದ ಹುಟ್ಟುವಳಿಯಿಂದಲೇ ಆಯಾ ವರುಷದ ವೆಚ್ಚಕ್ಕೆ ಬೇಕಾಗುವ ಹಣವನ್ನು ಒದಗಿಸುವುದೇ ಸಾಧಾರಣ ಮಾರ್ಗ. ಕಟ್ಟುನಿಟ್ಟಾಗಿ ಇದನ್ನು ಅನುಸರಿಸುವುದೇ ಆಯವ್ಯಯದ ಆಡಳಿತದಲ್ಲಿ ಸಾಧುವರ್ತನೆ. ಇಷ್ಟೇ ಅಲ್ಲದೆ ಸಾಧ್ಯವಾದರೆ ಒಂದು ವಿಧದ ಆಪದ್ಧನದ ನಿಧಿಯನ್ನೂ ಶೇಖರಿಸಬೇಕು. ನಿಧಿಗಳನ್ನು ಕೂಡಿಸುವುದೂ ಒಂದು ವೆಚ್ಚದ ಭಾಗವೆಂದು ಹೇಳುವವರುಂಟು.

ಸರಕಾರ ಮಾಡುವ ವೆಚ್ಚಕ್ಕೆ ಇರುವ ಕೆಲವು ವಿಧಿನಿಯಮಗಳು ಆ ವೆಚ್ಚದ ಗುಣದೋಷಗಳನ್ನು ಪರೀಕ್ಷಿಸುವುದಕ್ಕಾಗಿ. ಸಾರ್ವಜನಿಕ ವೆಚ್ಚದ ಒಟ್ಟು ಮೊತ್ತದಿಂದಾಗಲಿ ಬೇರೆಬೇರೆ ಬಾಬುಗಳ ವೆಚ್ಚದ ಮೊತ್ತದಿಂದಾಗಲಿ ವೆಚ್ಚದ ಗುಣದೋಷಗಳನ್ನು ವಿಮರ್ಶಿಸುವುದು ಸಾಧ್ಯವಾಗಲಾರದು. ಸರಕಾರ ತಲೆಯೊಂದಕ್ಕೆಷ್ಟು ವೆಚ್ಚಮಾಡುತ್ತದೆ, ಯಾವ ರೀತಿಯಲ್ಲಿ ಆ ವೆಚ್ಚ ಪ್ರಜೆಗಳಲ್ಲಿ ಹಂಚಿಕೆಯಾಗಿದೆ, ಮತ್ತು ಆ ವೆಚ್ಚಕ್ಕೆ ಬೇಕಾದ ಹಣ ಯಾವ ರೀತಿಯಿಂದ ಬಂದಿದೆ ಎಂಬುದನ್ನು ನಾವು ತಿಳಿಯಬೇಕು. ಸರಕಾರ ಯಾವ ಬಾಬಿಗೆ ಯಾವ ರೀತಿಯಲ್ಲಾದರೂ ವೆಚ್ಚಮಾಡಿರಲಿ, ಅದು ಸಾಧುವೇ ಅಸಾಧುವೇ ಎಂದು ಪರಿಶೀಲಿಸಬೇಕಾದರೆ, ಆ ವೆಚ್ಚದಿಂದ ಅಲ್ಲಿಯ ಪ್ರಜಾಸಮುದಾಯದಮೇಲೆ ಉಂಟಾಗುವ ಪರಿಣಾಮವು ಒರೆಗಲ್ಲಿನಂತಿರುವುದು.

---

# ಪ್ರಕರಣ ೬

## ಸಾರ್ವಜನಿಕ ವೆಚ್ಚ ಮತ್ತು ಸಮಾಜದ ಬೆಳವಣಿಗೆ

ಸಾಮಾನ್ಯವಾಗಿ ಪ್ರತಿಯೊಬ್ಬ ವ್ಯಕ್ತಿಯೂ, ತನ್ನ ರಕ್ಷಣೆಗಾಗಿ ಮತ್ತು ತನ್ನ ಸೌಕರ್ಯಗಳನ್ನು ಹೆಚ್ಚುಮಾಡಿಕೊಳ್ಳುವುದಕ್ಕಾಗಿ ತನ್ನ ಆದಾಯವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಪಡುತ್ತಾನೆ. ಅದಕ್ಕೆ ಬೇಕಾಗುವ ಸಾಧನೋಪಾಯಗಳನ್ನು ಹುಡುಕುತ್ತಾನೆ. ಹೀಗೆ ತನ್ನ ರಕ್ಷಣೆಗಾಗಿ ಮತ್ತು ಸುಖದ ಅಭ್ಯುದಯಕ್ಕಾಗಿ ಅವನು ಸಂಪಾದಿಸುವ ಹಣದಲ್ಲಿ ಒಂದು ಭಾಗವನ್ನು ವೆಚ್ಚಮಾಡಬೇಕು. ಹೀಗೆ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ತನ್ನ ಸುಖಗಳನ್ನು ಕಲ್ಪಿಸಿಕೊಳ್ಳಲು ವೆಚ್ಚ ಮಾಡುವ ಹಣಕ್ಕಿಂತ ಸರಕಾರ ಸಮಾಜದ ಶ್ರೇಯಸ್ಸಿಗಾಗಿ ಮತ್ತು ಅಭ್ಯುದಯಕ್ಕಾಗಿ ವೆಚ್ಚಮಾಡುವ ಹಣದಿಂದ ಹೆಚ್ಚು ಪರಿಣಾಮವುಂಟಾಗುತ್ತದೆ ಎಂಬುದನ್ನು ನಾವು ಕಾಣಬಹುದು.

ಸರಕಾರ ವೆಚ್ಚಮಾಡುವ ಹಣದಿಂದ ಉಂಟಾಗುವ ಪರಿಣಾಮ ಎರಡು ವಿಧವಾದದ್ದು: (೧) ಜನತೆಯ ಆದಾಯವನ್ನು ಹೆಚ್ಚಿಸುವುದು. (೨) ಸಮಾಜದಲ್ಲಿ ಕಂಡುಬರುವ ಆರ್ಥಿಕ ಅಸಮತೆಯನ್ನು ಕಡಿಮೆ ಮಾಡುವುದು.

ಪ್ರತಿಯೊಂದು ಸರಕಾರವೂ, ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ದೇಶಾಭ್ಯುದಯ ಕಾರ್ಯಗಳಿಗಾಗಿ ವೆಚ್ಚಮಾಡುತ್ತದೆ. ಕೈಗಾರಿಕೆಗಳಿಗೆ ಮುಂಗಡವಾಗಿ ಸಾಲದ ರೂಪವಾಗಿ ಕೊಡುವ ಹಣ, ರಕ್ಷಣೆ, ಸುಂಕಗಳ ಮೂಲಕ ನೀಡುವ ಸಹಾಯ ಬೋನಸ್ ಮೊದಲಾದವುಗಳು ಎಲ್ಲವೂ ಪ್ರತ್ಯಕ್ಷವಾದ ಪರಿಣಾಮವನ್ನುಂಟುಮಾಡುವ ವೆಚ್ಚ. ವಿದ್ಯಾಭ್ಯಾಸ, ವೈದ್ಯ ಮೊದಲಾದವುಗಳಿಗಾಗಿ ಮಾಡುವ ವೆಚ್ಚದಿಂದ ನಮಗೆ ದೊರೆಯುವ ಸೌಕರ್ಯಗಳು ಪರೋಕ್ಷವಾದವೆನ್ನಬಹುದು. ಇವೆರಡರಿಂದಲೂ ದೇಶದ ಆರ್ಥಿಕಸ್ಥಿತಿ ಅಭಿವೃದ್ಧಿಯಾಗುತ್ತದೆ. ಈ ರೀತಿ ಸರಕಾರ ವೆಚ್ಚಮಾಡುವ ಹಣದಿಂದ ಪ್ರತಿಯೊಬ್ಬ ವ್ಯಕ್ತಿಯ ಆದಾಯವೂ ಹೆಚ್ಚುವುದು. ಎಂದರೆ ಸರಕಾರ ವೆಚ್ಚಮಾಡುವ ಹಣದಿಂದ ಆ ದೇಶದ ಪ್ರಜೆಗಳಲ್ಲಿ ಹಣವನ್ನು ಆರ್ಜಿಸುವ ಶಕ್ತಿ ಉತ್ಸಾಹಗಳು ಬೆಳೆಯುತ್ತವೆ ಎನ್ನಬಹುದು.

ಒಂದು ದೇಶದ ಸರಕಾರ ವಿದ್ಯಾಭ್ಯಾಸ ಮತ್ತು ವೈದ್ಯಸಹಾಯಗಳಿಗಾಗಿ ಹೆಚ್ಚು ಹಣವನ್ನು ವೆಚ್ಚಮಾಡಿದರೆ ಆ ದೇಶದ ಜನರ ಬುದ್ಧಿ ಮತ್ತು ದೇಹಶಕ್ತಿಗಳು ಬೆಳೆದು ಅವರು ದೊಡ್ಡ ಕಾರ್ಯಗಳನ್ನು ಕೈಗೊಂಡು ಅದರಿಂದ ಹೆಚ್ಚು ಆದಾಯವನ್ನು ಪಡೆಯಲು ಸಮರ್ಥರಾಗುತ್ತಾರೆ. ಈ ವೆಚ್ಚದಿಂದ ಅವಿದ್ಯಾವಂತರೂ ನಿರ್ಬಲರೂ ಮಾಡುವ ಕೆಲಸಗಳಿಂದ ಎಷ್ಟು ಆದಾಯ ಬರಬಹುದೋ ಅದರ ಹತ್ತರಷ್ಟು,

ನೂರರಷ್ಟು ಆದಾಯ ಆ ದೇಶದ ಜನರಿಗೆ ಬರಬಹುದು. ಅವರ ಸಂಪಾದನೆ ಹೆಚ್ಚಿದಷ್ಟೂ ದೇಶದ ಹುಟ್ಟುವಳಿ ಹೆಚ್ಚುತ್ತದೆ. ಇದರಿಂದ ಜನರಲ್ಲಿ ಕೆಲಸ ಮಾಡಬೇಕೆಂಬ ಆಸೆ, ಕೆಲಸ ಮಾಡುವುದಕ್ಕೆ ಶಕ್ತಿ, ಇವೆರಡನ್ನೂ ಸಂಪಾದಿಸಿಕೊಟ್ಟಂತಾಗುವುದು. ಹೀಗೆ ದೊಡ್ಡ ಕೆಲಸಗಳನ್ನೂ ವ್ಯಾಪಾರಗಳನ್ನೂ ಕೈಗಾರಿಕೆಗಳನ್ನೂ ಇತರ ಲಾಭಕರವಾದ ವೃತ್ತಿಗಳನ್ನೂ ಜನರು ಕೈಗೊಂಡು ಹೆಚ್ಚು ಆದಾಯ ಪಡೆದರೆ, ಕೊಳ್ಳುವ ಶಕ್ತಿ ಹೆಚ್ಚುತ್ತದೆ. ಸಮಾಜದ ಜೀವನದ ಅಂತಸ್ತು ಆಗ ಉತ್ತಮಗೊಳ್ಳುತ್ತದೆ.

ಕೂಲಿಗಾರರಿಗೆ ವಸತಿಗೃಹಗಳನ್ನು ಏರ್ಪಡಿಸುವುದು, ಅವರ ಮಕ್ಕಳಿಗೆ ಉಚಿತ ವಿದ್ಯಾಭ್ಯಾಸ ವೈದ್ಯ ಸಹಾಯಗಳನ್ನು ಕೊಡುವುದು, ನಿಶ್ಶಕ್ತರಾದವರಿಗೆ ಜೀವನ ಸೌಕರ್ಯವನ್ನು ಒದಗಿಸುವುದು ಮೊದಲಾದ ಕಾರ್ಯಗಳಿಂದ ಚೆನ್ನಾಗಿ ದುಡಿಯುವ ಜನರ ಸಂಖ್ಯೆ ಹೆಚ್ಚುತ್ತದೆ. ಕೆಲಸದಲ್ಲಿ ಆಸಕ್ತಿ ಹುಟ್ಟಿದರೆ, ಶ್ರದ್ಧೆಯಿಲ್ಲದೆ ಹತ್ತು ಗಂಟೆಗಳ ಕಾಲದಲ್ಲಿ ಇವರು ಮಾಡುತ್ತಿದ್ದ ಕೆಲಸವನ್ನು ಆರೇಳು ಗಂಟೆಗಳಲ್ಲಿ ಮಾಡಬಲ್ಲರು. ಈ ಕಾರ್ಯಗಳಿಂದ ದೇಶದಲ್ಲಿರುವ ಕಾರ್ಖಾನೆಗಳಲ್ಲಿ ಕೆಲಸಮಾಡುವ ಕೂಲಿಗಾರರಿಗೆ ಕೆಲಸಮಾಡಬೇಕೆಂಬ ಆಸೆ, ಕೆಲಸದಲ್ಲಿ ಒಂದು ಶ್ರದ್ಧೆ, ಹುಟ್ಟುತ್ತದೆ. ಈ ವಿಧವಾದ ಹೊಸ ಹುರುಪು ಜನರಲ್ಲಿ ಅಂಕುರಿಸಿದರೆ ದೇಶದ ಆದಾಯ ಹೆಚ್ಚುತ್ತದೆ.

ಪ್ರತಿ ಸರಕಾರವೂ ವಸ್ತುಪ್ರದರ್ಶನ ಪರಿಶೋಧನಕಾರ್ಯ ಪರದೇಶದ ವೇತನಗಳಿಗಾಗಿ ವೆಚ್ಚಮಾಡುತ್ತದೆ. ಈ ವೆಚ್ಚ ವ್ಯರ್ಥವಾದ ವೆಚ್ಚವೆಂದು ಕೆಲವರು ಅಭಿಪ್ರಾಯ ಪಡಬಹುದು. ನಿಜವಾಗಿ ಈ ವೆಚ್ಚ ವ್ಯರ್ಥವಾದ ವೆಚ್ಚವಲ್ಲ. ಒಂದು ದೇಶದಲ್ಲಿ ಉತ್ಪನ್ನವಾದ ಸಾಮಾನುಗಳು ಮಾರಾಟವಾಗಬೇಕಾಗಿದ್ದರೆ, ಅದಕ್ಕೆ ಪ್ರಚಾರ ಬೇಕು. ತಯಾರಾದ ಪದಾರ್ಥಗಳನ್ನು ಇತರ ದೇಶಗಳಿಗೆ ಮಾರಿದರೆ ನಮ್ಮ ಆದಾಯ ಹೆಚ್ಚುವುದು. ಅಲ್ಲದೆ ಒಳ್ಳೆಯ ಪದಾರ್ಥಗಳನ್ನು ತಯಾರು ಮಾಡಬೇಕಾಗಿದ್ದರೂ ಒಂದು ವಿಧವಾದ ಸ್ಪರ್ಧೆ ಬೇಕು. ಕೈಗಾರಿಕೆಯ ಪ್ರಪಂಚದಲ್ಲಿ ಈ ತರದ ಸರಿಯಾದ ಪೈಪೋಟಿ ಇಲ್ಲದಿದ್ದರೆ ಹೆಚ್ಚು ಆದಾಯ ಬರಲು ಅಥವಾ ಒಳ್ಳೆಯ ಪದಾರ್ಥಗಳು ತಯಾರಾಗಲು ಅವಕಾಶವಿರುವುದಿಲ್ಲ. ಆಗಾಗ ವಸ್ತುಪ್ರದರ್ಶನಗಳನ್ನು ನಡಸುವುದರಿಂದ, ಒಂದು ದೇಶದ ಪದಾರ್ಥಗಳನ್ನು ಇನ್ನೊಂದು ದೇಶದಲ್ಲಿ ಪ್ರಚಾರ ಮಾಡುವುದರಿಂದ, ಆ ಸಾಮಾನುಗಳಿಗೆ ಒಂದು ಮಾರಾಟವನ್ನು ಒದಗಿಸಿದಂತಾದುವುದು. ಸುಲಭ ಬೆಲೆಗೆ ಉತ್ತಮವಾದ ಸಾಮಾನುಗಳನ್ನು ತಯಾರುಮಾಡುವುದು ಹೇಗೆ ದೇಶದ ಆರ್ಥಿಕ ದೃಷ್ಟಿಯಿಂದ ಮುಖ್ಯವೋ ಹಾಗೆಯೇ ತಯಾರಾದ ಸಾಮಾನುಗಳನ್ನು ಸರಿಯಾಗಿ ಮಾರಾಟವಾಗುವಂತೆ ಮಾಡುವ ಏರ್ಪಾಟೂ ಅವಶ್ಯಕವಾದುದು. ವಸ್ತುಪ್ರದರ್ಶನಗಳು ಕೂಡ ಪದಾರ್ಥಗಳಿಗೆ ಮಾರಾಟವನ್ನು ಕಲ್ಪಿಸಿಕೊಟ್ಟು ಪ್ರಜೆಗಳ ಆದಾಯವನ್ನು ಹೆಚ್ಚಿಸುತ್ತವೆ.

ಈಗಿನ ಕಾಲದಲ್ಲಿ ಹಿಂದಿನಂತೆ ನಿತ್ಯಜೀವನಕ್ಕೆ ಉಪಯುಕ್ತವಾದ ವಸ್ತುಗಳನ್ನು ಹೇಗೋ ತಯಾರುಮಾಡಿಕೊಂಡು ಜೀವನವನ್ನು ನಡೆಸಲು ಸಾಧ್ಯವಿಲ್ಲ.

ಈ ವೈಜ್ಞಾನಿಕ ಯುಗದಲ್ಲಿ ವೈಜ್ಞಾನಿಕರು ಪ್ರತಿಕ್ಷಣವೂ ಹೊಸ ಸಾಮಗ್ರಿಗಳನ್ನೂ ಹೊಸ ವಿಷಯಗಳನ್ನೂ ಸೃಷ್ಟಿಮಾಡುತ್ತಿದ್ದಾರೆ. ವ್ಯವಸಾಯವನ್ನಾಗಲಿ ಕೈಗಾರಿಕೆಯನ್ನಾಗಲಿ ಈಗ ಹಿಂದಿನಂತೆ ನಡೆಸಲು ಸಾಧ್ಯವಿಲ್ಲ. ಅಲ್ಪಕಾಲದಲ್ಲಿ ಅಲ್ಪಶಕ್ತಿಯ ವ್ಯಯದಿಂದ ದೊಡ್ಡಕಾರ್ಯಗಳನ್ನು ಹೇಗೆ ನಡೆಸಬಹುದು, ಪದಾರ್ಥಗಳನ್ನು ತಯಾರುಮಾಡಬಹುದು, ಎಂಬುದನ್ನು ನಾವು ಅರಿಯಬೇಕಾಗಿದೆ. ತಯಾರಾದ ಪದಾರ್ಥಗಳು ಶುದ್ಧವಾಗಬೇಕು, ಜನಪ್ರಿಯವಾಗಬೇಕು. ಹೀಗಾಗಿ ದೇಶದ ಕೈಗಾರಿಕೆಗಳು ಉತ್ತಮಗೊಳ್ಳಬೇಕಾಗಿದ್ದರೆ ಈ ಜ್ಞಾನಸೌಕರ್ಯವು ನಮಗೆ ಬೇಕು. ಇದರಿಂದ ನಮ್ಮ ಕಾರ್ಯಗಳು ಸುಗಮವಾಗಿ ನಡೆದು ನಮ್ಮ ಸಂಪಾದನ ಶಕ್ತಿ ಹೆಚ್ಚುತ್ತದೆ. ವೈಜ್ಞಾನಿಕ ಪರಿಶೋಧನಾಲಯಗಳು ಈ ಸೌಕರ್ಯವನ್ನು ಒದಗಿಸುತ್ತವೆ. ಆದುದರಿಂದ ಜ್ಞಾನಾರ್ಜನೆಗಾಗಿ, ಪರಿಶೋಧನಾಲಯಗಳಿಗಾಗಿ, ಪರದೇಶ ವೇತನಗಳಿಗಾಗಿ, ಮಾಡುವ ವೆಚ್ಚ ವ್ಯರ್ಥವಾದುದಲ್ಲ.

ಇದೂ ಅಲ್ಲದೆ, ಸರಕಾರ ತನ್ನ ವೆಚ್ಚದ ವ್ಯವಸ್ಥೆಯಿಂದ ಜನರ ದೃಷ್ಟಿಯನ್ನು ಒಂದು ಕಸಬಿನಿಂದ ಮತ್ತೊಂದು ಕಸಬು ಕೈಗಾರಿಕೆಯ ಕಡೆ ಎಳೆದು ಜನರ ಆದಾಯ ಹೆಚ್ಚುವಂತೆ ಮಾಡುತ್ತದೆ. ಉದಾಹರಣೆಗೆ ಒಂದು ದೇಶದ ಜನರು ಅನೇಕ ವರುಷಗಳಿಂದ ವ್ಯವಸಾಯದಲ್ಲಿ ನಿರತರಾಗಿದ್ದಾರೆನ್ನೋಣ. ವ್ಯವಸಾಯದಿಂದ ಅವರ ಜೀವನ ನಡೆಯುತ್ತದೆ. ಆದರೆ ಹೆಚ್ಚು ಆದಾಯ ಬಾರದು. ಈ ಸಮಯದಲ್ಲಿ ಸರಕಾರ ಜನರ ದೃಷ್ಟಿಯನ್ನು ಕೈಗಾರಿಕೆಯ ಕಡೆಗೆ ಎಳೆಯಬಹುದು. ಸರಕಾರ ಕೈಗಾರಿಕೆಗಳ ಸ್ಥಾಪನೆಗಾಗಿ ಸಾಲದ ರೂಪದಲ್ಲಿ ವೆಚ್ಚಮಾಡಬಹುದು. ಅಥವಾ ಒಂದು ಕೈಗಾರಿಕೆಯಲ್ಲಿ ಪಾಲು ಮೊದಲಾದುವನ್ನು ತೆಗೆದುಕೊಂಡು ಅದರಲ್ಲಿ ಭಾಗಿಯಾಗಬಹುದು. ಹೀಗೆ ಹಣವನ್ನು ವೆಚ್ಚಮಾಡುವುದರಿಂದ, ಇದುವರೆಗೂ ವ್ಯವಸಾಯದಮೇಲೆ ಇದ್ದ ಜನರ ದೃಷ್ಟಿ ಕೈಗಾರಿಕೆಯ ಕಡೆಗೆ ತಿರುಗುವುದು. ಕೈಗಾರಿಕೆಯ ಸ್ಥಾಪನೆಗೆ ಮಾತ್ರವಲ್ಲದೆ, ಹೊಸದಾಗಿ ಆರಂಭವಾದ ಕೆಲವು ಕೈಗಾರಿಕೆಗಳಿಗೆ ಸೌಕರ್ಯಗಳನ್ನು ಒದಗಿಸುವುದಕ್ಕಾಗಿ, ಸರಕಾರ ವೆಚ್ಚ ಮಾಡಬಹುದು. ಈ ತರದ ವೆಚ್ಚದಿಂದಲೂ ಪ್ರಜೆಗಳ ಆದಾಯ ಹೆಚ್ಚುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ. ಹೀಗೆ ಹೆಚ್ಚು ಆದಾಯ ಬರುವ ವೃತ್ತಿ ಉದ್ಯೋಗ ಕೈಗಾರಿಕೆಗಳಿಗೆ ಉತ್ತೇಜನ ಕೊಡುವುದರಿಂದ, ಕೂಲಿಗಾರರು ಮತ್ತು ಬಂಡವಾಳಗಾರರು ಈ ಇಬ್ಬರ ಗಮನವನ್ನೂ ಹೊಸ ಆದಾಯದ ಮಾರ್ಗಗಳ ಕಡೆ ತಂದಂತಾಗುವುದು.

ದೇಶದ ಆರ್ಥಿಕ ಪ್ರಪಂಚದಲ್ಲಿ ವ್ಯಾಪಾರ ವ್ಯವಸಾಯ ಮತ್ತು ಕೈಗಾರಿಕೆಗಳು ಕೆಲವುಬಾರಿ ಅತ್ಯಂತ ಅಭಿವೃದ್ಧಿಸ್ಥಿತಿಯಲ್ಲಿದ್ದು ಹೀನಸ್ಥಿತಿಗೆ ಬರುವ ಸಂಭವಗಳುಂಟು. ಆಗ, ಆ ಉದ್ಯಮಗಳಿಗೆ ಹಣ ಒದಗಿಸಿದ್ದ ಬಂಡವಾಳಗಾರರೂ, ಅವನ್ನು ನಂಬಿಕೊಂಡು ಕೆಲಸಮಾಡುತ್ತಿದ್ದ ಕಾರ್ಮಿಕರೂ, ಹೆಚ್ಚು ತೊಂದರೆಗೂ

ಯೋಚನೆಗೂ ಒಳಗಾಗುವುದು ಸಹಜ. ಆ ಸಮಯದಲ್ಲಿ ಇವುಗಳಿಂದ ಯಾವ ಲಾಭವೂ ದೊರೆಯದಿದ್ದರೂ, ಅದನ್ನು ಸರಕಾರ ವಹಿಸಿಕೊಳ್ಳುವುದರಿಂದ, ಅಥವಾ ಅವು ನಾಶವಾಗದೆ ಜನರು ನಿರುತ್ಸಾಹರಾಗದಂತೆ ಮಾಡುವುದಕ್ಕೆ ಸಹಾಯ ಮಾಡುವುದರಿಂದ, ಈ ಮುಗ್ಗಟ್ಟನ್ನು ತಪ್ಪಿಸಬಹುದು. ದೇಶದ ಆದಾಯದ ಮಿತಿ ತಗ್ಗದಂತೆ ಮಾಡಬಹುದು. ಖಾಸಗಿ ಉದ್ಯಮಗಳು ಅಭಿವೃದ್ಧಿ ಸ್ಥಿತಿಯಲ್ಲಿರುವಾಗ ಸರಕಾರ ಕೈಗೊಂಡಿರುವ ಅಭಿವೃದ್ಧಿ ಕಾರ್ಯಗಳನ್ನು ಬಲವಾಗಿ ವಿಸ್ತರಿಸುವುದನ್ನು ತಗ್ಗಿಸಿ, ಪೈಪೋಟಿಯಿಂದುಂಟಾಗುವ ಧಾರಣೆವಾಸಿಗಳು, ಕೂಲಿ, ಲಾಭ, ಬಡ್ಡಿ ಇವುಗಳ ಹೆಚ್ಚುವಿಕೆಯನ್ನು ಒಂದು ಹತೋಟಿಗೆ ತರಬಹುದು. ಮುಂದಾಲೋಚನೆಯಿಂದ ಮಾಡಿದ (Planned Public Expenditure) ಸಾರ್ವಜನಿಕ ವೆಚ್ಚದಿಂದ ಆರ್ಥಿಕ ಪ್ರಪಂಚದಲ್ಲಿ ಆಗಾಗ ಸಂಭವಿಸುವ ಏರಿಳಿತಗಳು ಒಂದು ಹತೋಟಿಗೆ ಬರುತ್ತವೆ.

ದೇಶದ ಪ್ರಜೆಗಳ ಆದಾಯದಲ್ಲಿ ಕಂಡುಬರುವ ಅಸಮತೆ ಆದಷ್ಟುಮಟ್ಟಿಗೆ ಕಡಮೆಯಾಗುವುದು ಸಾರ್ವಜನಿಕ ವೆಚ್ಚದ ಎರಡನೆಯ ಪರಿಣಾಮ. ಸರಕಾರ ಮಾಡುವ ವೆಚ್ಚದಿಂದ ಪ್ರಜೆಗಳು ಪಡೆಯಬಹುದಾದ ಆದಾಯವನ್ನು ಹಣದ ರೂಪದಲ್ಲಿ ಅಳೆಯಲು ಸಾಧ್ಯವಾಗುವುದಿಲ್ಲ. ಅವರ ಜೀವನದ ಪರಿಸ್ಥಿತಿಯಲ್ಲಿ ಉಂಟಾಗುವ ಮಾರ್ಪಾಟುಗಳಿಂದ ಈ ವೆಚ್ಚದ ಪರಿಣಾಮವನ್ನು ನಾವು ಕಾಣಬಹುದು.

ಸರಕಾರ ಅನುಸರಿಸುವ ವೆಚ್ಚದ ನೀತಿಯಿಂದ ದೇಶದ ನಾನಾ ಭಾಗಗಳಿಗೆ ಆರ್ಥಿಕಸ್ಥಿತಿಯಲ್ಲಿರುವ ಅಂತರವನ್ನು ಕಡಮೆ ಮಾಡಲು ಸಾಧ್ಯವಾಗುತ್ತದೆ. ಇಂಡಿಯಾದೇಶದ ಬಿಹಾರ್ ಮತ್ತು ಸಿಂಧ್ ಪ್ರಾಂತಗಳಲ್ಲಿ ಬಡತನ ಹೆಚ್ಚು. ಅಲ್ಲಿಯ ಸರಕಾರದ ಹುಟ್ಟುವಳಿ ಅಲ್ಪ. ಆ ದೇಶಗಳಿಗೆ, ಸಮಾಜಸೇವೆ ಮತ್ತು ಸಂಪದಭ್ಯುದಯ ಕಾರ್ಯಗಳಿಗಾಗಿ ವೆಚ್ಚಮಾಡಲು ಹಣವಿಲ್ಲ. ಬಂಗಾಳ ಬೊಂಬಾಯಿ ಪ್ರಾಂತಗಳಲ್ಲಿ ಸಂಪತ್ತು ಅಧಿಕವಾಗಿದೆ. ಸರಕಾರದ ಹುಟ್ಟುವಳಿ ಬಲವಾಗಿದೆ. ಅಲ್ಲಿ ಪ್ರಜಾಸೌಖ್ಯಸಾಧನಕಾರ್ಯಗಳೂ ಬಲವಾಗಿ ನಡೆಯುತ್ತವೆ. ಹೀಗೆ, ಸಂಪತ್ತು ಹೆಚ್ಚಾಗಿರುವ ದೇಶದ ಆದಾಯದ ಒಂದು ಭಾಗವನ್ನು ಬಡತನದ ದೇಶಗಳಿಗೆ ಒದಗಿಸುವುದರಿಂದ ಒಂದು ರಾಷ್ಟ್ರದ ನಾನಾಭಾಗಗಳಿಗೆ ಇರುವ ಅಂತರವನ್ನು ಕಡಮೆಮಾಡಲು ಸಾಧ್ಯವಾಗುವುದು.

ಸರಕಾರ ಧನಿಕರಿಂದ ಹೆಚ್ಚಿನ ದರದಲ್ಲಿ ಕೆಲವು ತೆರಿಗೆಗಳನ್ನು ಸಂಗ್ರಹಿಸಿ, ಸುಲಭದರದಲ್ಲಿ ಬಡ್ಡಿಯಿಂದ ಸಾಲ ತೆಗೆದು ಆ ಹಣವನ್ನು ಬಡವರ ಮತ್ತು ನಿರ್ಬಲರ ಜೀವನ ಸೌಕರ್ಯಕ್ಕಾಗಿ ವೆಚ್ಚಮಾಡುತ್ತದೆ. ಇದರಿಂದ ಧನವಂತರ ಆದಾಯದ ಮಿತಿ ಮೀರದೆ, ಬಡವರಿಗೆ ಸೌಕರ್ಯಗಳು ಹೆಚ್ಚಿ ಅವರ ಅರ್ಜನಶಕ್ತಿ ಬಲವಾಗಿ ಬಡವರಿಗೂ ಮತ್ತು ಬಲ್ಲಿದರಿಗೂ ಇರುವ ಅಂತರವು ಕಡಮೆಯಾಗುತ್ತದೆ.

ಬಡವರು ಶ್ರಮಜೀವಿಗಳು ಕೂಲಿಗಾರರು ಹಿಂದುಳಿದವರು ಇವರ ವಿದ್ಯಾಭ್ಯಾಸ ವೈದ್ಯಸಹಾಯ ವಸತಿನಿರ್ಮಾಣಗಳಿಗಾಗಿ, ಸರಕಾರ ಅನೇಕವೇಳೆ ವಿಶೇಷ

ಕಾರ್ಯಕ್ರಮಗಳನ್ನು ಕೈಗೊಳ್ಳುವುದರಿಂದ, ಹಣವನ್ನು ವೆಚ್ಚಮಾಡುತ್ತದೆ. ಇದರಿಂದ ಆ ಜನರ ಆರ್ಥಿಕಜೀವನವನ್ನು ಸರಕಾರ ಉತ್ತಮಗೊಳಿಸಿದಂತಾಗಲಿಲ್ಲವೆ?

ರೈಲ್ವೆ, ನೀರಾವರಿ, ಸಂಶೋಧನ ಕಾರ್ಯಗಳು, ನಿರುದ್ಯೋಗ ನಿವಾರಣೆ ಮೊದಲಾದ ಬಾಬುಗಳಿಗಾಗಿ ಸರಕಾರ ಮಾಡುವ ವೆಚ್ಚದಿಂದ ರಾಷ್ಟ್ರದ ಸಂಪತ್ತು ಬೆಳೆಯುತ್ತದೆ. ಪ್ರತಿಯೊಬ್ಬ ಪ್ರಜೆಯ ಆರ್ಥಿಕಸ್ಥಿತಿಯೂ, ಪರೋಕ್ಷವಾಗಿಯಾದರೂ ಉತ್ತಮಗೊಳ್ಳುತ್ತದೆ.

---

# ಪ್ರಕರಣ ೭

## ಸರಕಾರದ ಹುಟ್ಟುವಳಿ

ಸರಕಾರ ಮಾಡಬೇಕಾದ ಕಾರ್ಯಗಳು ಅನೇಕವಾಗಿವೆ. ಹೊರಗಣ ಶತ್ರುಗಳು ಪ್ರಜೆಗಳನ್ನು ಹಿಂಸೆಪಡಿಸದಂತೆ ನೋಡಿಕೊಳ್ಳಲು ಪ್ರಬಲವಾದ ಸೈನ್ಯ, ದೇಶದಲ್ಲಿ ಕಳ್ಳಕಾಕರ ಹಾವಳಿಯನ್ನು ತಪ್ಪಿಸಿ ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಪಾಲಿಸಲು ತಕ್ಕ ಪೋಲೀಸ್‌ಪಡೆ, ವ್ಯಾಜ್ಯ ವ್ಯವಹಾರಗಳನ್ನು ತೀರಿಸಲು ಕೋರ್ಟು ಕಚೇರಿಗಳು, ರೋಗಪರಿಹಾರಕ್ಕಾಗಿ ಆಸ್ಪತ್ರೆಗಳು, ವಿದ್ಯಾಪ್ರಚಾರಕ್ಕಾಗಿ ಪಾಠಶಾಲೆಗಳು, ಇವು ಬೇಕು. ದೀನರ ಮತ್ತು ಅನಾಥರ ಉದ್ಧಾರಕ್ಕೂ ಸರಕಾರವೇ ಮುಂದೆ ಬರಬೇಕು. ದೇಶದ ಸರ್ವತೋಮುಖವಾದ ಅಭಿವೃದ್ಧಿಗಾಗಿ ಅನೇಕ ಕಾರ್ಯಗಳನ್ನು ಸರಕಾರ ಕೈಗೊಳ್ಳಬೇಕು. ಇವನ್ನು ಚೆನ್ನಾಗಿ ನೆರವೇರಿಸಬೇಕಾದರೆ ಸರಕಾರದ ಬೊಕ್ಕಸ ತುಂಬಿರಬೇಕು. ಹೀಗೆ ಸರಕಾರಕ್ಕೆ ಬೇಕಾಗುವ ಹಣವನ್ನು ಅನೇಕ ವಿಧವಾಗಿ ಶೇಖರಿಸುತ್ತಾರೆ. ಇದರಲ್ಲಿ ಮೊದಲನೆಯದು ಸಂಪಾದನೆಯ ಮಾರ್ಗ; ಎರಡನೆಯದು ಸಾಲದ ಮಾರ್ಗ. ಸರಕಾರ, ಸಾಲದ ಮೂಲಕ ತನಗೆ ಬೇಕಾದ ಹಣವನ್ನು ಹೇಗೆ ಸಂಗ್ರಹಿಸುತ್ತದೆ ಎಂಬ ವಿಷಯವನ್ನು ಬೇರೊಂದು ಪ್ರಕರಣದಲ್ಲಿ ತಿಳಿಸಲಾಗಿದೆ. ಸಂಪಾದನೆಯ ಮಾರ್ಗದಲ್ಲಿ ಇವು ಸೇರಿವೆ :—

(i) ಕಾಡು, ಗಣಿ ಮುಂತಾದ ಸ್ವಾಭಾವಿಕ ಸಂಪತ್ತಿಯಿಂದ ಬರುವ ಆದಾಯ.
(ii) ನೀರಾವರಿ ಕೆಲಸಗಳು, ವಿದ್ಯುಚ್ಛಕ್ತಿ ಮೊದಲಾದವುಗಳಿಂದ ಒದಗುವ ಹಣ.
(iii) ಗಂಧದೆಣ್ಣೆ, ಸಾಬೂನು, ಸಕ್ಕರೆ, ಔಷಧಿ, ಮೊದಲಾದ ವ್ಯಾಪಾರ ಮತ್ತು ಕೈಗಾರಿಕೆಗಳಿಂದ ಬರುವ ಲಾಭ.
(iv) ಸಾಮಂತರೂ ಜಮೀನ್ದಾರರೂ ಸರಕಾರಕ್ಕೆ ಸಲ್ಲಿಸುವ ಕಪ್ಪಕಾಣಿಕೆಗಳು.
(v) ಯುದ್ಧದಲ್ಲಿ ಸೋತವರು ಗೆದ್ದವರಿಗೆ ತೆರುವ ದಂಡ ಮತ್ತು ಪರಿಹಾರದ್ರವ್ಯ.
(vi) ಭೂಕಂದಾಯ, ವರಮಾನದ ತೆರಿಗೆ, ಸುಂಕಗಳು, ಸೇಂದಿ ಆದಾಯ ಮುಂತಾದವುಗಳು.
(vii) ಧರ್ಮನಿಧಿ ಮತ್ತು ಅದರ ಆದಾಯ.
(viii) ನಾಣ್ಯ ನೋಟುಗಳನ್ನು ತಯಾರುಮಾಡುವುದು ಮತ್ತು ಅವುಗಳ ಚಲಾವಣೆಯಿಂದ ಬರುವ ಲಾಭ.

ಸಂಪಾದನೆಯ ಮಾರ್ಗದಲ್ಲಿ ಕಂಡುಬರುವ ಬಾಬುಗಳನ್ನು ಸ್ಥೂಲವಾಗಿ ತೆರಿಗೆಯಿಂದ ಬರುವ ಆದಾಯದ ಬಾಬುಗಳೆಂದೂ, ತೆರಿಗೆಯಿಂದ ಪ್ರತ್ಯೇಕವಾದ ಬಾಬುಗಳೆಂದೂ ಎರಡು ಭಾಗವಾಗಿ ವಿಂಗಡಿಸಬಹುದು. ಹೀಗೆ ಸಂಪಾದನೆಯ ಮಾರ್ಗದಲ್ಲಿ ಒಂದಾದ ತೆರಿಗೆಯನ್ನು ಏತಕ್ಕೆ ಕೊಡಬೇಕು, ಅದನ್ನು

ಹೇಗೆ ಹಾಕಬೇಕು, ಅದರ ನಾನಾ ರೂಪಗಳು ಯಾವುವು, ಈ ಅಂಶಗಳನ್ನು ಮುಂದೆ ತಿಳಿಸಲಾಗಿದೆ. ಇಲ್ಲಿ, ತೆರಿಗೆಯಿಂದ ಪ್ರತ್ಯೇಕವಾದ ಆದಾಯದ ಬಾಬುಗಳನ್ನು ವಿಮರ್ಶಿಸಲಾಗುವುದು.

ಮೈಸೂರು ಸರಕಾರದ ಒಟ್ಟು ಆದಾಯದಲ್ಲಿ ಮೂರರಲ್ಲಿ ಎರಡರಷ್ಟು ಭಾಗ ತೆರಿಗೆಯ ಬಾಬುಗಳಿಂದ ಬರುತ್ತದೆ. ಇತ್ತೀಚೆಗೆ ತೆರಿಗೆಯಿಂದ ಪ್ರತ್ಯೇಕವಾದ ಬಾಬುಗಳಿಂದ ಬರುವ ಆದಾಯ ಹೆಚ್ಚಿ, ಇವು ಪ್ರಾಮುಖ್ಯವನ್ನು ಪಡೆದಿವೆ. ತೆರಿಗೆ ಯಿಂದ ಪ್ರತ್ಯೇಕವಾದ ಬಾಬುಗಳಲ್ಲಿ, ಪ್ರಕೃತಿಸಿದ್ಧವಾದ ಅರಣ್ಯ, ಗಣಿ, ಮೊದ ಲಾದವು ಒಂದು ಬಗೆಯದು; ವ್ಯಾಪಾರೋದ್ಯಮಕ್ಕೆ ಸಮನಾದ ವಾಣಿಜ್ಯ ಮತ್ತು ಕೈಗಾರಿಕೆಗಳು ಎರಡನೆಯದು. ಈ ಎರಡು ಬಾಬುಗಳಿಂದಲೂ ಸರಕಾರ ತನ್ನ ವರಮಾನವನ್ನು ಹೆಚ್ಚಿಸಿಕೊಳ್ಳಲು ಇತ್ತೀಚೆಗೆ ಪ್ರಯತ್ನಿಸುತ್ತಿದೆ. ಸ್ವೀಡನ್ನಿನ ಬಡ್ಜೆಟ್‌ನಲ್ಲಿ ಅಂಚೆ ಮತ್ತು ತಂತಿ, ಜಲಪಾತಗಳು, ರೈಲುಗಳು, ಇವುಗಳಿಂದ ಬರುವ ಆದಾಯವನ್ನೂ ಸರಕಾರದ ಹತೋಟಿಯಲ್ಲಿರುವ ಅಲ್ಲಿಯ ಹೊಗೆ ಸೊಪ್ಪಿನ ಕಾರ್ಖಾನೆ, ಸ್ವೀಡನ್ನಿನ ಬ್ಯಾಂಕ್, ಇವುಗಳಿಂದ ಬರುವ ವರಮಾನ ವನ್ನೂ ತೆರಿಗೆಯಲ್ಲದ ಬಾಬುಗಳಿಂದ ಬರುವ ಆದಾಯವೆಂದು ಭಾವಿಸಲಾಗಿದೆ. ಹಾಲೆಂಡಿನಲ್ಲಿ, ಸರಕಾರದ ಜಮೀನಿನಿಂದ ಬರುವ ಆದಾಯ, ರೈಲ್ವೆ, ನೆದರ್‌ಲ್ಯಾಂಡ್ ಬ್ಯಾಂಕಿನಿಂದ ಬರುವ ಆದಾಯದಲ್ಲಿನ ಒಂದು ಭಾಗ, ಇವೇ ಮೊದಲಾದವು ತೆರಿಗೆಯಿಂದ ಪ್ರತ್ಯೇಕವಾದ ಬಾಬುಗಳಿಂದ ಬರುವ ಆದಾಯವೆಂದು ತಿಳಿದಿದ್ದಾರೆ. ಗ್ರೇಟ್ ಬ್ರಿಟನ್ನಿನಲ್ಲಿ ಅಂಚೆ ಮತ್ತು ತಂತಿ, ಟೆಲಿಫೋನ್, ರಾಜಭೂಮಿ, ಸೂಯೆಸ್ ಕಾಲುವೆಯ ಷೇರುಗಳಿಂದ ಬರುವ ಬಡ್ಡಿ, ಇವೆಲ್ಲವೂ ತೆರಿಗೆಯಿಂದ ಪ್ರತ್ಯೇಕವಾದ ಆದಾಯದ ಬಾಬುಗಳು.

೧೯೩೦-೩೧ನೆಯ ಇಸವಿಯ ಮುಗ್ಗಟ್ಟಿನಿಂದ ಈಚೆಗಂತೂ, ಸಾರ್ವಜನಿಕ ಹಣಕಾಸಿನ ವ್ಯವಸ್ಥೆಯಲ್ಲಿ ಅನೇಕ ಬದಲಾವಣೆಗಳು ನಡೆದಿವೆ. ಆಸ್ತಿ ಮತ್ತು ಆದಾಯ ಇವುಗಳಮೇಲೆ ತೆರಿಗೆ ಹಾಕಿ ಶ್ರೀಮಂತರಿಂದ ಹಣವನ್ನು ವಸೂಲ್ಮಾಡು ವಂತೆ ಸಾಮಾನ್ಯ ಜನರು ಬಳಸುವ ಮತ್ತು ಉಪಯೋಗಿಸುವ ಪದಾರ್ಥಗಳಮೇಲೆ ತೆರಿಗೆ ಹಾಕಿ ಹಣ ಶೇಖರಿಸುವುದೂ ವಾಡಿಕೆಗೆ ಬರುತ್ತಿದೆ. ಹಾಗೆಯೇ ಸರಕಾರ ಪ್ರಮುಖವಾದ ವ್ಯಾಪಾರ ಮತ್ತು ಕೈಗಾರಿಕೆಗಳನ್ನು ಸ್ವತಃ ನಡಸುವ ಸಂಪ್ರದಾ ಯವೂ ಬಲವಾಗುತ್ತ ಬಂದಿದೆ. ಪ್ರಕೃತಿಸಿದ್ಧವಾದ ಅರಣ್ಯ, ಗಣಿ ಮೊದಲಾದವು ಗಳಿಂದ ಬರುವ ವರಮಾನದ ಜೊತೆಗೆ, ವ್ಯಾಪಾರ, ಕೈಗಾರಿಕೆ ಮೊದಲಾದವುಗಳನ್ನು ಕೈಗೊಂಡು, ಸರಕಾರದ ಆದಾಯವನ್ನು ಬಲಪಡಿಸಿಕೊಳ್ಳುವುದು ರೂಢಿಗೆ ಬಂದಿದೆ. ೧೯೨೬-೨೭ನೆಯ ಇಸವಿಯಿಂದ ಮೈಸೂರು ದೇಶದ ಆಯವ್ಯಯ ಪಟ್ಟಿಯನ್ನು ಪರಾ ಮರ್ಶಿಸಿದರೆ, ಈ ಬಗೆಯ ತೆರಿಗೆಯಲ್ಲದ ಬಾಬುಗಳಿಂದ ಬರುವ ಆದಾಯ ಹೇಗೆ ಬೆಳೆ ಯುತ್ತಿದೆ, ಅದರ ಪ್ರಾಧಾನ್ಯ ಎಂತಹುದು ಎಂಬುದು ಸ್ಪಷ್ಟವಾಗುತ್ತದೆ. ೧೯೨೬-೨೭ರಲ್ಲಿ ದೇಶದ ವರಮಾನ ೩೩೮.೬೯ ಲಕ್ಷ ರೂ. ಗಳಿದ್ದುದು ೧೯೩೬-೩೭ರಲ್ಲಿ

೩೭೮.೭೨ ಲಕ್ಷ ರೂ. ಗಳಿಗೆ ಏರಿತು. ಎಂದರೆ ಹತ್ತು ವರುಷಗಳಲ್ಲಿ ಸರಕಾರದ ವರಮಾನವು ನಲವತ್ತು ಲಕ್ಷ ರೂಪಾಯಿಗಳಷ್ಟು ಹೆಚ್ಚಿದೆ. ಬಡವರ ಹೊರೆಯನ್ನು ಬಲಮಾಡಿ, ಸರಕಾರ ತನ್ನ ಹುಟ್ಟುವಳಿಯನ್ನು ಸಂಗ್ರಹಿಸುತ್ತಿಲ್ಲ. ೧೯೨೬-೨೭ರಲ್ಲಿ ತೆರಿಗೆಯ ರೂಪದಲ್ಲಿ ೨೨೫.೩೬ ಲಕ್ಷ ರೂ. ಗಳು ಆದಾಯ ಬರುತ್ತಿದ್ದು ಅದು ೧೯೩೬-೩೭ ರ ವೇಳೆಗೆ ೨೨೭.೪೭ ಲಕ್ಷದಷ್ಟಾಯಿತು. ಎಂದರೆ ಕೇವಲ ಎರಡು ಲಕ್ಷದಷ್ಟು ಮಾತ್ರ ಏರಿತು. ೧೯೩೪-೩೫ರಲ್ಲಿ ತೆರಿಗೆಯು ರೂಪದಲ್ಲಿ ಬಂದ ಆದಾಯ ೨೧೩.೧೪ ಲಕ್ಷ ರೂಪಾಯಿಗಳು ಮಾತ್ರ. ಆದರೆ ಈ ಕಾಲದಲ್ಲಿ ತೆರಿಗೆಯಿಂದ ಪ್ರತ್ಯೇಕವಾದ ಬಾಬುಗಳ ಆದಾಯ ಹೆಚ್ಚಿ ಸರಕಾರದ ವರಮಾನ ಬಲವಾಗಲು ಅವಕಾಶವಾಯಿತು. ತೆರಿಗೆಯಿಂದ ಪ್ರತ್ಯೇಕವಾದ ಬಾಬುಗಳ ಆದಾಯ ೧೯೨೬-೨೭ರಲ್ಲಿ ಕೇವಲ ೧೧೩.೩೩ ಲಕ್ಷ ರೂಪಾಯಿಗಳಿದ್ದು ೧೯೩೪-೩೫ರ ವೇಳೆಗೆ ೧೫೪.೫೨ ಲಕ್ಷ ರೂ. ಗಳಷ್ಟಾಯಿತು. ಈ ಆದಾಯ ಸರಕಾರದ ಅರಣ್ಯ ಶಾಖೆ, ಚಿನ್ನದ ಗಣಿಯ ಮೇಲಣ ರಾಜಾದಾಯ, ಸರಕಾರ ಕೈಗೊಂಡಿರುವ ವ್ಯಾಪಾರ ವಾಣಿಜ್ಯೋದ್ಯಮಗಳು, ಕೈಗಾರಿಕೆಗಳು, ಸಾಲ ಮೊದಲಾದವುಗಳ ಮೇಲಣ ಬಡ್ಡಿ ಇವುಗಳಿಂದ ಬರುತ್ತದೆ. ಬ್ರಿಟಿಷ್ ಇಂಡಿಯಾದಲ್ಲಿ ಸರಕಾರದ ವರಮಾನದಲ್ಲಿ ಮೂರರಲ್ಲೊಂದುಭಾಗ, ಅಲ್ಲಿಯ ರೈಲ್ವೆ, ನಾಲೆ, ಅಂಚೆ ಮತ್ತು ತಂತಿ, ಅರಣ್ಯಗಳು, ಟಂಕಸಾಲೆಗಳು, ಸರಕಾರದ ನಾನಾಶಾಖೆಗಳಿಂದ ವಸೂಲಾಗುವ ಫೀ, ಸಾಲದಮೇಲಣ ಬಡ್ಡಿ, ಈ ಬಾಬುಗಳಿಂದಲೇ ಬರುತ್ತದೆ. ಸರಕಾರದ ಒಟ್ಟು ವರಮಾನದಲ್ಲಿ ಶೇಕಡ ಎಷ್ಟುಭಾಗ ತೆರಿಗೆಯಿಂದ ಪ್ರತ್ಯೇಕವಾದ ಬಾಬುಗಳಿಂದ ಬರುತ್ತಿದೆ ಎಂಬುದನ್ನೂ ಈ ಬಾಬಿನ ಹುಟ್ಟುವಳಿಯ ಪ್ರಾಮುಖ್ಯವನ್ನೂ ಈ ಅಂಕಿಗಳಿಂದ ತಿಳಿಯಬಹುದು :—

| ದೇಶ | ವರ್ಷ | | ಒಟ್ಟು ಆದಾಯದಲ್ಲಿ ತೆರಿಗೆಗಿಂತ ಪ್ರತ್ಯೇಕವಾದ ಬಾಬುಗಳಿಂದ ಬರುವ ಶೇಕಡ ಆದಾಯ |
|---|---|---|---|
| ಗ್ರೇಟ್ ಬ್ರಿಟನ್ | ೧೯೩೪ | ... | ೧೨·೪ |
| ಕೆನಡ | ,, | ... | ೨೪·೬ |
| ಆಸ್ಟ್ರೇಲಿಯ | ,, | ... | ೪·೬ |
| ದಕ್ಷಿಣ ಆಫ್ರಿಕ | ,, | ... | ೩೧·೭ |
| ಅಮೆರಿಕ | ,, | ... | ೩೭·೬ |
| ಫ್ರಾನ್ಸ್ | ,, | ... | ೩೬·೧ |
| ಇಟಲಿ | ,, | ... | ೫·೧ |
| ಜಪಾನ್ | ,, | ... | ೩೫·೩ |
| ಬ್ರಿಟಿಷ್ ಇಂಡಿಯ | ೧೯೩೩–೩೪ | ... | ೩೭·೬ |
| ಮೈಸೂರು | ೧೯೩೪-೩೫ | ... | ೪೨·೦ |

ಅರಣ್ಯ, ಗಣಿ ಮೊದಲಾದ ಪ್ರಕೃತಿದತ್ತವಾದ ಸರಕಾರದ ಸಂಪತ್ತೂ, ರೈಲ್ವೆ, ಅಂಚೆ, ತಂತಿ, ವಿದ್ಯುಚ್ಛಕ್ತಿ ಮೊದಲಾದ ವ್ಯಾಪಾರ ವಾಣಿಜ್ಯೋದ್ಯಮ

ಗಳೂ, ಎಲ್ಲ ಕಾಲಗಳಲ್ಲಿಯೂ ಎಲ್ಲ ದೇಶಗಳಲ್ಲಿಯೂ ಸರಕಾರದ ಆದಾಯವನ್ನು ಒದಗಿಸಿಕೊಡುತ್ತವೆ. ಹೀಗೆಯೇ ತೆರಿಗೆಯಿಂದ ಪ್ರತ್ಯೇಕವಾದ ಬಾಬುಗಳಾದ ರಾಜಕೀಯ ದಂಡಗಳು (Indemnities and Reparations) ಅನಿಯಮಿತವಾದ ನೋಟುಗಳ ತಯಾರಿಕೆ ಮತ್ತು ಚಲಾವಣೆ ಇವು ವಿಶೇಷ ಸಂದರ್ಭಗಳಲ್ಲಿ ಸರಕಾರಕ್ಕೆ ಹುಟ್ಟುವಳಿಯನ್ನು ಹೆಚ್ಚಿಸುತ್ತವೆ.

ರಾಜಕೀಯ ದಂಡಗಳು ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲದಲ್ಲಿಯೂ ಕಾಣಬರುವುದಿಲ್ಲ. ಯುದ್ಧಗಳು ನಡೆದಾಗ ಯುದ್ಧದಲ್ಲಿ ಗೆದ್ದ ರಾಷ್ಟ್ರಗಳು ಸೋತವರಿಂದ ಪರಿಹಾರ ದ್ರವ್ಯಗಳನ್ನು ತೆಗೆದು ತಮ್ಮ ನಷ್ಟವನ್ನು ಪರಿಹಾರಮಾಡಿಕೊಂಡು ಹಣ ಸಂಪಾದನೆ ಮಾಡುವುದೇ ಈ ಪದ್ಧತಿ. ಯುದ್ಧದಲ್ಲಿ ಗೆದ್ದ ರಾಷ್ಟ್ರಗಳು, ಸೋತವರಿಗೆ ಸೇರಿದ ಭೂಭಾಗಗಳನ್ನೂ ವಸತಿಗಳನ್ನೂ ಕಿತ್ತುಕೊಳ್ಳುತ್ತಾರೆ. ತಮಗೂ ತಮ್ಮ ಮಿತ್ರ ಮಂಡಲಿಯವರಿಗೂ ಆಗಿರುವ ಜನನಷ್ಟವನ್ನೂ ಕೈಗಾರಿಕೆ ಮತ್ತು ವ್ಯಾಪಾರಗಳ ನಷ್ಟವನ್ನೂ ಒಂದು ಮೊತ್ತದ ರೂಪದಲ್ಲಿ ಅಳೆದು ಅದನ್ನು ಒಂದೇ ಬಾರಿಯೋ ಅಥವಾ ಕೆಲವು ವರ್ಷಗಳಲ್ಲಿಯೋ ಸಲ್ಲಿಸಬೇಕೆಂದು ಒಪ್ಪಂದ ಮಾಡಿಕೊಳ್ಳುತ್ತಾರೆ. ಇದರಿಂದ ಸೋತರಾಜ್ಯಗಳಮೇಲೇ ಅಲ್ಲದೆ, ಒಟ್ಟು ಪ್ರಪಂಚದ ಜನಜೀವನದ ಮೇಲೇ ದುಷ್ಪರಿಣಾಮಗಳು ಉಂಟಾಗುತ್ತವೆ. ಈ ದಂಡದ್ರವ್ಯವನ್ನು ಕೊಡಲು ಸೋತ ರಾಜ್ಯಗಳಿಗೆ ಶಕ್ತಿ ಇರುವುದಿಲ್ಲ. ಯುದ್ಧದ ಪರಿಣಾಮವಾಗಿ, ತಮ್ಮ ದೇಶಗಳಲ್ಲಿ ಉಂಟಾಗುವ ಕ್ಷಾಮ, ದುರ್ಭಿಕ್ಷ, ನಿರುದ್ಯೋಗ, ರೋಗರುಜಿನಾದಿ ಉಪದ್ರವಗಳನ್ನು ನೀಗಿ ತಮ್ಮ ಆರ್ಥಿಕಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವುದಕ್ಕಾಗಿಯೇ ಅವರು ಸಾಲಮಾಡಬೇಕಾಗಿರುವಾಗ, ಈ ದಂಡ ದ್ರವ್ಯವನ್ನು ಗೆದ್ದ ರಾಷ್ಟ್ರಗಳಿಗೆ ಎಲ್ಲಿಂದ ತಂದು ಸಲ್ಲಿಸಿಯಾರು? ಅವರಿಗೆ ಪರಿಹಾರದ್ರವ್ಯವನ್ನು ಕೊಡಲು ಪುನಃ ಗೆದ್ದ ರಾಷ್ಟ್ರಗಳಿಂದಲೇ ಸಾಲ ತರಬೇಕು. ಇದು ಕೊನೆಯಲ್ಲಿ ದುಃಖಕ್ಕೂ ವೈಮನಸ್ಯಕ್ಕೂ ಕಾರಣವಾಗಿ, ಜನರ ಜೀವನದಮೇಲೆ ಅನೇಕ ದುಷ್ಪರಿಣಾಮಗಳುಂಟಾಗುವುವು.

ಸಾಮಾನ್ಯವಾಗಿ ಹಣಕಾಸಿನ ಚಲಾವಣೆಗಾಗಿ ಸರಕಾರ ನಾಣ್ಯಗಳನ್ನು ತಯಾರಿಸುವಂತೆಯೇ, ಒಂದು ಮಿತಿಯನ್ನರಿತು ನೋಟುಗಳನ್ನೂ ತಯಾರಿಸುತ್ತದೆ. ಈ ನಾಣ್ಯ ಮತ್ತು ನೋಟುಗಳ ತಯಾರಿಕೆಯಿಂದ ಸರಕಾರಕ್ಕೆ ವರ್ಷಂಪ್ರತಿ ಆದಾಯವಿದೆ. ಸರಕಾರಕ್ಕೆ ಹಣಬೇಕಾದ ಯುದ್ಧ ಮೊದಲಾದ ವಿಶೇಷ ಪರಿಸ್ಥಿತಿಗಳಲ್ಲಿ ಹೊಸಹೊಸದಾಗಿ ನೋಟುಗಳನ್ನು ಅಚ್ಚುಮಾಡಿ, ತನ್ನ ವೆಚ್ಚಕ್ಕೆ ಬೇಕಾಗುವ ಹಣವನ್ನು ಒದಗಿಸಿಕೊಳ್ಳುವ ಸಂಪ್ರದಾಯವಿದೆ. ಕೆಲವುವೇಳೆ ಕೆಲವು ದುರ್ಬಲವಾದ ಸರಕಾರಗಳು, ಎಲ್ಲೂ ಸಾಲ ಹುಟ್ಟದೆ ಹೋದಾಗ, ಈ ರೀತಿ ನೋಟುಗಳನ್ನು ಮಿತಿಮೀರಿ ಅಚ್ಚುಹಾಕಿ ಹಣವನ್ನು ಹೆಚ್ಚಿಸಿಕೊಳ್ಳುವ ಉಪಾಯವನ್ನು ಹುಡುಕುತ್ತವೆ. ಇದು ಅಸಾಧುವಾದ ಮಾರ್ಗ. ಪ್ರಾರಂಭದಲ್ಲಿ ಹೆಚ್ಚುವೆಚ್ಚವಿಲ್ಲದೆ ಧನಸಂಗ್ರಹವಾದಂತಾದರೂ, ಕೊನೆಯಲ್ಲಿ ಕೆಟ್ಟ ಪರಿಣಾಮವನ್ನುಂಟು

ಮಾಡುತ್ತದೆ. ಚಲಾವಣೆಯಲ್ಲಿ ಹೆಚ್ಚು ಹಣ ಬಂದಂತೆಲ್ಲಾ ಧಾರಣೆವಾಸಿಗಳು ಏರುತ್ತವೆ. ಜನರಿಗಾಗಲಿ ಸರಕಾರಕ್ಕಾಗಲಿ ಬೇಕಾದದ್ದು ಹಣವಲ್ಲ, ಪದಾರ್ಥ, ಸೇವೆ, ಸೌಕರ್ಯಗಳು. ಮಿತಿಯಿಲ್ಲದೆ ನೋಟುಗಳ ಚಲಾವಣೆ ಹೆಚ್ಚಿದಲ್ಲಿ, ಜನತೆಗೆ ಅತ್ಯವಶ್ಯಕವಾದ ಪದಾರ್ಥ, ಸೌಕರ್ಯಗಳು, ದೊರೆಯುವುದೇ ಕಷ್ಟವಾಗುತ್ತದೆ. ಇದರಿಂದ ದೇಶವಿದೇಶಗಳೊಂದಿಗಿರುವ ವ್ಯಾಪಾರದ ಸಂಬಂಧವೂ ಕುಸಿದು ಬೀಳಬಹುದು.

---

# ಪ್ರಕರಣ ೮

## ತೆರಿಗೆ : ಉದ್ದೇಶ, ಸ್ವರೂಪ, ವಿಂಗಡಣೆ ಮತ್ತು ನಿಯಮಗಳು*

### ೧ ಉದ್ದೇಶ

ಸರಕಾರಕ್ಕೆ ಬೇಕಾದ ಹಣವನ್ನು ಪಡೆಯುವುದು ತೆರಿಗೆಸಿಸ್ತಿನ ಮುಖ್ಯ ಉದ್ದೇಶ. ಪ್ರಜೆಗಳ ರೀತಿ ನೀತಿಗಳನ್ನು ಸ್ವಲ್ಪಮಟ್ಟಿಗೆ ಬದಲಾಯಿಸುವುದಕ್ಕೂ ತೆರಿಗೆಗಳನ್ನು ವಿಧಿಸುವುದುಂಟು. ದೇಶದಲ್ಲಿ ಉಪಯೋಗಿಸುವ ಕೆಲವು ಪದಾರ್ಥಗಳಿಂದ ಅಲ್ಲಿನ ಜನರಿಗೆ ಕೇಡಾಗುವುದೆಂದು ತೋರಿದಾಗ ಸರಕಾರ ಅವುಗಳ ಸೇವನೆಯನ್ನು ಹತೋಟಿಯಲ್ಲಿಡುವುದಕ್ಕೆ ತೆರಿಗೆಗಳನ್ನು ಹಾಕುವುದು ವಾಡಿಕೆಯಲ್ಲಿದೆ. ಮದ್ಯಪಾನದಿಂದ ಜನರಿಗೆ ತೊಂದರೆ ಉಂಟೆಂಬುದನ್ನು ಅರಿತು ಮಾದಕ ದ್ರವ್ಯಗಳ ಮಾರಾಟವನ್ನು ಸರಕಾರ ಹತೋಟಿಯಲ್ಲಿಡುತ್ತದೆ. ಇದೂ ಅಲ್ಲದೆ ಪರದೇಶಗಳಿಂದ ಬರುವ ಮಾದಕದ್ರವ್ಯಗಳ ಮೇಲೆ ಹೆಚ್ಚಿನ ಸುಂಕವನ್ನು ವಿಧಿಸುತ್ತದೆ. ಅವುಗಳ ಬೆಲೆಯನ್ನು ಹೆಚ್ಚಿಸಿದರೆ ಸಾಧಾರಣ ಜನರು ಅವುಗಳ ಉಪಯೋಗವನ್ನು ಕಡಮೆ ಮಾಡುವರೆಂಬ ಭಾವನೆಯಿಂದ ಈ ವಿಧದ ಅಬ್ಕಾರಿ ಸುಂಕಗಳನ್ನು ಹಾಕುವುದುಂಟು. ಪ್ರಜೆಗಳಲ್ಲಿ ದುಂದುಗಾರಿಕೆಯನ್ನು ಕಡಮೆ ಮಾಡಬೇಕೆಂದು ತೆರಿಗೆಗಳನ್ನು ಹಾಕುವುದುಂಟು. ಜೂಜಿನ ತೆರಿಗೆಯನ್ನು ಈ ಗುಂಪಿಗೆ ಸೇರಿಸಬಹುದು.

ದೇಶದ ಸಂಪದಭಿವೃದ್ಧಿ ಕಾರ್ಯವನ್ನು ಮುಂದುವರಿಸಲು ಪರದೇಶಗಳಿಂದ ಆಮದಾಗಿ ಬರುವ ಪದಾರ್ಥಗಳಮೇಲೆ ತೆರಿಗೆ ಹಾಕಿ ಸ್ವದೇಶೀ ಕೈಗಾರಿಕೆಗೆ ಪ್ರೋತ್ಸಾಹ ಕೊಡುವುದುಂಟು. ನಮ್ಮ ದೇಶದಲ್ಲಿ ಹತ್ತಿಬಟ್ಟೆ, ರೇಷ್ಮೆ, ಕಬ್ಬಿಣ ಮತ್ತು ಉಕ್ಕಿನ ಪದಾರ್ಥಗಳ ಕೈಗಾರಿಕೆ—ಇವುಗಳನ್ನು ಅಭಿವೃದ್ಧಿಗೆ ತರಲು ಪರದೇಶಗಳಿಂದ ನಮ್ಮ ದೇಶಕ್ಕೆ ಬರುವ ಈ ಸರಕುಗಳಮೇಲೆ ಸುಂಕ ಹೇರಿರುತ್ತಾರೆ.

ಸಮಾಜವನ್ನು ಕ್ರಾಂತಿಗೆ ಒಳಪಡಿಸದೆ ಧನಿಕರಿಗೂ ಬಡವರಿಗೂ ಇರುವ ಅಂತರವನ್ನು ತಗ್ಗಿಸಿ ಸಮಾಜ ಸುಧಾರಣೆಯ ಪ್ರಯತ್ನವನ್ನು ತೆರಿಗೆ ಸಿಸ್ತಿನಿಂದ ಸಾಧಿಸುವುದುಂಟು. ಧನಿಕರಿಂದ ಹೆಚ್ಚಿನ ತೆರಿಗೆಗಳನ್ನು ವಸೂಲುಮಾಡಿ ಆ ಹಣವನ್ನು ಸರಕಾರವು ಬಡವರ ಏಳಿಗೆಗೆ ವೆಚ್ಚಮಾಡುತ್ತದೆ. ಕಡಮೆ ಆದಾಯವುಳ್ಳ

---

* ತೆರಿಗೆಗೆ ಸಂಬಂಧಪಟ್ಟ ೮, ೯ ಮತ್ತು ೧೦ನೆಯ ಪ್ರಕರಣಗಳ ಬಹುಭಾಗವನ್ನು "ಪ್ರಚಾರ ಪುಸ್ತಕಮಾಲೆ"ಯ 'ತೆರಿಗೆ' ಯೆಂಬ ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.

ಜನರಿಗೆ ಮಾಸಾಶನ ವರ್ಷಾಶನ ರೂಪದಲ್ಲಿ ಸಹಾಯಮಾಡುವುದೂ ಉಂಟು. ಇದರಿಂದ ಸಂಪತ್ತಿನ ವಿನಿಯೋಗದಲ್ಲಿ ತೋರಿಬರುವ ವ್ಯತ್ಯಾಸಗಳನ್ನು ಸ್ವಲ್ಪಮಟ್ಟಿಗೆ ಕಡಮೆ ಮಾಡಲು ಸಾಧ್ಯವಾಗುವುದು.

ಮೇಲೆ ಹೇಳಿರುವ ಉದ್ದೇಶಗಳಲ್ಲೆಲ್ಲಾ ಮುಖ್ಯವಾದದ್ದು ಸರಕಾರದ ಬೊಕ್ಕಸಕ್ಕೆ ಹಣ ಬರುವಂತೆ ಮಾಡುವುದು. ಸರಕಾರದ ಹುಟ್ಟುವಳಿಯ ಬಹುಭಾಗ ತೆರಿಗೆಯ ರೂದದಲ್ಲಿ ವಸೂಲಾಗುತ್ತದೆ.

ತೆರಿಗೆ ಹುಟ್ಟುವಳಿಗೂ ಇತರ ವಿಧದ ಹುಟ್ಟುವಳಿಗೂ ಇರುವ ವ್ಯತ್ಯಾಸವನ್ನು ತಿಳಿದರೆ ತೆರಿಗೆಯ ಸ್ವರೂಪವನ್ನು ತಿಳಿಯಲು ಸಾಧ್ಯವಾಗುತ್ತದೆ.

## ೨ ಸ್ವರೂಪ

ಸರಕಾರವು ತನ್ನ ಆಡಳಿತಕ್ಕೆ ಒಳಪಟ್ಟ ಪ್ರಜೆಗಳಿಂದ ಕಡ್ಡಾಯವಾಗಿ ಸಂಗ್ರಹಿಸುವ ಹಣವನ್ನು ತೆರಿಗೆ ಎನ್ನಬಹುದು. ತೆರಿಗೆಯ ಹಣವನು ಪ್ರಜೆಗಳು ಸಕಾಲದಲ್ಲಿ ಕೊಡದಿದ್ದರೆ, ಅದರ ವಸೂಲಿಗೆ ತಕ್ಕ ಕಾರ್ಯಕ್ರಮವನ್ನು ನಡೆಸುವ ಅಧಿಕಾರವನ್ನು ಸರಕಾರವು ಪಡೆದಿರುತ್ತದೆ. ಉದಾಹರಣೆಗಾಗಿ ಭೂಕಂದಾಯವನ್ನು ತೆಗೆದುಕೊಳ್ಳೋಣ. ಎಕರೆಗೆ ಇಷ್ಟು ಎಂದು ಹಾಕಿರುವ ಕಂದಾಯವನ್ನು ರೈತನು ಸಕಾಲದಲ್ಲಿ ಕೊಡಲು ತಪ್ಪಿದರೆ, ಸರಕಾರವು ತನಗೆ ಸಲ್ಲಬೇಕಾದ ಹಣವನ್ನು ಪಡೆಯಲು, ಕಾನೂನು ಮೇರೆಗೆ ನೋಟೀಸ್, ಜಪ್ತಿ, ಹರಾಜು ಮುಂತಾದ ಕ್ರಮ ನಡಸುತ್ತದೆ. ಇದೇ ರೀತಿ ವರಮಾನದ ತೆರಿಗೆಯನ್ನು ಕೊಡಲು ತಪ್ಪಿದವರನ್ನು ಶಿಕ್ಷೆಗೆ ಗುರಿಪಡಿಸುವ ಅಧಿಕಾರವು ಸರಕಾರಕ್ಕುಂಟು. ಆದುದರಿಂದ ತೆರಿಗೆ ವಿಧಿಸುವ ಹಕ್ಕೂ ಅದನ್ನು ಕಡ್ಡಾಯವಾಗಿ ವಸೂಲು ಮಾಡುವ ಕ್ರಮವೂ ಒಟ್ಟಿಗೆ ಸೇರಿಕೊಂಡಿವೆ. ಸರಕಾರದ ಇತರ ಹುಟ್ಟುವಳಿಯ ವಿಷಯದಲ್ಲಿ ಈ ಕಡ್ಡಾಯವಾದ ನಿಯಮ ಅನ್ವಯಿಸುವುದಿಲ್ಲ.

ತೆರಿಗೆಗಳನ್ನು ಕೊಡುವ ಪ್ರಜೆಗಳು ತಾವು ಕೊಡುವ ಹಣಕ್ಕೂ ತಮಗೆ ಸರಕಾರದಿಂದ ದೊರೆಯುವ ಅನುಕೂಲಗಳಿಗೂ ದಾಮಾಷಾ ಮೇರೆಗೆ ಬೆಲೆ ಕಟ್ಟಲು ಸಾಧ್ಯವಿರುವುದಿಲ್ಲ. ಬೆಲೆ ಎಂಬ ಪದವನ್ನು ಕೇಳಿದರೆ ನಮ್ಮ ಮನಸ್ಸಿನಲ್ಲಿ ಉಂಟಾಗುವ ಭಾವಕ್ಕೂ ತೆರಿಗೆ ಎಂಬ ಪದವನ್ನು ಕೇಳಿದರೆ ಉಂಟಾಗುವ ಭಾವಕ್ಕೂ ಬಹಳ ವ್ಯತ್ಯಾಸವುಂಟು. ಒಂದು ಸಾಮಾನಿಗೆ ಬೆಲೆ ಕೊಟ್ಟು ಕೊಂಡುಕೊಳ್ಳುವಾಗ ಅದನ್ನು ಕೊಳ್ಳಬೇಕೆಂಬ ಬಲಾತ್ಕಾರವೇನೂ ಇರುವುದಿಲ್ಲ. ಇದೂ ಅಲ್ಲದೆ ಆ ಸಾಮಾನಿನಿಂದ ನಮಗೆ ಉಂಟಾಗುವ ಪ್ರಯೋಜನಕ್ಕೆ ಒಂದು ಅಂದಾಜು ಬೆಲೆ ಕಟ್ಟುತ್ತೇವೆ. ಸಾಮಾನು ತಯಾರು ಮಾಡುವವನು ಅದಕ್ಕೆ ತಗುಲುವ ವೆಚ್ಚವನ್ನು ಅಂದಾಜುಮಾಡಿ ತನ್ನ ಬೆಲೆಯನ್ನು ನಿರ್ಧರಿಸುತ್ತಾನೆ. ಕೊಳ್ಳುವವರ ಮತ್ತು ಮಾರುವವರ ಅಗತ್ಯಗಳನ್ನು ನೋಡಿಕೊಂಡು ಸಾಮಾನ್ಯವಾಗಿ ಸಾಮಾನಿನ ಬೆಲೆ ನಿರ್ಧರವಾಗುವುದು. ತೆರಿಗೆಗಳ ವಿಷಯ ಹೀಗಲ್ಲ. ಸೈನ್ಯ ಮತ್ತು ಪೋಲಿಸ್ ಇಲಾಖೆಗಳಿಂದ ಆಗುವ ಪ್ರಯೋಜನವು ಬಲಿಷ್ಠರು ಮತ್ತು ಭಾಗ್ಯವಂತರಿಗಿಂತ ಬಲಹೀನರಿಗೂ ಬಡವರಿಗೂ

ಹೆಚ್ಚು. ಆದರೆ ಈ ಶಾಖೆಗೆ ತಗುಲುವ ವೆಚ್ಚವನ್ನು ತೆರಿಗೆಯ ರೂಪದಲ್ಲಿ ಪ್ರಜೆಗಳಿಂದ ಕೂಡಿಸುವಾಗ ಹಣವಂತರಿಂದಲೇ ಬಹುಭಾಗವನ್ನು ಸಂಗ್ರಹಿಸುತ್ತಾರೆ. ಆದುದರಿಂದ ತೆರಿಗೆಯ ಬೆಲೆಯನ್ನು ಅದರಿಂದಾಗುವ ಪ್ರಯೋಜನದಿಂದ ಅಳೆಯಲು ಸಾಧ್ಯವಿಲ್ಲ.

ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಸರಕಾರದ ತೆರಿಗೆ ಹುಟ್ಟು ವಳಿಯ ವಿಷಯವನ್ನು ವರ್ಣಿಸುವ ವರದಿಗಳಲ್ಲಿ ಕಂದಾಯ ತೆರಿಗೆಯ ಜೊತೆಗೆ ಸ್ಟಾಂಪು, ಕೋರ್ಟು ಮತ್ತು ರಿಜಿಸ್ಟ್ರೇಷನ್ ಫೀಗಳ ಆದಾಯವನ್ನು ಸೇರಿಸಿರುವುದು ಕಂಡುಬರುತ್ತದೆ. ಫೀ ರೂಪದ ಹುಟ್ಟುವಳಿಗೂ ತೆರಿಗೆಗೂ ಸ್ವಲ್ಪ ವ್ಯತ್ಯಾಸವುಂಟು. ಸ್ಕೂಲುಗಳಲ್ಲಿ ಓದುವ ಹುಡುಗರು ತಿಂಗಳಿಗೊಂದುಸಲ ಫೀಜನ್ನು ಕೊಡಬೇಕು. ಈ ಫೀಜಿಗೆ ಪಾಠ ಕಲಿಯುವ ಅವಕಾಶವೇ ಪ್ರಯೋಜನ. ಹಾಗೆಯೇ ಕೋರ್ಟು ಕಚೇರಿಗಳ ಪ್ರಯೋಜನವನ್ನು ಹೊಂದುವುದಕ್ಕೆ ಕೋರ್ಟು ಫೀ ಕೊಡಬೇಕು. ಹೀಗೆ ಪ್ರಯೋಜನವನ್ನು ಅಪೇಕ್ಷಿಸುವವರಿಂದ ಮಾತ್ರ ಫೀ ರೂಪದ ಆದಾಯ ವಸೂಲಾ ಗುತ್ತದೆ. ಸಾಧಾರಣವಾಗಿ ಫೀ ಸಂದಮೇಲೆಯೇ ಅದರ ಪ್ರಯೋಜನವನ್ನು ಪಡೆಯುವುದು. ತೆರಿಗೆಯನ್ನಾದರೋ ಪ್ರಯೋಜನವನ್ನು ಅಪೇಕ್ಷಿಸುವವರೂ ಅಪೇ ಕ್ಷಿಸದವರೂ ಕೊಡಬೇಕು. ಕಾಲುವೆಯ ನೀರು ತನಗೆ ಬೇಕಿಲ್ಲವೆಂದು ಒಬ್ಬ ರೈತನು ವಾದಿಸಬಹುದು; ಆದರೆ ಸರಕಾರವು ಅವನಿಂದಲೂ ತೆರಿಗೆ ವಸೂಲುಮಾಡುತ್ತದೆ. ಇದರಿಂದ ಫೀಜಿಗೂ ತೆರಿಗೆಗೂ ಇರುವ ವ್ಯತ್ಯಾಸ ಗೊತ್ತಾಗುತ್ತದೆ.

ವ್ಯವಹಾರ ನಡಸುವವರಲ್ಲಿ ಒಂದು ರೀತಿಯ ಕಟ್ಟಳೆಯನ್ನು ಜಾರಿಗೆ ತರುವ ಉದ್ದೇಶದಿಂದ ಈ ಫೀ ಹುಟ್ಟುವಳಿ ಬಾಬುಗಳನ್ನು ಸರಕಾರದವರು ಏರ್ಪಾಡು ಮಾಡುತ್ತಾರೆ. ಸರಕಾರದಿಂದ ಉಂಟಾಗುವ ಕೆಲವು ಸೌಕರ್ಯಗಳು ಪ್ರಜೆಗಳೆಲ್ಲ ರಿಗೂ ದೊರೆಯುವುವು. ಇವುಗಳಿಗಾಗಿ ತೆರಿಗೆಗಳನ್ನು ಪ್ರಜೆಗಳು ಸಲ್ಲಿಸಬೇಕು. ತೆರಿ ಗೆಯ ಸ್ವರೂಪವನ್ನು ಮೇಲೆ ಹೇಳಿರುವ ಅಂಶಗಳಿಂದ ಸ್ವಲ್ಪಮಟ್ಟಿಗೆ ತಿಳಿಯಬಹುದು.

## ೩ ವಿಂಗಡಣೆ

ತೆರಿಗೆ ಎಂದೊಡನೆಯೇ ತೆರುವವರು ತಮ್ಮ ಆದಾಯದಲ್ಲಿ ಸ್ವಲ್ಪ ಭಾಗವನ್ನು ಪ್ರಜೆಗಳ ಹಿತಕ್ಕಾಗಿ ತೆಗೆದಿಡಬೇಕೆಂಬ ಸೂಚನೆ ತಲೆದೋರುವುದು. ಒಂದು ದೇಶ ದ ಪ್ರಜೆಗಳು ಕೃಷಿ, ಕೈಗಾರಿಕೆ, ವ್ಯಾಪಾರ, ಕಸಬು, ಮುಂತಾದುವುಗಳಿಂದ ಆದಾ ಯವನ್ನು ಪಡೆಯುವರು. ಕೆಲವರ ಆದಾಯದ ಪ್ರಮಾಣವು ಹೆಚ್ಚಿನದಾಗಿರುತ್ತದೆ. ಇನ್ನು ಕೆಲವರದು ಮಧ್ಯಸ್ಥವಾಗಿರುತ್ತದೆ. ಹೆಚ್ಚು ಜನರದು ತೀರ ಕಡಮೆಯಾಗಿರು ತ್ತದೆ. ಈ ರೀತಿ ವೃತ್ತಿಗಳಲ್ಲಿ ಮತ್ತು ಆದಾಯದ ಪರಿಮಾಣದಲ್ಲಿ ಇರುವ ವ್ಯತ್ಯಾಸ ಗಳಿಗೆ ತಕ್ಕಂತೆ ಬೇರೆ ಬೇರೆ ತೆರಿಗೆಗಳಿರಬೇಕು. ಎಲ್ಲರಿಗೂ ಒಂದೇ ವಿಧದ ತೆರಿಗೆ ಯನ್ನು ಹಾಕುವುದರಲ್ಲಿ ಅರ್ಥವಿಲ್ಲ. ಹತ್ತು ರೂಪಾಯಿ ಸಂಬಳ ಬರುವವನಿಗೂ ಧನಿಕನಿಗೂ ವರಮಾನದ ತೆರಿಗೆಯನ್ನು ಹಾಕಿ ಹಣವನ್ನು ಕೂಡಿಸಬೇಕಾದರೆ ಸರ ಕಾರಕ್ಕೆ ವಸೂಲಿ ತೊಂದರೆ ಬಹಳ ಹೆಚ್ಚಾಗುತ್ತದೆ. ತೆರಿಗೆಯ ಹೊರೆ ಕಣ್ಣಿಗೆ

ಕಂಡು ಜನರಲ್ಲಿ ಅತೃಪ್ತಿಯುಂಟಾಗುತ್ತದೆ. ಆದುದರಿಂದ ತೆರಿಗೆಯಲ್ಲಿ ಬೇರೆ ಬೇರೆ ರೀತಿಗಳು ಮತ್ತು ಪ್ರಮಾಣಗಳು ಇರಬೇಕು. ಇವುಗಳನ್ನೆಲ್ಲ ಆಲೋಚಿಸಿ ಅರ್ಥ ಶಾಸ್ತ್ರಜ್ಞರು ತೆರಿಗೆಯ ವಿಂಗಡಣೆ ಮಾಡಿರುತ್ತಾರೆ.

ವಿಂಗಡಣೆಯ ಬಗೆಗಳು ಅನೇಕವಾಗಿವೆ. ಒಂದೊಂದು ಬಗೆಯಲ್ಲೂ ಗುಣ ದೋಷಗಳಿದ್ದೇ ಇವೆ. ಜನರು ಬೇರೆ ಬೇರೆ ತೆರುವ ಕಂದಾಯವನ್ನು ಕಂಪನಿ ಕಾರ್ಖಾನೆಗಳ ಮೇಲೆ ವಿಧಿಸುವ ತೆರಿಗೆಯಿಂದ ಪ್ರತ್ಯೇಕಿಸುವುದು ಒಂದು ಬಗೆಯ ವಿಂಗಡಣೆ. ಪ್ರಜೆಯಾದ ಮಾತ್ರದಿಂದಲೇ, ಪ್ರತಿಯೊಬ್ಬರೂ ಕಡ್ಡಾಯವಾಗಿ ತಲೆಗಂದಾಯದಂತೆ ತೆರಿಗೆ ಕೊಡಬೇಕೆಂಬ ಪದ್ಧತಿ ಈಚೆಗೆ ಇಲ್ಲದಿರುವುದರಿಂದ ಈ ವಿಂಗಡಣೆಯಿಂದ ಉಪಯೋಗವಿಲ್ಲ. ಮತ್ತೊಂದು ವಿಂಗಡಣೆಯು ಹೀಗಿರುತ್ತದೆ.—

### ೧. ಆದಾಯದ ತೆರಿಗೆ :—

ವರಮಾನದ ತೆರಿಗೆ, ಮೇಲ್ತೆರಿಗೆ ಮೊದಲಾದ ತೆರಿಗೆಗಳು ಈ ಗುಂಪಿಗೆ ಸೇರಿರುತ್ತವೆ.

### ೨. ಆಸ್ತಿಪಾಸ್ತಿಗಳ ತೆರಿಗೆ :—

ಭೂಕಂದಾಯ, ಮನೆಕಂದಾಯ, ಹಕ್ಕುದಾರಿಯ ಆಸ್ತಿಗಳನ್ನು ಪಡೆದವರು ಕೊಡಬೇಕಾದ ಸುಂಕ ಅಥವಾ ತೆರಿಗೆಗಳು ಈ ಗುಂಪಿಗೆ ಸೇರಿವೆ.

### ೩. ವ್ಯವಹಾರದ ತೆರಿಗೆ :—

ವ್ಯಾಪಾರದ ತೆರಿಗೆ, ಸುಂಕಗಳು, ಅಧಿಕಲಾಭದ ತೆರಿಗೆ—ಇವು ಈ ಗುಂಪಿಗೆ ಸೇರತಕ್ಕವು.

ಬೇರೆ ಬೇರೆ ಅರ್ಥಶಾಸ್ತ್ರಜ್ಞರು ಬೇರೆ ಬೇರೆ ವಿಂಗಡಣೆಯ ಕ್ರಮಗಳನ್ನು ಸೂಚಿಸಿರುತ್ತಾರೆ. ಮೇಲೆ ಹೇಳಿದ ರೀತಿಯಲ್ಲಿ ವಿಂಗಡಣೆ ಮಾಡುವುದರಿಂದ ಯಾ ತತ್ವವನ್ನು ಗಮನದಲ್ಲಿಟ್ಟು ಇದನ್ನು ಮಾಡಿದೆ ಎಂಬುದು ತಿಳಿಯುವುದಿಲ್ಲ. ಇದಲ್ಲದೆ ಈಗಿನ ಸರಕಾರಗಳು ವಿಧಿಸುವ ಹಲವು ತೆರಿಗೆಗಳನ್ನು ಈ ರೀತಿ ವಿಂಗಡಿಸಲು ಸಾಧ್ಯವಾಗುವುದಿಲ್ಲ.

ತೆರಿಗೆಯ ಭಾರ ಯಾರ ಮೇಲೆ ಬೀಳುತ್ತದೆ ಎಂಬುದನ್ನು ದೃಷ್ಟಿಯಲ್ಲಿಟ್ಟು ತೆರಿಗೆಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು :—

(೧) ಪರೋಕ್ಷವಾದ ತೆರಿಗೆ.
(೨) ಪ್ರತ್ಯಕ್ಷವಾದ ತೆರಿಗೆ.

ಈ ವಿಂಗಡಣೆ ಹೆಚ್ಚು ರೂಢಿಯಲ್ಲಿದೆ. ಸಾಮಾನ್ಯವಾಗಿ ಎಲ್ಲರೂ ಇದನ್ನು ಒಪ್ಪುತ್ತಾರೆ.

೧. ಪರೋಕ್ಷವಾದ ತೆರಿಗೆ:

ಕೆಲವು ವರ್ಷಗಳ ಹಿಂದೆ ಮೂರುಕಾಸಿಗೆ ಕೊಳ್ಳುತ್ತಿದ್ದ ಬೆಂಕಿ ಕಡ್ಡಿಯ ಪೊಟ್ಟಣಕ್ಕೆ ಈಗ ಒಂದು ದುಡ್ಡು, ಐದು ಕಾಸು, ಆರು ಕಾಸಾಗಿದೆ. ಹೀಗೆ ಹೆಚ್ಚಾದ ಒಂದು, ಎರಡು, ಮೂರು ಕಾಸುಗಳನ್ನು ಬೆಂಕಿ ಕಡ್ಡಿ ಕೊಳ್ಳುವವನೇ ಕೊಡಬೇಕಾಗಿದೆ. ಆದರೆ ಅದನ್ನು ತೆರಿಗೆ ಎಂದು ಅವನು ಕೊಡುವುದಿಲ್ಲ: ಪೊಟ್ಟಣದ ಬೆಲೆ ಎಂದು ಕೊಡುತ್ತಾನೆ. ಸರಕಾರದವರು ೧೯೩೪ರಲ್ಲಿ ಈ ತೆರಿಗೆ ಹಾಕಿದ್ದರಿಂದ ಬೆಂಕಿಕಡ್ಡಿಯ ಬೆಲೆ ಹೀಗೆ ಹೆಚ್ಚಾಯಿತು. ತಯಾರಿಸುವವನು ಈ ತೆರಿಗೆಯನ್ನು ಮೊದಲು ಕೊಟ್ಟು, ಬೆಂಕಿಕಡ್ಡಿ ಕೊಳ್ಳುವವರಿಂದ ಸ್ವಲ್ಪಸ್ವಲ್ಪವಾಗಿ ವಾಪಸು ಪಡೆಯುತ್ತಾನೆ. ಕೊಳ್ಳುವವರಿಂದಲೇ ಒಂದೊಂದು ಕಾಸಿನಂತೆ ಈ ತೆರಿಗೆಯನ್ನು ನೇರವಾಗಿ ವಸೂಲುಮಾಡುವುದು ಸರಕಾರಕ್ಕೆ ಕಷ್ಟ. ಹೀಗೆ ಮಾಡುವುದರಿಂದ ವಸೂಲಿಗೆ ಹೆಚ್ಚಿನ ಖರ್ಚು ಆಗುವುದು.

ತೆರಿಗೆಗಳನ್ನು ಹೀಗೆ ಪರೋಕ್ಷವಾಗಿ ವಸೂಲುಮಾಡುವಾಗ ಅವುಗಳನ್ನು ಕೊಡುವವರು ತಾವು ಕೊಟ್ಟ ಹಣವನ್ನು ಇತರರಿಂದ ಸ್ವಲ್ಪಸ್ವಲ್ಪವಾಗಿ ವಸೂಲು ಮಾಡಿ ತೆರಿಗೆ ಭಾರವನ್ನು ಹಂಚಿ ಬಹಳಮಟ್ಟಿಗೆ ಹೊರೆಯನ್ನು ತಗ್ಗಿಸಲು ಕಾರಣರಾಗುತ್ತಾರೆ. ಸುಂಕದ ತೆರಿಗೆಗಳು ಈ ಗುಂಪಿಗೆ ಸೇರಿರುತ್ತವೆ. ಸಕ್ಕರೆ, ಪೆಟ್ರೋಲ್, ಉಪ್ಪು, ಹೊಗೆಸೊಪ್ಪು—ಇವುಗಳಮೇಲೆ ಸುಂಕ ಹಾಕಿದರೆ ಈ ಪದಾರ್ಥಗಳನ್ನು ತಯಾರುಮಾಡುವವರಿಂದಾಗಲಿ ಮಾರುವವರಿಂದಾಗಲಿ ಮೊದಲು ಸುಂಕವನ್ನು ಸರಕಾರವು ವಸೂಲು ಮಾಡುತ್ತದೆ. ಅನಂತರ ಅವುಗಳನ್ನು ಉಪಯೋಗಿಸುವವರು ಸ್ವಲ್ಪಸ್ವಲ್ಪವಾಗಿ ಈ ಹಣವನ್ನು ತೆರುವರು. ಬಡವರು ಸರಕಾರಕ್ಕೆ ತೆರಿಗೆ ಸಲ್ಲಿಸಲು ಈ ವಿಧದ ತೆರಿಗೆಗಳಿಂದ ಅನುಕೂಲ ಹೆಚ್ಚು. ಹೀಗೆ ಭಾರವನ್ನು ಒಬ್ಬರಿಂದೊಬ್ಬರಿಗೆ ವರ್ಗಮಾಡಲು ಸೌಕರ್ಯವಿರುವ ತೆರಿಗೆಗಳನ್ನು ಪರೋಕ್ಷ ತೆರಿಗೆಗಳೆಂದು ಕರೆಯಬಹುದು.

೨. ಪ್ರತ್ಯಕ್ಷವಾದ ತೆರಿಗೆ:

ತೆರಿಗೆ ಕೊಡುವವನು ಮೇಲೆ ಹೇಳಿದಂತೆ ಇತರರಿಗೆ ತನ್ನ ಹೊರೆಯನ್ನು ವರ್ಗಮಾಡಲು ಸಾಧ್ಯವಾಗದಿದ್ದರೆ ಅದು ಪ್ರತ್ಯಕ್ಷವಾದ ತೆರಿಗೆ ಎನಿಸುವುದು. ಆದಾಯ ತೆರಿಗೆ, ಆಸ್ತಿಪಾಸ್ತಿಗಳ ತೆರಿಗೆ, ಜಮೀನು ಕಂದಾಯ ಮೊದಲಾದ ತೆರಿಗೆಗಳು ಬಹುಮಟ್ಟಿಗೆ ಈ ಗುಂಪಿಗೆ ಸೇರುತ್ತವೆ.

ಕೆಲವು ವೇಳೆ ಪ್ರತ್ಯಕ್ಷವಾದ ತೆರಿಗೆಗಳನ್ನು ಇತರರಿಗೆ ವರ್ಗಮಾಡಲು ಸಾಧ್ಯವಾಗುವುದು. ಒಂದು ಊರಿನಲ್ಲಿ ಬಹಳ ಜಾಣನಾದ ವೈದ್ಯನಿದ್ದು ಅವನ ಆದಾಯದ ಮೇಲೆ ಹೆಚ್ಚಿನ ತೆರಿಗೆಯನ್ನು ವಿಧಿಸಿದರೆ ತಾನು ಕೊಡಬೇಕಾದ ಹಣವನ್ನು ತನ್ನ ರೋಗಿಗಳಿಂದ ಪಡೆಯಲು ಅವನು ಪ್ರಯತ್ನ ಪಡುವನು. ಇತರ ವೈದ್ಯರ ಪೈಪೋಟಿ ಇಲ್ಲದೆಹೋದರೆ ಹೀಗೆ ಮಾಡುವುದು ಸುಲಭ. ಇದರಿಂದ

ಪ್ರತ್ಯಕ್ಷವಾದ ತೆರಿಗೆಗಳು ಒಂದೊಂದು ವೇಳೆ ಪರೋಕ್ಷವಾದ ತೆರಿಗೆಗಳಾಗಿ ಪರಿಣಮಿಸಬಹುದು. ಹೀಗೆಯೇ ಪರೋಕ್ಷವಾದ ತೆರಿಗೆಗಳು ಪ್ರತ್ಯಕ್ಷವಾದ ತೆರಿಗೆಗಳಾಗಬಹುದು. ಆದರೂ ತೆರಿಗೆಗಳನ್ನು ಹಾಕಿದ ಕಾಲದಲ್ಲಿ ಸರಕಾರದ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ತೆರಿಗೆಗಳನ್ನು ಪರೋಕ್ಷ, ಪ್ರತ್ಯಕ್ಷ, ಎಂದು ಸಾಮಾನ್ಯವಾಗಿ ವಿಂಗಡಿಸಲು ಸಾಧ್ಯ.

## ೪ ನಿಯಮಗಳು

ತೆರಿಗೆಗಳನ್ನು ವಿಧಿಸಲು ಹಿಂದಿನಿಂದಲೂ ಕೆಲವು ನಿಯಮಗಳನ್ನು ಅನುಸರಿಸಿದಂತೆ ಕಂಡುಬಂದಿದೆ. ಅರ್ಥಶಾಸ್ತ್ರಜ್ಞರು ಮುಖ್ಯವಾದ ಕೆಲವು ನಿಯಮಗಳನ್ನು ತಮ್ಮ ಗ್ರಂಥಗಳಲ್ಲಿ ಹೇಳಿರುವರಲ್ಲದೆ ತೆರಿಗೆಯ ಪದ್ಧತಿಯನ್ನು ಸಮಷ್ಟಿದೃಷ್ಟಿಯಿಂದ ನೋಡಬೇಕೆಂಬ ವಿಷಯವನ್ನು ಸ್ಪಷ್ಟವಾಗಿ ತಿಳಿಸಿರುತ್ತಾರೆ. ನ್ಯಾಯಾನ್ಯಾಯಗಳನ್ನಾಗಲಿ ಗುಣಾವಗುಣಗಳನ್ನಾಗಲಿ ತಿಳಿಯಲು ಕೇವಲ ತೆರಿಗೆ ಕೊಡುವವರ ದೃಷ್ಟಿಯಿಂದಲೇ ನೋಡಿದರೆ ಸಾಲದು. ಸರಕಾರದ ದೃಷ್ಟಿಯಿಂದಲೂ ಸಮಾಜದ ದೃಷ್ಟಿಯಿಂದಲೂ ತೆರಿಗೆಗಳನ್ನು ವಿಮರ್ಶಿಸಬೇಕೆಂಬ ವಿಷಯವನ್ನು ಮರೆಯಬಾರದು. ತೆರಿಗೆ ಕೊಡದೆಯೇ ಸರಕಾರದಿಂದ ದೊರೆಯಬಹುದಾದ ಎಲ್ಲ ಸೌಕರ್ಯಗಳು ದೊರೆತರಂತೂ ಪ್ರಜೆಗಳಿಗೆ ಹೆಚ್ಚಿನ ಸಂತೋಷವೇನೋ ಉಂಟಾಗುತ್ತದೆ. ಆದರೆ ಇದು ಸಾಧ್ಯವೇ ಎಂಬುದನ್ನು ಮಾತ್ರ ಪರ್ಯಾಲೋಚಿಸಬೇಕು. ಹೀಗಿರುವುದರಿಂದ ತೆರಿಗೆಗಳನ್ನು ವಿಧಿಸುವ ವೇಳೆಯಲ್ಲಾಗಲಿ, ಇರುವ ತೆರಿಗೆಗಳನ್ನು ಪುನಃ ವಿಮರ್ಶಿಸುವ ಕಾಲದಲ್ಲಾಗಲಿ ಮೇಲೆ ಹೇಳಿರುವ ಮೂರು ದೃಷ್ಟಿಗಳಿಂದಲೂ ಪ್ರತ್ಯೇಕವಾಗಿ ನೋಡಬೇಕಲ್ಲದೆ ಆದಷ್ಟುಮಟ್ಟಿಗೆ ದೃಷ್ಟಿಸಮನ್ವಯಮಾಡಿ ಪರ್ಯಾಲೋಚಿಸುವ ಪ್ರಯತ್ನವನ್ನೂ ಮಾಡಬೇಕು. ಸರಕಾರದ ಉದ್ದೇಶವನ್ನು ಪ್ರಜೆಗಳೂ ಪ್ರಜೆಗಳ ಹಿತವನ್ನು ಸರಕಾರದವರೂ ತಿಳಿದು ಸಹಕರಿಸಬೇಕು.

ತೆರಿಗೆಗಳ ಗುಣಾವಗುಣಗಳನ್ನು ಸ್ಥೂಲವಾಗಿ ತಿಳಿಯಲು ನಾಲ್ಕು ಸುಪ್ರಸಿದ್ಧವಾದ ನಿಯಮಗಳುಂಟು. ಇವುಗಳನ್ನು ತೆರಿಗೆಯ ಶಾಸ್ತ್ರದ ಸೂತ್ರಗಳೆಂದು ಕರೆಯಬಹುದು.

೧. ತೆರಿಗೆಗಳು ಸಮಾನವಾಗಿರಬೇಕು.
೨. ತೆರಿಗೆಗಳಲ್ಲಿ ಅನುಕೂಲತೆ ಇರಬೇಕು.
೩. ತೆರಿಗೆಗಳು ನಿಶ್ಚಿತವಾಗಿರಬೇಕು.
೪. ತೆರಿಗೆಗಳು ಆದಾಯಕರವಾಗಿರಬೇಕು.

ಈ ನಿಯಮಗಳನ್ನು ಸ್ಥೂಲವಾಗಿ ವಿವರಿಸುವುದು ಮೇಲು.

### (೧) ಸಮಾನತೆ.

ಪ್ರಜೆಗಳೆಲ್ಲರಿಂದ ಸಮಾನವಾಗಿ- ತೆರಿಗೆಯನ್ನು ವಸೂಲು ಮಾಡುವುದೆಂದರೇನು? ಸರಕಾರಕ್ಕೆ ಬೇಕಾದ ಒಟ್ಟು ಹಣವನ್ನು ಧನಿಕರಿಗೂ ಬಡವರಿಗೂ

ಒಂದೇ ಸಮವಾಗಿ ಹಂಚಿ ತೆರಿಗೆಗಳನ್ನು ವಿಧಿಸುವುದರಿಂದ ಸಮಾನತೆಯ ನಿಯಮವನ್ನು ಅನುಸರಿಸಿದಂತಾಗುವುದಿಲ್ಲ. ಒಂದು ಲಕ್ಷ ಪ್ರಜೆಗಳಿರುವ ದೇಶದಲ್ಲಿ ಐದು ಲಕ್ಷ ರೂಪಾಯಿಗಳನ್ನು ತೆರಿಗೆಯ ಮೂಲಕ ಕೂಡಿಸಬೇಕೆಂದು ಸರಕಾರವು ನಿಶ್ಚಯಿಸಬಹುದು. ಪ್ರತಿಯೊಬ್ಬ ಪ್ರಜೆಯಿಂದಲೂ ಸರಾಸರಿ ಐದು ರೂಪಾಯಿನಂತೆ ತೆರಿಗೆ ವಸೂಲು ಮಾಡುವುದರಿಂದ ಸಮಾನವಾದ ತೆರಿಗೆ ಹಾಕಿದಂತಾಗುವುದಿಲ್ಲ. ಹೀಗೆ ಹಾಕಿದ ತೆರಿಗೆಯು ತೂಕ ಬಡವರಿಗೆ ಭಾರವಾಗಿರುವುದು; ಧನಿಕರಿಗೆ ಹಗುರವಾಗಿರುವುದು. ಹಾಗಾದರೆ ಸಮನಾದ ತೆರಿಗೆ ಎಂದರೇನು?

ತೆರಿಗೆಯನ್ನು ಕೊಡುವುದರಿಂದ ಪ್ರಜೆಗಳಿಗೆ ಒಂದು ವಿಧವಾದ ನಷ್ಟದ ಭಾವನೆ ತಲೆದೋರುತ್ತದೆ. ತಾವು ಸಂಪಾದಿಸುವ ಅಥವಾ ಅನುಭವಿಸುವ ಆದಾಯದ ಸ್ವಲ್ಪ ಭಾಗ ಕಡಮೆಯಾಗುವುದರಿಂದ ತೊಂದರೆಯೂ ಕ್ಲೇಶವೂ ಆಗುವುದು ಸಹಜ. ಹೀಗಾಗುವ ತೊಂದರೆ ಆ ಜನರ ಸಂಪತ್ತು, ಸಂಪಾದನೆ, ವೆಚ್ಚ ಮೊದಲಾದುವುಗಳಿಗೆ ಅನುಗುಣವಾಗಿರುತ್ತದೆ. ವರ್ಷಕ್ಕೆ ೧೦೦ ರೂಪಾಯಿ ಸಂಪಾದಿಸುವವನು ೧೦ ರೂಪಾಯಿನಷ್ಟು ತೆರಿಗೆ ಸಲ್ಲಿಸಿದರೆ ಅವನಿಗುಂಟಾಗುವ ಕ್ಲೇಶ ನಷ್ಟಗಳೂ ವರ್ಷಕ್ಕೆ ೧,೦೦೦ ರೂಪಾಯಿ ಸಂಪಾದಿಸುವವನು ಅಷ್ಟೇ ತೆರಿಗೆಯನ್ನು ಕೊಟ್ಟರೆ ಅವನಿಗೆ ಉಂಟಾಗುವ ಕ್ಲೇಶ ನಷ್ಟಗಳೂ ಎಂದಿಗೂ ಸಮಾನವಾಗಿರುವುದಿಲ್ಲ. ಆದಾಯ ಹೆಚ್ಚಿದಹಾಗೆಲ್ಲಾ ತೆರಿಗೆ ಕೊಡುವ ಶಕ್ತಿ ಹೆಚ್ಚುವುದು ಸ್ವಾಭಾವಿಕ. ಇದೇ ರೀತಿ ವೆಚ್ಚವು ಕಡಮೆಯಾಗಿ ವರ್ಷಕ್ಕೆ ೧,೦೦೦ ರೂಪಾಯಿ ವರಮಾನವಿರುವ ಏಕಾಂಗಿಗೆ ಹಾಕುವ ತೆರಿಗೆಯೂ ಅಷ್ಟೇ ವರಮಾನವಿದ್ದು ಹೆಚ್ಚು ವೆಚ್ಚ ಮಾಡಬೇಕಾದ ದೊಡ್ಡ ಸಂಸಾರಿಗೆ ಹಾಕುವ ತೆರಿಗೆಯೂ ಒಂದೇ ಆದರೆ ಅದು ಸಮಾನವಾದ ತೆರಿಗೆ ಎಂದು ಹೇಳಲಾಗುವುದಿಲ್ಲ. ತಾನು ಕಷ್ಟಪಟ್ಟು ಸಂಪಾದಿಸುವ ಆದಾಯದಲ್ಲಿ ಸ್ವಲ್ಪ ಭಾಗವನ್ನು ತೆರಿಗೆಯ ರೂಪದಲ್ಲಿ ಕೊಡುವುದರಿಂದ ಉಂಟಾಗುವ ಕ್ಲೇಶವೂ ಇತರರು ಸಂಪಾದಿಸಿದ ಆಸ್ತಿಯಿಂದ ತನಗೆ ಬರುವ ಆದಾಯದಲ್ಲಿ ಕೊಡುವ ತೆರಿಗೆಯಿಂದ ಉಂಟಾಗುವ ಕ್ಲೇಶವೂ ಸಮಾನವಾಗಿರುವುದಿಲ್ಲ. ಆದುದರಿಂದ ಶ್ರಮವೂ ನಷ್ಟಭಾವನೆಯೂ ಪ್ರಜಾಸಮುದಾಯದಲ್ಲಿ ಸಮಾನವಾಗಿವೆ ಎಂದು ತೋರುವ ರೀತಿಯಲ್ಲಿ ತೆರಿಗೆಗಳನ್ನು ಗೊತ್ತುಮಾಡಿದರೆ ಸಮಾನತೆಯ ನಿಯಮವನ್ನು ಅನುಸರಿಸಿದಂತಾಗುತ್ತದೆ. ವರಮಾನ ಹೆಚ್ಚಿದ ಹಾಗೆಲ್ಲಾ ಹೆಚ್ಚಿನ ದರದ ವರಮಾನ ತೆರಿಗೆಗಳನ್ನು ವಿಧಿಸುವ ಸರಕಾರ ಸಮಾನತೆಯ ನಿಯಮವನ್ನು ಸ್ವಲ್ಪಮಟ್ಟಿಗೆ ಸಾಧಿಸುತ್ತದೆ.

ಒಂದು ವಿಷಯವನ್ನು ನಾವು ಗಮನದಲ್ಲಿಡಬೇಕು. ತೆರಿಗೆ ತೆರುವುದರಿಂದ ಉಂಟಾಗುವ ಭಾವನೆಯನ್ನು ಹಣಕಾಸಿನ ಅಳತೆಕಡ್ಡಿಯಿಂದಲೇ ಖಚಿತವಾಗಿ ಅಳೆಯಲು ಸಾಧ್ಯವಿಲ್ಲ. ತೆರಿಗೆ ಕೊಡುವ ಶಕ್ತಿಯನ್ನು ಸ್ಥೂಲವಾಗಿ ತಿಳಿಯಲು ಮಾತ್ರ ಸಾಧ್ಯವಾಗುವುದು. ಪ್ರಜೆಗಳಲ್ಲಿರುವ ಈ ಶಕ್ತಿಗೆ ಅನುಗುಣವಾಗಿ ತೆರಿಗೆಯನ್ನು ವಿಧಿಸಿ ತೆರಿಗೆಯ ಹೊರೆ ಸಮಾನವಾಗಿರುವಂತೆ ಮಾಡಬಹುದು. ತೆರಿಗೆಕೊಡುವ ಶಕ್ತಿಯನ್ನು ಕಂಡುಹಿಡಿಯಲು ಹಲವು ಉಪಾಯಗಳನ್ನು ಸೂಚಿಸು

ವುದುಂಟು. ಮೇಲೆ ತಿಳಿಸಿರುವಂತೆ ತೆರಿಗೆ ತೆರಬೇಕಾದವರ ಆದಾಯ ಅದರ ಶಕ್ತಿಯನ್ನು ತಿಳಿಸುವುದೆಂದು ನಂಬಿಕೆ. ಆದಾಯದಲ್ಲಿ ಕೆಲವು ಭಾಗವನ್ನು ವೆಚ್ಚ ಮಾಡಿದನಂತರ ನಿಲ್ಲುವ ನಿವ್ವಳ ಆದಾಯವನ್ನು ಗಮನದಲ್ಲಿಟ್ಟು, ಆಸ್ತಿಪಾಸ್ತಿ ಗಳನ್ನೂ ಜೀವನೋಪಾಯದ ರೀತಿಗಳನ್ನೂ ಗಣನೆಗೆ ತಂದುಕೊಂಡು ತೆರಿಗೆಗಳನ್ನು ವಿಧಿಸುವುದರಿಂದ ತೆರಿಗೆ ಸಿಸ್ತಿನಲ್ಲಿ ಒಂದು ವಿಧದ ಸಮಾನತೆಯನ್ನು ಕಲ್ಪಿಸುವುದು ಸಾಧ್ಯ.

(೨) ಅನುಕೂಲತೆ.

ತೆರಿಗೆ ವಸೂಲುಮಾಡುವ ಕಾಲ ಕ್ರಮ ವಿಧಾನಗಳು ಸರಕಾರಕ್ಕೆ ಅನು ಕೂಲವಾಗಿರಬೇಕಲ್ಲದೆ, ತೆರಿಗೆದಾರನಿಗೂ ಅನುಕೂಲವಾಗಿರಬೇಕು. ತೆರಿಗೆ ಸಲ್ಲಿಸುವವನಿಗೆ ತೆರಿಗೆ ಇಲಾಖೆಯಿಂದ ಹೆಚ್ಚುಶ್ರಮ ಉಂಟಾಗದಂತೆ ಸರಕಾರ ನೋಡಿಕೊಳ್ಳಬೇಕು. ಕೊಡುವುದಕ್ಕೆ ಕೈಯಲ್ಲಿ ಕಾಸಿರುವಾಗ ಸಂಪಾದಿಸಿದ ದುಡ್ಡು ಕೈಗೆ ಬರುವಾಗ, ತೆರಿಗೆಗಳನ್ನು ವಸೂಲುಮಾಡುವಂತಿರಬೇಕು. ಸುಗ್ಗಿ ಕಾಲದಲ್ಲಿ ಭೂಕಂದಾಯವನ್ನು ಕಿಸ್ತುಗಳಲ್ಲಿ ವಸೂಲುಮಾಡುವುದರಿಂದ ಈ ಅನು ಕೂಲ ದೊರೆಯುವುದು. ಸಂಬಳ ಮತ್ತು ಕಂಪನಿ ಡಿವಿಡೆಂಡುಗಳು ಬಂದಾಗಲೇ ಆದಾಯ ತೆರಿಗೆಯನ್ನು ಕಟಾಯಿಸಿ ನಿಂತ ಹಣವನ್ನು ಕೈಗೆ ಕೊಡುವುದೂ ಇದ ಕ್ಕಾಗಿಯೇ. ವಿದೇಶೀಪದಾರ್ಥಗಳು ರೇವಿಗೆ ಬಂದೊಡನೆಯೇ ಮಂಡಿವ್ಯಾಪಾರ ಮಾಡುವವರಿಂದ ಒಂದೇ ಗಂಟಿನಲ್ಲಿ ಸುಂಕವನ್ನು ವಸೂಲುಮಾಡುವುದೂ ಇದೇ ಉದ್ದೇಶದಿಂದಲೇ. ತೆರಿಗೆ ಸಲ್ಲಿಸುವ ಕಾಲ ಸ್ಥಳ ವಿಧಾನಗಳು ಸರಕಾರ ಪ್ರಜೆ ಗಳಿಬ್ಬರಿಗೂ ಅನುಕೂಲವಾಗಿರಬೇಕು.

(೩) ನಿಶ್ಚಿತತೆ.

ಕೊಡಬೇಕಾದ ತೆರಿಗೆ ಇಷ್ಟೇ ಎಂದು ಪ್ರಜೆ ತಿಳಿಯಬೇಕು; ಸರಕಾರವು ತಿಳಿಸಬೇಕು. ಇಲ್ಲದಿದ್ದರೆ ತೆರಿಗೆ ವಸೂಲುಮಾಡುವ ಅಧಿಕಾರಿಗಳು ಮನಸ್ವಿ ವಸೂಲು ಮಾಡಲು ಅವಕಾಶವಾಗುತ್ತದೆ. ಯಾವರೀತಿ, ಯಾರಿಗೆ, ಯಾವ ಕಾಲ ದಲ್ಲಿ, ಎಷ್ಟು ತೆರಿಗೆ ಸಲ್ಲಿಸಬೇಕೆಂಬುದು ಸಾಧಾರಣವಾಗಿ ಪ್ರತಿಯೊಬ್ಬ ಪ್ರಜೆಗೂ ಸುಲಭವಾಗಿ ತಿಳಿಯುವಂತೆ ಮಾಡಬೇಕು. ತಾನು ಕೊಡಬೇಕಾದ ತೆರಿಗೆ ಎಷ್ಟೆಂದು ತಿಳಿಯುವುದೇ ದೊಡ್ಡ ಪ್ರಯಾಸವಾಗಬಾರದು. ಸರಕಾರಕ್ಕೂ ಬೇರೆ ಬೇರೆ ಬಾಬುಗಳಿಂದ ಬರುವ ಆದಾಯವಿಷ್ಟೆಂದು ಖಚಿತವಾಗಿ ಗೊತ್ತಾಗುವಂತಿರಬೇಕು ಹೀಗಿಲ್ಲದಿದ್ದರೆ ಸರಕಾರದ ಆಯವ್ಯಯ ಲೆಕ್ಕದಲ್ಲಿ ತೊಂದರೆಗಳುಂಟಾಗುವುವು.

(೪) ಆದಾಯಕರತ್ವ.

ಸರಕಾರ ತನಗೆ ಹಣ ಬರಬೇಕೆಂದು ತೆರಿಗೆಗಳನ್ನು ಹಾಕುವುದು. ಆದುದ ರಿಂದ ತೆರಿಗೆಗಳು ಆದಾಯಕರವಾಗಿರಬೇಕೆಂದು ಹೇಳುವುದು ಸಹಜವಾದುದ ಈ ನಿಯಮವನ್ನು ಮೂರು ಭಾಗವಾಗಿ ವಿಂಗಡಿಸಿ ವಿವರಿಸುವುದು ಮೇಲು.

(i) ವಸೂಲಿಯಲ್ಲಿ ಮಿತವ್ಯಯ.

(ii) ಜನರ ಸ್ಥಿತಿಗತಿಗಳೊಡನೆ ಹೊಂದಿಕೆ.

(iii) ಅಧಿಕವಾದ ಆದಾಯ ಬರುವಂತಿರುವುದು.

(i) ತೆರಿಗೆಯನ್ನು ವಸೂಲುಮಾಡುವ ವೆಚ್ಚ, ಎಂದರೆ ವಸೂಲಿಯ ಸಿಬ್ಬಂದಿ ಮೇಲ್ವಿಚಾರಣೆಗಳಿಗೆ ಆಗುವ ವೆಚ್ಚ, ಆದಷ್ಟುಮಟ್ಟಿಗೆ ಕಡಮೆಯಾಗಿರಬೇಕು. ವೆಚ್ಚ ಕಡಮೆಯಾಗಬೇಕೆಂದು ವಸೂಲು ಮಾಡುವ ಸಿಬ್ಬಂದಿಯನ್ನು ತಗ್ಗಿಸಿ ಪ್ರಜೆಗಳಿಗೆ ತೊಂದರೆಯಾಗುವಂತೆ ಮಾಡಬಾರದು. ವಸೂಲಿಕ್ರಮದಲ್ಲಿ ಕಸೂರಿಗಳಿಗೆ ಅವಕಾಶ ಕೊಡಬಾರದು. ತೆರಿಗೆಹಾಕಿ ಬಂದ ಹಣದಲ್ಲಿ ಅರ್ಧಭಾಗವನ್ನು ವಸೂಲಿಗೇ ಖರ್ಚುಮಾಡಿದರೆ, ಆ ತೆರಿಗೆ ಇದ್ದರೇನು, ಹೋದರೇನು?

(ii) ತೆರಿಗೆಯು ವರಮಾನ ಜನರ ಆದಾಯ ಸಂಪತ್ತುಗಳಿಗೆ ಅನುಸಾರವಾಗಿರಬೇಕು. ಜನರ ವರಮಾನ ಹೆಚ್ಚಿದರೆ, ಸರಕಾರದ ತೆರಿಗೆ ಆದಾಯವೂ ಆಯಾಸವಿಲ್ಲದೆ ಹೆಚ್ಚಬೇಕು; ವರಮಾನ ಕುಗ್ಗಿದರೆ ತೆರಿಗೆ ಆದಾಯವೂ ಕುಗ್ಗುವಂತಿರಬೇಕು. ಜನರ ಆದಾಯ ಹೆಚ್ಚಿದರೂ ತೆರಿಗೆ ವರಮಾನ ಹೆಚ್ಚದಿದ್ದರೆ ಅದರಿಂದ ಸರಕಾರಕ್ಕೆ ನಷ್ಟ; ಆದಾಯ ಕಡಮೆಯಾದರೂ ತೆರಿಗೆ ವರಮಾನ ಇಳಿಯದಿದ್ದರೆ ಅದರಿಂದ ಪ್ರಜೆಗಳಿಗೆ ಕ್ಲೇಶ. ಹೀಗೆ ತೆರಿಗೆ ಜನರ ಆರ್ಥಿಕಸ್ಥಿತಿಯನ್ನು ಪ್ರತಿಬಿಂಬಿಸದಿದ್ದರೆ ಅದು ಒಳ್ಳೆಯ ತೆರಿಗೆ ಎಂದು ಹೇಳಲಾಗುವುದಿಲ್ಲ. ಈ ದೃಷ್ಟಿಯಿಂದ ಭೂಕಂದಾಯದ ಸಿಸ್ತು ಈಗಿರುವ ಕ್ರಮದಲ್ಲಿ ನಿಯಮಬದ್ಧವಾಗಿಲ್ಲವೆನ್ನಬಹುದು. ಬತ್ತದ ಬೆಳೆ ಚೆನ್ನಾಗಿ ಆಗಿ ಧಾರಣೆ ಹೆಚ್ಚಿದಾಗ ಕೊಡುವ ಕಂದಾಯದ ದರವೂ, ಬೆಳೆ ಇಳಿದು ಧಾರಣೆವಾಸಿಗಳು ಕುಗ್ಗಿರುವ ಕಾಲದಲ್ಲಿ ಕೊಡುವ ಕಂದಾಯದ ದರವೂ ಹೆಚ್ಚು ಕಡಮೆ ಈಗ ಒಂದೇ ಆಗಿರುವುದು. ಮೂವತ್ತು ವರ್ಷಗಳಿಗೊಂದುಸಲ ಕಂದಾಯದ ದರದಲ್ಲಿ ಬದಲಾವಣೆಯಾಗುವುದರಿಂದ, ದೇಶದ ಆರ್ಥಿಕ ಸ್ಥಿತಿಯಲ್ಲಿ ಉಂಟಾಗುವ ಬದಲಾವಣೆಗೂ ಭೂಕಂದಾಯದ ಸಿಸ್ತಿನ ಕ್ರಮಕ್ಕೂ ಸಮನ್ವಯ ಮಾಡಲು ಅವಕಾಶ ತೀರ ಕಡಮೆ. ಈ ಕಾರಣದಿಂದ ಭೂಕಂದಾಯದ ಸಿಸ್ತು ಬದಲಾವಣೆಯಾಗಬೇಕೆಂಬ ಕೂಗು ಆಗಾಗ ಕೇಳಿಬರುತ್ತದೆ.

(iii) ತೆರಿಗೆಯಿಂದ ಸರಕಾರಕ್ಕೆ ಅಧಿಕವಾದ ಹಣ ಬರುವಂತಿರಬೇಕು. ಸ್ವಲ್ಪ ಆದಾಯವನ್ನು ತರುವ ಅನೇಕ ತೆರಿಗೆಗಳಿಗಿಂತಲೂ ಹೆಚ್ಚಿನ ಆದಾಯವನ್ನು ಕೊಡುವ ಕೆಲವು ತೆರಿಗೆಗಳಿರುವುದು ಮೇಲು. ತೆರಿಗೆಯ ದರ ಕಡಮೆ ಇದ್ದು ಎಲ್ಲ ಪ್ರಜೆಗಳಿಗೂ ಅನ್ವಯಿಸುವ ಹಾಗಿದ್ದರೆ, ಅದರಿಂದ ಬರುವ ಆದಾಯ ಬಹಳ. ತೆರಿಗೆ ದರ ಹೆಚ್ಚಾಗಿದ್ದು ಶ್ರೀಮಂತರಿಗೆ ಮಾತ್ರ ಅನ್ವಯಿಸುವಂತಿದ್ದರೂ ಸುಲಭವಾಗಿ ಸರಕಾರ ಹೆಚ್ಚಿನ ಆದಾಯವನ್ನು ಪಡೆಯಬಹುದು. ಎಲ್ಲರೂ ಉಪಯೋಗಿಸುವ ಪದಾರ್ಥಗಳ ಮೇಲೆ ಹಾಕುವ ಸುಂಕದ ದರ ಕಡಮೆಯಾಗಿರಬೇಕು; ಧನಿಕರು ಕೊಡುವ ತೆರಿಗೆಗಳ ದರ ಹೆಚ್ಚಾಗಿರಬೇಕು.

ಒಂದು ದೇಶದ ತೆರಿಗೆ ಸಿಸ್ತು ಮೇಲೆ ಹೇಳಿರುವ ನಿಯಮಗಳಿಗೆ ಅನುಗುಣವಾಗಿದೆಯೋ ಇಲ್ಲವೇ ಎಂದು ವಿಮರ್ಶಿಸುವ ಸಂದರ್ಭದಲ್ಲಿ ಮತ್ತೊಂದು ವಿಷಯವನ್ನು ಮರೆಯಕೂಡದು. ಆ ದೇಶದ ಸ್ಥಿತಿ, ಅಲ್ಲಿರುವ ಪ್ರಜೆಗಳ ಉದ್ಯೋಗಗಳು, ಸಂಪದಭಿವೃದ್ಧಿ ಮಾರ್ಗಗಳು—ಇವುಗಳನ್ನು ಬಿಟ್ಟು ತೆರಿಗೆ ಪದ್ಧತಿಯಿರಲಾರದು. ಒಂದು ತೆರಿಗೆಯಲ್ಲಿ ಕಂಡುಬರುವ ದೋಷಗಳನ್ನು ಬೇರೆ ತೆರಿಗೆಗಳಿಂದ ಸರಿಪಡಿಸಲು ಅವಕಾಶವಿರಬಹುದು. ಇದೂ ಅಲ್ಲದೆ ತೆರಿಗೆ ವಿಧಿಸುವ ಸರಕಾರದ ಸ್ವರೂಪ ಮತ್ತು ರಚನೆಯ ಕಡೆಗೆ ನಾವ ಗಮನಕೊಡಬೇಕು. ಇವೆಲ್ಲವನ್ನೂ ಒಟ್ಟುಗೂಡಿಸಿ ತೆರಿಗೆಯ ಸಿಸ್ತನ್ನು ನೋಡುವುದೇ ಮೇಲು. ಇದರಿಂದ ತೆರಿಗೆಯ ಸಿಸ್ತಿನ ವಿಚಾರದಲ್ಲಿ ನಿಶ್ಚಯವಾದ ತಿಳಿವಳಿಕೆ ಉಂಟಾಗುತ್ತದೆ.

---

# ಪ್ರಕರಣ ೬

## ತೆರಿಗೆಯು ಹೊರೆ ಮತ್ತು ಪರಿಣಾಮ

೧. ತೆರಿಗೆಯು ಹೊರೆಯೆ? ಸರಕಾರದ ಆದಾಯದಲ್ಲಿ ಸ್ವಲ್ಪ ಭಾಗವನ್ನಾದರೂ ಪ್ರಜೆಗಳಿಂದ ತೆರಿಗೆಯ ರೂಪದಲ್ಲಿ ಸಂಗ್ರಹಿಸದಿದ್ದರೆ ಅದರ ವಿಷಯದಲ್ಲಿ ಅವರಿಗೆ ಮಮತೆ ಜವಾಬ್ದಾರಿಗಳು ಹುಟ್ಟಲಾರವು. ಒಬ್ಬನು ಒಂದು ಸಂಘಕ್ಕೆ ಚಂದಾಹಣವನ್ನು ಕೊಡುತ್ತಾನೆಂದು ಭಾವಿಸೋಣ. ಅವನಿಗೆ ಆ ಸಂಘದಿಂದ ಯಾವ ಯಾವ ಉಪಯೋಗಗಳು ದೊರೆಯಬೇಕೋ ಅವೆಲ್ಲವನ್ನೂ ಪಡೆಯಲು ಹಕ್ಕಿರುತ್ತದೆ. ಸಂಘದ ಕಾರ್ಯ್ಯವ್ಯವಸ್ಥೆ ರೀತಿ ನೀತಿಗಳಲ್ಲಿ ಭಾಗವಹಿಸುವ ಅಧಿಕಾರ ಬರುತ್ತದೆ. ಆದ್ದರಿಂದ ಅವನು ಸಂಘದ ವಿಷಯವನ್ನೆಲ್ಲಾ ಚೆನ್ನಾಗಿ ತಿಳಿಯುತ್ತಾನೆ. ಅದರ ಬೆಳವಣಿಗೆಯಲ್ಲಿ ಅವನು ಆಸಕ್ತಿಯನ್ನು ವಹಿಸುತ್ತಾನೆ. ಅವನು ಉದಾಸೀನನಾದರೆ ಸಂಘ ಅವನತಿಗೆ ಬರಬಹುದು; ಆದ್ದರಿಂದ ಅವನು ಯಾವಾಗಲೂ ಜಾಗರೂಕತೆಯಿಂದ ವರ್ತಿಸುತ್ತಾನೆ. ಇದಕ್ಕೆಲ್ಲಾ ಕಾರಣ ಅವನು ಚಂದಾ ಹಣವನ್ನು ಸಂಘಕ್ಕೆ ಸಲ್ಲಿಸಿರುವುದು. ಸಣ್ಣ ಸಂಘದ ವಿಷಯದಲ್ಲಿಯೇ ಹೀಗಿದ್ದರೆ ಸರಕಾರದ ವಿಷಯ ಇನ್ನೂ ದೊಡ್ಡದಾದದ್ದು. ಸರಕಾರಕ್ಕೆ ತೆರಿಗೆ ಸಲ್ಲಿಸಿರುವುದರಿಂದ ಪ್ರಜೆ ಅದರ ಕಾರ್ಯಕಲಾಪಗಳಲ್ಲಿ ಭಾಗವಹಿಸುವ ಅಧಿಕಾರವನ್ನೂ ಆಸಕ್ತಿಯನ್ನೂ ಅದು ತನ್ನದೇ ಎಂಬ ಭಾವನೆಯನ್ನೂ ಪಡೆಯಲು ಅವಕಾಶವಾಗುತ್ತದೆ. ಆದ್ದರಿಂದ ಪ್ರತಿಯೊಬ್ಬ ಪ್ರಜೆಯೂ ತೆರಿಗೆ ಸಲ್ಲಿಸಲೇಬೇಕು. ತೆರಿಗೆ ಕೊಡುವುದೂ ಒಂದು ಹಕ್ಕುಬಾಧ್ಯತೆ; ತೆರಿಗೆಯನ್ನು ಹೊರೆ ಎಂದು ಭಾವಿಸಬಾರದು.

ಸಂಪಾದನೆಯ ಶಕ್ತಿ ಒಬ್ಬೊಬ್ಬರಲ್ಲಿ ಒಂದೊಂದು ರೀತಿಯಾಗಿರುತ್ತದೆ. ಹಾಗೆಯೇ ತೆರಿಗೆ ಕೊಡುವ ಶಕ್ತಿಯೂ ಅವರವರ ಆದಾಯಕ್ಕೆ ಹೊಂದಿಕೊಂಡಿರುತ್ತದೆ. ಆದ್ದರಿಂದ ಆದಾಯದ ಪ್ರಮಾಣವನ್ನು ತಿಳಿದುಕೊಂಡರೆ ಅದಕ್ಕೆ ಯಾವ ಪ್ರಮಾಣದ ತೆರಿಗೆ ಬೀಳಬೇಕೆಂದು ಗೊತ್ತಾಗುತ್ತದೆ. ಒಂದು ದೃಷ್ಟಿಯಿಂದ ಯಾವ ಪ್ರಮಾಣದ ತೆರಿಗೆಯಾದರೂ, ಅದನ್ನು ಹೊರೆಯೆಂದೇ ಭಾವಿಸಬಹುದು. ಇದು ನ್ಯಾಯವಾದುದಲ್ಲ. ಆದರೆ ಮೇಲೆ ಹೇಳಿರುವ ಪ್ರಮಾಣಕ್ಕಿಂತ ತೆರಿಗೆ ಹೆಚ್ಚಾದರೆ ಅದು ನ್ಯಾಯವಾಗಿಯೂ ಹೊರೆಯಾಗಿ ಪರಿಣಮಿಸುತ್ತದೆ (Iniquitous burden). ಈ ಮಿತಿಯನ್ನು ನಿರ್ಧರಿಸಲು ಕೆಲವು ವಿಷಯಗಳನ್ನು ನೆನಪಿನಲ್ಲಿಡಬೇಕು :

(೧) ಪ್ರಜೆಯ ಸರಾಸರಿ ಆದಾಯ ಮತ್ತು ಆಸ್ತಿಯ ವಿವರವನ್ನು ಮೊದಲು ತಿಳಿಯಬೇಕು.

(೨) ಪ್ರಜೆಯು ಸರಾಸರಿ ಖರ್ಚು ತಿಳಿಯಬೇಕು. ನೆಮ್ಮದಿಯಿಂದ ಬದುಕುವುದಕ್ಕೆ ಯಾವ ಅನುಕೂಲಗಳಿರಬೇಕೋ ಅವಕ್ಕೆ ಬೇಕಾಗುವ ಹಣವನ್ನು ಈ ಖರ್ಚಿನಲ್ಲಿ ಸೇರಿಸಬಹುದು.

(೩) ಮೇಲೆ ಹೇಳಿರುವ ಖರ್ಚನ್ನೆಲ್ಲಾ ಅವನ ಆದಾಯದಿಂದ ಕಳೆದು ಉಳಿತಾಯವಾಗುವ ಎಲ್ಲ ಹಣದ ಮೇಲೂ ತೆರಿಗೆಯನ್ನು ಹೇರಬಾರದು ದೇಶದ ಸಂಪದಭಿವೃದ್ಧಿ ಕಾರ್ಯ ಮುಂದುವರಿಯುವುದಕ್ಕೆ ಮೂಲಧನ ಅಗತ್ಯ. ಈ ಮೂಲಧನ ಪ್ರಜೆಗಳಿಂದಲೇ ಬರುವಂತಿರಬೇಕು. ಆದ್ದರಿಂದ ಇಂಥ ಉದ್ಯಮ ಗಳಲ್ಲಿ ಭಾಗಿಯಾಗಲು ಪ್ರಜೆ ಹಣವನ್ನು ಕೂಡಿಡಬೇಕು. ಇದಕ್ಕೆ ಅವಕಾಶವನ್ನು ಕೊಟ್ಟು ಅನಂತರ ನಿಲ್ಲುವ ಹಣದ ಮೇಲೆ ತೆರಿಗೆಯನ್ನು ವಿಧಿಸಬಹುದು.

ಪ್ರಜೆಯ ಒಟ್ಟು ಆದಾಯದಲ್ಲಿ ಮೇಲೆ ಹೇಳಿರುವ ಉದ್ದೇಶಗಳಿಗೆ ಬೇಕಾಗು ವಷ್ಟು ಹಣವನ್ನು ಅವನ ಸ್ವಂತಕ್ಕೇ ಬಿಟ್ಟು ಉಳಿದ ಭಾಗವನ್ನು ಸರಕಾರ ತೆರಿಗೆಯಮೂಲಕ ಶೇಖರಿಸಬಹುದು. ಇದಕ್ಕಿಂತಲೂ ಹೆಚ್ಚು ತೆರಿಗೆಯನ್ನು ಹಾಕಿ ದರೆ, ಅದು ಹೊರೆಯಾಗಿ ಪರಿಣಮಿಸುತ್ತದೆ.

ತೆರಿಗೆಯ ಭಾರವನ್ನು ನಿರ್ಣಯಿಸಲು ಹಣಕಾಸಿನ ದೃಷ್ಟಿ ಒಂದೇ ಸಾಲದು. ಪ್ರಜೆಗಳ ಮನಸ್ಸಿನಲ್ಲಿ ಉಂಟಾಗುವ ಭಾವಗಳನ್ನೂ ತಿಳಿಯಲು ಪ್ರಯತ್ನ ಪಡಬೇಕು. ಅವರ ಉತ್ಸಾಹ ತಗ್ಗಬಹುದು ; ಅಧಿಕವಾದ ತೆರಿಗೆಯಿಂದ ಅವರಲ್ಲಿ ಅಸಮಾಧಾನ ಮೂಡಬಹುದು. ಇದರಿಂದ ಕ್ರಾಂತಿ, ಚಳುವಳಿ ಮುಂತಾದುವು ತಲೆದೋರಬಹುದು. ತೆರಿಗೆ ಹಣದ ವಿನಿಯೋಗ, ವಸೂಲಿಯ ಮತ್ತು ಖರ್ಚಿನ ರೀತಿ ನೀತಿಗಳು, ಸರಕಾರದ ರಚನೆ—ಇವೇ ಮೊದಲಾದ ವಿಷಯಗಳನ್ನೂ ಪರ್ಯಾಲೋಚಿಸಬೇಕು. ಉದಾಹರಣೆಗಾಗಿ ವಿದ್ಯಾಭ್ಯಾಸ, ನಿರುದ್ಯೋಗ ಪರಿಹಾರ, ಬಡವರ ಸಂಕಟ ನಿವಾರಣೆ—ಇವೇ ಮೊದಲಾದ ಖರ್ಚು ಬಾಬುಗಳಿಗೆ ಹೆಚ್ಚಿನ ಹಣವನ್ನು ಉಪಯೋಗಿಸಲು ಸರಕಾರ ವಿಧಿಸಿದ ತೆರಿಗೆಯ ಹೊರೆ ಮತ್ತು ಪರಿಣಾಮಕ್ಕೂ, ಆಡಳಿತ ಮತ್ತು ರಕ್ಷಣೆ ಬಾಬುಗಳಿಗೇ ವಿಧಿಸಿದ ತೆರಿಗೆ ಹೊರೆಗೂ ಬಹಳಮಟ್ಟಿಗೆ ವ್ಯತ್ಯಾಸ ಉಂಟು.

ತೆರಿಗೆ ಕಡೆಯಲ್ಲಿ ಯಾರ ತಲೆಯಮೇಲೆ ಬೀಳುವುದು ಎಂಬ ವಿಷಯವನ್ನು ವಿಚಾರಮಾಡುವುದು ಬಹಳ ಮುಖ್ಯವಾದುದು. ಅದನ್ನು ಸರಕಾರಕ್ಕೆ ಸಲ್ಲಿಸು ವವರೇ ಅದರ ಭಾರವನ್ನು ಹೊರುತ್ತಾರೆಂದು ಹೇಳುವುದಕ್ಕಾಗುವುದಿಲ್ಲ. ವಸೂಲಿಯ ಸೌಕರ್ಯಕ್ಕೋಸ್ಕರ ಕೆಲವರಿಂದ ಮಾತ್ರ ತೆರಿಗೆಗಳನ್ನು ಸರಕಾರ ತೆಗೆದುಕೊಳ್ಳುತ್ತದೆ. ಸರಕಾರಕ್ಕೆ ಹಣವನ್ನು ಸಲ್ಲಿಸಿದನಂತರ ಅವರು ಆ ಹಣ ವನ್ನು ಇತರರಿಂದ ಸಂಗ್ರಹಿಸಲು ಪ್ರಯತ್ನಪಡುವರು. ಪರೋಕ್ಷವಾದ ತೆರಿಗೆ ಗಳಿಗೂ ಪ್ರತ್ಯಕ್ಷವಾದ ತೆರಿಗೆಗಳಿಗೂ ಇರತಕ್ಕ ವ್ಯತ್ಯಾಸವನ್ನು ಸೂಚಿಸಿದಾಗ ಈ ವಿಷಯವನ್ನು ವಿಶದಪಡಿಸಿರುತ್ತದೆ. ತೆರಿಗೆಗಳಿಗೆ ಚಲನ ಶಕ್ತಿಯುಂಟು. ಸಕ್ಕರೆಯ ಮೇಲೆ ಸುಂಕ ಹಾಕಿದರೆ, ಸಕ್ಕರೆ ಮಾರುವವರಿಂದ ಮೊದಲು ಆ ಸುಂಕ ವಸೂಲಾದರೂ ಮಾರುವವರು ಕೊಳ್ಳುವವರಿಂದ ತಾವು ಕೊಟ್ಟ ಸುಂಕವ

ಮೊತ್ತವನ್ನು ವಸೂಲುಮಾಡಿಕೊಳ್ಳುವರು. ತೆರಿಗೆಗಳು ಕಟ್ಟಕಡೆಯಲ್ಲಿ ಯಾರ ಮೇಲೆ ಬೀಳುತ್ತವೆ ಎಂಬ ವಿಷಯವನ್ನು ತಿಳಿಯಬೇಕು. ತೆರಿಗೆಯ ನಿಲುಗಡೆಯನ್ನು ತಿಳಿಯದೆ ಅದರ ಹೊರೆಯನ್ನು ಸರಿಯಾಗಿ ನಿರ್ಧರಿಸಲು ಸಾಧ್ಯವಿಲ್ಲ.

ದೇಶದ ಒಟ್ಟು ತೆರಿಗೆಯ ಹಣವನ್ನು ಅಲ್ಲಿನ ಪ್ರಜಾ ಸಂಖ್ಯೆಯಿಂದ ಭಾಗಿಸಿ ಸರಾಸರಿ ತೆರಿಗೆ ಹೊರೆಯನ್ನು ಗೊತ್ತು ಮಾಡುವರು; ಆ ದೇಶದ ಜನರ ಸರಾಸರಿ ಆದಾಯಕ್ಕೂ ತೆರಿಗೆಗೂ ಇರುವ ಪ್ರಮಾಣವನ್ನು ನಿಶ್ಚಯಿಸುವರು. ಈ ಹೊರೆಯನ್ನು ಮತ್ತೊಂದು ದೇಶದ ತೆರಿಗೆ ಹೊರೆಯೊಡನೆ ಹೋಲಿಸಿ ಇಲ್ಲಿ ಹೆಚ್ಚು, ಅಲ್ಲಿ ಕಡಮೆ ಎಂದು ಮುಂತಾಗಿ ಟೀಕೆಮಾಡುವುದು ಶಾಸ್ತ್ರಸಮ್ಮತವಾದುದಲ್ಲ. ಮೇಲೆ ಹೇಳಿರುವ ವಿಷಯಗಳನ್ನೆಲ್ಲಾ ತಿಳಿದು ವಿಮರ್ಶಿಸಿದರೆ ಒಳ್ಳೆಯದು.

ತೆರಿಗೆಗಳೆಲ್ಲ ಹೇಯವಾದುವೆಂದು ಭಾವಿಸುವುದು ತಪ್ಪು. ಸಾಮಾನ್ಯವಾಗಿ ಜನರಿಗೆ ಕೇಡನ್ನುಂಟುಮಾಡುವ ಕೆಲವು ಸಾಮಗ್ರಿಗಳ ಮೇಲೆ ತೆರಿಗೆಯನ್ನು ಹಾಕಿ ಆ ಪದಾರ್ಥಗಳ ಸೇವನೆಯನ್ನು ಕಡಮೆ ಮಾಡಿದರೆ ಅಂತಹ ತೆರಿಗೆಯನ್ನು ತಪ್ಪಾದುದೆಂದು ಹೇಳಲು ಸಾಧ್ಯವೇ? ಧನಿಕನಿಂದ ಹೆಚ್ಚಿನ ದರದಲ್ಲಿ ತೆರಿಗೆ ಸಂಗ್ರಹಿಸಿ, ಆ ದ್ರವ್ಯವನ್ನು ಬಡವರ ಉದ್ಧಾರಕ್ಕಾಗಿ ಉಪಯೋಗಿಸಿ, ದೇಶದ ಸಂಪತ್ತು ಹೆಚ್ಚಲು ಅವಕಾಶ ಕಲ್ಪಿಸಿ, ಸಮಾಜದ ಆದಾಯದ ಹಂಚಿಕೆ ಕ್ರಮವನ್ನು ಉತ್ತಮ ಪಡಿಸಿ, ಜನಜೀವನದ ಅಂತಸ್ತು ಮೇಲಕ್ಕೇರುವಂತೆ ಮಾಡುವ ತೆರಿಗೆ ಸಿಸ್ತನ್ನು ಹೇಯವೆಂದು ಭಾವಿಸುವುದು ಹೇಗೆ ಸಾಧ್ಯ?

೨. ಪರಿಣಾಮ.—ಇನ್ನು ತೆರಿಗೆಯ ಸಿಸ್ತಿನಿಂದ ಸಮಾಜದಲ್ಲುಂಟಾಗುವ ಬದಲಾವಣೆಗಳನ್ನು ನೋಡಬಹುದು. ಇದರಿಂದ ಸಮಾಜದ ಆರ್ಥಿಕ ಸ್ಥಿತಿ ಉತ್ತಮಗೊಳ್ಳಲೂ ಬಹುದು, ಕುಗ್ಗಲೂ ಬಹುದು; ಸಂಪದಭಿವೃದ್ಧಿ ವ್ಯವಸ್ಥೆ ಬದಲಾವಣೆ ಹೊಂದಬಹುದು. ಹೊರದೇಶದಿಂದ ಬರುವ ಸಾಮಾನುಗಳ ಮೇಲೆ ಸುಂಕ ಹೇರಿದರೆ ಅವು ಬರುವುದು ಕಡಮೆಯಾಗಿ ನಾಡಿನ ಕೈಗಾರಿಕೆಗಳು ಅಭಿವೃದ್ಧಿ ಹೊಂದುತ್ತವೆ. ಇಲ್ಲಿನ ಕೈಗಾರಿಕೆಗೆ ಬೇಕಾದ ಹಸಿ ಪದಾರ್ಥಗಳು ದೇಶದಿಂದ ಹೊರಕ್ಕೆ ರಫ್ತಾಗುವಾಗ ಆ ಪದಾರ್ಥಗಳ ಮೇಲೆ ಸುಂಕ ಹಾಕಿದರೆ, ಅವು ಹೋಗುವುದು ಕಡಮೆಯಾಗಿ ನಮ್ಮಲ್ಲಿಯೇ ಉಳಿದು ಉಪಯೋಗಕ್ಕೆ ಬರುತ್ತವೆ; ಕೈಗಾರಿಕೆ ಅಭಿವೃದ್ಧಿ ಹೊಂದಲು ಅನುಕೂಲವಾಗುತ್ತದೆ. ತೆರಿಗೆಯ ದರಗಳು ಜಾಸ್ತಿಯಾದರೆ ಸಂಪಾದನೆಯ ಶಕ್ತಿಯೂ ಉತ್ಸಾಹವೂ ಕುಗ್ಗುವುವು; ಬಂಡವಾಳ ತಗ್ಗುವುದು; ಪರದೇಶಗಳಿಗೆ ಬಂಡವಾಳ ರಫ್ತಾಗುವುದೂ ಉಂಟು. ಸಕ್ಕರೆಯ ಮೇಲೆ ಅತಿಯಾಗಿ ಸುಂಕ ಹೇರಿದರೆ, ಅದರ ಬೆಲೆ ಜಾಸ್ತಿಯಾಗಿ ಕೊಳ್ಳುವವರಿಲ್ಲದೆ ಸಕ್ಕರೆಯ ಕೈಗಾರಿಕೆ ಹೀನಸ್ಥಿತಿಗೆ ಬರಬಹುದು. ಇದಕ್ಕೆ ಸಂಬಂಧಪಟ್ಟ ಇತರ ಕೈಗಾರಿಕೆಗಳೂ ಕ್ಷಯಿಸುವುವು; ಕಬ್ಬನ್ನು ಬೆಳೆದು ಜೀವಿಸುವವರ ಸ್ಥಿತಿಯೂ ಕೆಡುವುದು. ಹೀಗೆ ತೆರಿಗೆಗಳನ್ನು ಸಂಗ್ರಹಿಸುವ ರೀತಿನೀತಿಗಳಿಂದ ದೇಶದ ಸಂಪತ್ತಿಯ ಉತ್ಪತ್ತಿ ಕ್ರಮದಲ್ಲಿ ಬದಲಾವಣೆಗಳು ಆಗುತ್ತವೆ. ಉತ್ಪತ್ತಿಗೆ ಸಾಧನವಾದ ಬಂಡವಾಳ ಮತ್ತು ಕೆಲಸಗಾರರು ಒಂದು ಕಡೆಯಿಂದ

ಮತ್ತೊಂದು ಕಡೆಗೆ ಚಲಿಸುವುದರಿಂದ ದೇಶದ ಸಂಪದಭಿವೃದ್ಧಿ ಕಾರ್ಯದಲ್ಲಿ ವ್ಯತ್ಯಾಸವುಂಟಾಗುತ್ತದೆ.

ಸಂಪತ್ತಿಯ ಹಂಚಿಕೆಯಲ್ಲಿಯೂ ಬದಲಾವಣೆಗಳುಂಟಾಗುತ್ತವೆ. ಬಡವರಿಗೂ ಶ್ರೀಮಂತರಿಗೂ ಇರುವ ಅಂತರ ಕಡಮೆಯಾದಹಾಗೆಲ್ಲಾ ಸಂಪತ್ತಿಯ ಹಂಚಿಕೆ ಸರಿಯಾಗುತ್ತದೆಯೆಂದು ಹೇಳಬಹುದು. ಆದಾಯದ ತೆರಿಗೆಯನ್ನು ತೆಗೆದು ಕೊಳ್ಳೋಣ. ಆದಾಯ ಏರಿದಹಾಗೆಲ್ಲಾ ತೆರಿಗೆಯ ದರವೂ ಏರುತ್ತದೆ. ಹೆಚ್ಚು ಸಂಪಾದಿಸುವವನು ತನ್ನ ಆದಾಯದಲ್ಲಿ ಹೆಚ್ಚಿನ ಭಾಗವನ್ನು ಸರಕಾರಕ್ಕೆ ಕೊಡಬೇಕಾಗುತ್ತದೆ. ಆಸ್ತಿವಂತರೂ ಇದೇ ರೀತಿ ತಮ್ಮ ಆಸ್ತಿ ಹೆಚ್ಚಿದ ಹಾಗೆಲ್ಲಾ ಹೆಚ್ಚಿನ ದರದ ತೆರಿಗೆಯನ್ನು ಕೊಡಬೇಕಾಗು ವುದು. ಹೀಗೆ ಅವರಿಂದ ವಸೂಲಾದ ಹಣವನ್ನು ಬಡವರ ಉಪಯೋಗಕ್ಕೆ ಸರಕಾರ ವಿನಿಯೋಗಿಸಬಹುದು. ಇದರಿಂದ ಬಡವರಿಗೂ ಶ್ರೀಮಂತರಿಗೂ ಇರುವ ಅಂತರ ಸ್ವಲ್ಪ ಕಡಮೆಯಾಗುತ್ತದೆ. ಹೀಗೆ ಸಂಪತ್ತು ಆದಾಯಗಳ ಉತ್ಪತ್ತಿ ಮತ್ತು ಹಂಚಿಕೆಯನ್ನು ಹದ್ದಿನಲ್ಲಿ ಇರಿಸುವುದಕ್ಕೆ ತೆರಿಗೆಯ ನೀತಿ ಸಹಾಯಮಾಡುತ್ತದೆ.

ಆರ್ಥಿಕ ದೃಷ್ಟಿಯಿಂದಲೂ ಸಾಮಾಜಿಕ ದೃಷ್ಟಿಯಿಂದಲೂ ತನ್ನ ಪ್ರಜೆಗಳಿಗೆ ಪ್ರಯೋಜನ ಹೆಚ್ಚಿ ಅನ್ಯಾಯವೂ ಕೇಡೂ ಆಗದಂತೆ ಸರಕಾರ ತೆರಿಗೆಗಳನ್ನು ವಿಧಿಸಬಹುದು. ಜನಜೀವನವನ್ನು ಉತ್ತಮಗೊಳಿಸಲು ಅದು ಸಹಕಾರಿಯಾಗು ವುದು.

---

# ಪ್ರಕರಣ ೧೦

## ಕೆಲವು ಮುಖ್ಯವಾದ ತೆರಿಗೆಗಳು

ತೆರಿಗೆಗಳು ಒಂದೊಂದು ದೇಶದಲ್ಲಿ ಒಂದೊಂದು ವಿಧವಾಗಿರುತ್ತವೆ. ಅವನ್ನು ಪ್ರತ್ಯಕ್ಷ ಮತ್ತು ಪರೋಕ್ಷವೆಂದು ವಿಂಗಡಿಸಿರುವ ವಿಷಯವನ್ನು ಹಿಂದೆ ತಿಳಿಸಿದೆ. ಈಗ ಸುಮಾರು ಅರುವತ್ತು ವರುಷಗಳಿಂದೀಚೆಗೆ ಪ್ರತ್ಯಕ್ಷ ತೆರಿಗೆಗಳೂ ಹೆಚ್ಚು ಪ್ರಾಶಸ್ತ್ಯವನ್ನು ಪಡೆದಿವೆ. ಕೇಂದ್ರ ಸರಕಾರ ಈ ಬಗೆಯ ತೆರಿಗೆಗಳಿಂದಲೇ ಹೆಚ್ಚು ವರಮಾನವನ್ನು ಕೂಡಿಸಬಹುದು.

೧೯೧೪ ರಿಂದ ೧೯೧೮ ರ ವರೆಗೆ ನಡೆದ ದೊಡ್ಡ ಯುದ್ಧದ ಅನಂತರ ಸರಕಾರಗಳ ಕಾರ್ಯಕ್ಷೇತ್ರವೂ ಬಹು ವಿಸ್ತಾರವಾಗುತ್ತಿದೆ. ಹೊಸ ಹೊಸದಾದ ದೊಡ್ಡ ಕಾರ್ಯಗಳನ್ನು ಕೈಗೊಂಡು ನಿರ್ವಾಹಮಾಡಲು ಹೊಸ ತೆರಿಗೆಗಳನ್ನು ಸರಕಾರಗಳು ಹಾಕುತ್ತಿವೆ. ರಾಜ್ಯಾದಾಯವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಹೊಸ ಹೊಸ ತೆರಿಗೆಗಳನ್ನು ಹಾಕುವುದು ವಾಡಿಕೆಗೆ ಬರುತ್ತಿದೆ. ಸಾಮಾನ್ಯವಾಗಿ ಬಳಕೆಯಲ್ಲಿರುವ ಕೆಲವು ಮುಖ್ಯವಾದ ತೆರಿಗೆಗಳನ್ನು ಈ ಪ್ರಕರಣದಲ್ಲಿ ವಿವರಿಸಲಾಗುವುದು.

ವರಮಾನದ ತೆರಿಗೆ, ಆಸ್ತಿ ಹಕ್ಕುದಾರಿಯ ತೆರಿಗೆ ಮತ್ತು ಅಧಿಕ ಲಾಭದ ತೆರಿಗೆ—ಈ ಮೂರನ್ನು ಪ್ರತ್ಯಕ್ಷ ತೆರಿಗೆ ಗುಂಪಿನಿಂದ ಆರಿಸಿದೆ. ಆಮದು ರಫ್ತುಗಳ ಸುಂಕ, ಅಬ್ಕಾರಿ ಸುಂಕ, ಮತ್ತು ವ್ಯಾಪಾರದ ತೆರಿಗೆ—ಈ ಮೂರನ್ನು ಪರೋಕ್ಷ ತೆರಿಗೆ ಗುಂಪಿನಿಂದ ಆರಿಸಿದೆ. ಭೂ ಕಂದಾಯವನ್ನು ಪ್ರತ್ಯೇಕವಾಗಿ ವಿಮರ್ಶಿಸಲಾಗಿದೆ. ಪ್ರಪಂಚದ ಎರಡನೆಯ ಯುದ್ಧಕ್ಕೆ ಪೂರ್ವಭಾವಿಯಾಗಿ ವಸೂಲಾಗುತ್ತಿದ್ದ ತೆರಿಗೆ ಹುಟ್ಟುವಳಿ ಅಂಶಗಳನ್ನು ಮಾತ್ರ ಗಮನದಲ್ಲಿಟ್ಟು, ಮುಂದೆ ಹೇಳಿರುವ ಅಂಕಿಗಳನ್ನು ಸೂಚಿಸಿದೆ. ಜನಸಾಮಾನ್ಯದ ಆದಾಯ ಹೆಚ್ಚಿರುವಂತೆ ಸರಕಾರದ ತೆರಿಗೆ ಹುಟ್ಟುವಳಿಯೂ ಕೆಲವು ಬಾಬುಗಳಲ್ಲಿ ಎರಡರಷ್ಟು ಮೂರರಷ್ಟು ಹೆಚ್ಚಿರುತ್ತದೆ.

### ೧. ವರಮಾನದ ತೆರಿಗೆ

ಇದು ತೆರಿಗೆಗಳಲ್ಲೆಲ್ಲಾ ಬಹು ಮುಖ್ಯವಾದುದು. ಈ ತೆರಿಗೆಯಿಂದ ಸರಕಾರಕ್ಕೆ ಹೆಚ್ಚಾದ ಆದಾಯ ಬರುತ್ತದೆ. ಇದು ಜನಪ್ರಿಯವಾದ ತೆರಿಗೆಯೂ ಹೌದು ; ಅಲ್ಲದೆ ಶಾಸ್ತ್ರಸಮ್ಮತವೂ ಆಗಿದೆ.

ಬೇರೆ ಬೇರೆ ದೇಶಗಳ ಒಟ್ಟು ತೆರಿಗೆಯ ರಾಜ್ಯಾದಾಯದಲ್ಲಿ ವರಮಾನದ ತೆರಿಗೆಯಿಂದ ಎಷ್ಟು ಆದಾಯ ಬರುತ್ತದೆಂಬುದನ್ನು ಈ ಕೆಳಗಿನ ಪಟ್ಟಿಯಿಂದ ತಿಳಿಯಬಹುದು. ಇದರಿಂದ ಮುಂದುವರಿದಿರುವ ದೇಶಗಳಲ್ಲಿ ಈ ತೆರಿಗೆಗೆ ಇರುವ ಪ್ರಾಶಸ್ತ್ಯವೂ ಗೊತ್ತಾಗುತ್ತದೆ.

| ದೇಶದ ಹೆಸರು | ವರಮಾನದ ತೆರಿಗೆ ಆದಾಯ | ಒಟ್ಟು ತೆರಿಗೆ ರಾಜ್ಯಾದಾಯದಲ್ಲಿ ಶೇಕಡ |
|---|---|---|
| ಇಂಗ್ಲೆಂಡ' | ೩೩·೪೯ ಕೋಟಿ ಪೌಂಡು | ೩೬ |
| ಸಂಯುಕ್ತ ಸಂಸ್ಥಾನ | ೨೬೫·೪ ಕೋಟಿ ಡಾಲರುಗಳು | ೪೨·೫ |
| ಇಂಡಿಯಾ | ೧೩·೯ ಕೋಟಿ ರೂಪಾಯಿ | ೧೧·೫ |
| ಮೈಸೂರು | ೨೯ ಲಕ್ಷ ರೂಪಾಯಿ | ೧೧·೫ |

ಸಾಮಾನ್ಯವಾಗಿ ವರ್ಷ ಒಂದಕ್ಕೆ (ತೆರಿಗೆ ಕೊಡಬೇಕಾದ ವರ್ಷಕ್ಕೆ ಹಿಂದಿನ ವರ್ಷ) ಒಬ್ಬನಿಗೆ ಹಣದ ರೂಪದಲ್ಲಿ ಬರುವ ನಿವ್ವಳ ಆದಾಯವನ್ನು ಆಧಾರವಾಗಿಟ್ಟುಕೊಂಡು ಈ ತೆರಿಗೆಯನ್ನು ವಿಧಿಸುತ್ತಾರೆ. ತೆರಿಗೆಯನ್ನು ಕೊಡಲು ಶಕ್ತಿ ಇದೆಯೋ ಎಂಬುದನ್ನು ಪರೀಕ್ಷಿಸಿ ತಿಳಿದುಕೊಳ್ಳುವುದಕ್ಕೆ ಸಂಪಾದಿಸುವವನ ನಿವ್ವಳ ಆದಾಯ ಎಷ್ಟೆಂಬುದನ್ನು ಕಂಡುಹಿಡಿಯಬೇಕು. ಹಾಗೆ ಗೊತ್ತುಮಾಡಿದ ನಿವ್ವಳ ಆದಾಯದ ಪೂರ್ತಿ ಮೊಬಲಗಿನ ಮೇಲೆ ತೆರಿಗೆಯನ್ನು ವಿಧಿಸುವುದಿಲ್ಲ. ಏಕೆಂದರೆ, ನಿವ್ವಳ ಸಂಪಾದನೆಯ ಸ್ವಲ್ಪ ಭಾಗವನ್ನು ಉಳಿಸಿಕೊಳ್ಳಲು ಸಂಪಾದಿಸುವವನಿಗೆ ಹಕ್ಕಿರುತ್ತದೆ. ಆದ್ದರಿಂದ ಈ ಭಾಗವನ್ನು ಬಿಟ್ಟು ಉಳಿಯುವ ನಿವ್ವಳ ಆದಾಯದ ಮೇಲೆ ತೆರಿಗೆ ವಿಧಿಸುತ್ತಾರೆ. ಉದಾಹರಣೆಗಾಗಿ ಒಬ್ಬನ ವಾರ್ಷಿಕಾದಾಯ, ಸಂಬಳಸಾರಿಗೆಗಳಿಂದ, ಮೂರು ಸಾವಿರ ರೂಪಾಯಿಗಳೆಂದು ಭಾವಿಸೋಣ. ಇದರಲ್ಲಿ ಜೀವವಿಮೆ ಮುಂತಾದುವುಗಳಿಗೆ ಸ್ವಲ್ಪ ಭಾಗವನ್ನು ಬಿಟ್ಟುಕೊಟ್ಟಮೇಲೆ ಉಳಿಯುವ ಹಣವನ್ನು ತೆರಿಗೆ ಕೊಡಬೇಕಾದ ನಿವ್ವಳ ಆದಾಯವೆಂದು ಭಾವಿಸಲಾಗುತ್ತದೆ.

ವರಮಾನದ ತೆರಿಗೆಯನ್ನು ವಿಧಿಸುವಾಗ ಕೆಲವು ನಿಯಮಗಳನ್ನು ಅನುಸರಿಸುತ್ತಾರೆ. ಪ್ರತಿಯೊಬ್ಬ ಪ್ರಜೆಯ ಜೀವನಕ್ಕೂ ಪ್ರಗತಿಗೂ ಕಾಲಾನುಗುಣವಾಗಿ ಕೊನೆಯ ಪಕ್ಷ ಇಷ್ಟು ಹಣಬೇಕು ಎಂದು ಊಹೆಮಾಡಿ ಅದಕ್ಕಿಂತ ಹೆಚ್ಚಿನ ಆದಾಯ ಸಂಪಾದಿಸುವವರಿಂದ ಮಾತ್ರ ವರಮಾನದ ತೆರಿಗೆಯನ್ನು ವಸೂಲು ಮಾಡುತ್ತಾರೆ. ಹೀಗೆ ಈ ತೆರಿಗೆಗೆ ಒಳಪಡದಿರುವ ಆದಾಯದ ಪರಿಮಿತಿ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆಯಾಗಿರುತ್ತದೆ. ಮೈಸೂರು ದೇಶದಲ್ಲಿ ವರ್ಷ ಒಂದಕ್ಕೆ ೨,೪೦೦ ರೂಪಾಯಿಗಳ ಸಂಪಾದನೆ ಇದ್ದಹೊರತು ವರಮಾನದ ತೆರಿಗೆಯನ್ನು ಕೊಡಬೇಕಾಗಿಲ್ಲ.

ವರಮಾನ ಹೆಚ್ಚಿದಹಾಗೆಲ್ಲಾ ತೆರಿಗೆ ಕೊಡುವ ಸಾಮರ್ಥ್ಯವೂ ಹೆಚ್ಚುತ್ತದೆಯೆಂಬುದು ನಮಗೆಲ್ಲರಿಗೂ ತಿಳಿದ ವಿಷಯ. ಆದ್ದರಿಂದ ಆದಾಯ ಹೆಚ್ಚಿದಂತೆಲ್ಲಾ ತೆರಿಗೆಯ ದರವನ್ನೂ ಹೆಚ್ಚಿಸಬೇಕು. ಎರಡು ಸಾವಿರದ ಐದುನೂರು ರೂಪಾಯಿ ವರಮಾನವುಳ್ಳವರು ರೂಪಾಯಿಗೆ ಮೂರು ಕಾಸಿನಂತೆ ತೆರಿಗೆ ಕೊಟ್ಟರೆ ಐದು ಸಾವಿರದ ಐದುನೂರು ರೂಪಾಯಿ ವರಮಾನವುಳ್ಳವರು ರೂಪಾಯಿಗೆ ಆರು ಕಾಸಿ

ನಂತೆ ತೆರಬೇಕು. ಪಿತ್ರಾರ್ಜಿತವಾದ ಆಸ್ತಿ ಉಳ್ಳವನು ಅದರಿಂದ ಬರುವ ವರಮಾನದ ಸಂಪಾದನೆಗೆ ಹೆಚ್ಚು ಕಷ್ಟಪಡಬೇಕಾಗಿಲ್ಲ. ಅವನು ಯಾವುದೋ ಉದ್ಯಮಕ್ಕಾಗಿ ತನ್ನ ಬಂಡವಾಳದ ಕೆಲವು ಭಾಗವನ್ನು ಮೂಲಧನವನ್ನಾಗಿ ಕೊಟ್ಟಿರುತ್ತಾನೆಂದು ಭಾವಿಸೋಣ. ಅವನಿಗೆ ಬರುವ ಲಾಭಾಂಶವು ಪೂರ್ತಿಯಾಗಿ ಸ್ವಯಾರ್ಜಿತವಾದ ಆದಾಯವೆಂದು ಭಾವಿಸಲಾಗುವುದಿಲ್ಲ. ಆದುದರಿಂದ ಅವನು ತನ್ನ ವರಮಾನದಮೇಲೆ ಹೆಚ್ಚಿನ ದರದ ತೆರಿಗೆ ಕೊಡಬೇಕಾದುದು ನ್ಯಾಯ. ಸ್ವಾರ್ಜಿತ ವರಮಾನಕ್ಕೂ ಪಿತ್ರಾರ್ಜಿತ ವರಮಾನಕ್ಕೂ ವ್ಯತ್ಯಾಸ ಮಾಡಿ ಬೇರೆ ಬೇರೆ ದರದ ತೆರಿಗೆಯನ್ನು ವಿಧಿಸುವುದು ನಮ್ಮ ದೇಶದಲ್ಲಿ ಬಳಕೆಯಲ್ಲಿಲ್ಲ.

ಧನಿಕರಿಗೂ ಬಡವರಿಗೂ ಇರುವ ಅಂತರವನ್ನು ತಗ್ಗಿಸಲು ವರಮಾನದ ತೆರಿಗೆಯಿಂದ ಸಾಧ್ಯ.

## ೨. ಆಸ್ತಿ ಹಕ್ಕುದಾರಿಯ ಮೇಲಿನ ತೆರಿಗೆ

ಈ ತೆರಿಗೆಯನ್ನು ಇಂಗ್ಲೀಷಿನಲ್ಲಿ ಡೆತ್ ಡ್ಯೂಟೀಸ್ (Death Duties) ಎಂದು ಕರೆಯುತ್ತಾರೆ. ಇದನ್ನು ದಾಯಭಾಗದ ತೆರಿಗೆಯೆಂದು ಬೇಕಾದರೂ ಕರೆಯಬಹುದು. ಹೇರಳವಾಗಿ ಆಸ್ತಿಪಾಸ್ತಿಗಳನ್ನು ಬಿಟ್ಟು ಯಾವನಾದರೂ ಸತ್ತರೆ ಅವನ ಬಂಧುಗಳು ಆ ಆಸ್ತಿಯಲ್ಲಿ ಕೊಂಚ ಭಾಗವನ್ನು ಸರಕಾರಕ್ಕೆ ತೆರಿಗೆಯ ರೂಪದಲ್ಲಿ ಸಲ್ಲಿಸಬೇಕು ; ಇಲ್ಲದಿದ್ದರೆ ಆ ಆಸ್ತಿ ಅವರಿಗೆ ವಶವಾಗುವುದಿಲ್ಲ. ತಂದೆಯೋ ತಾತನೋ ದೂರದ ದಾಯಾದಿಯೋ ಬಿಟ್ಟು ಹೋದ ಆಸ್ತಿಯನ್ನು ಅನಾಯಾಸವಾಗಿ ಪಡೆದು ಒಂದುಕಡೆ ಕುಳಿತು ತಿನ್ನುವವನು ಜನ ಸಾಮಾನ್ಯದ ಪ್ರಯೋಜನಕ್ಕಾಗಿ ಆ ಆಸ್ತಿಯ ಒಂದು ಭಾಗವನ್ನು ಸಲ್ಲಿಸಬೇಕೆಂಬುದೇ ಈ ತೆರಿಗೆಯ ತತ್ವ. ಈ ಪದ್ಧತಿ ಯೂರೋಪು ಮತ್ತು ಅಮೆರಿಕಾ ಖಂಡಗಳಲ್ಲಿ ಜಾರಿಯಲ್ಲಿರುತ್ತದೆ. ೧೯೩೫-೩೬ರಲ್ಲಿ ಈ ತೆರಿಗೆಯಿಂದ ಇಂಗ್ಲೆಂಡ್ ದೇಶದ ಖಜಾನೆಗೆ ಸುಮಾರು ೮೮೦ ಲಕ್ಷ ಪೌಂಡುಗಳ ವರಮಾನ ಬಂದಿತು. ೧೯೪೫-೪೬ರಲ್ಲಿ ಈ ಬಾಬಿನ ಹುಟ್ಟುವಳಿ ೧೨೦೦ಲಕ್ಷ ಪೌಂಡುಗಳಿಗೇರಿತು. ಇಂಗ್ಲೆಂಡ್ ಸರಕಾರದ ಹುಟ್ಟುವಳಿಯಲ್ಲಿ ಹತ್ತರಲ್ಲಿ ಒಂದು ಭಾಗವು ಈ ತೆರಿಗೆಯಿಂದ ಸಂದಾಯವಾಗುತ್ತದೆ. ಸಾಮಾನ್ಯವಾಗಿ ನೂರು ಪೌಂಡುಗಳಿಗಿಂತ ಹೆಚ್ಚಾದ ಆಸ್ತಿಯನ್ನು ಬಿಟ್ಟು ಸತ್ತ ಸಂದರ್ಭಗಳಲ್ಲಿ ಈ ವಿಧದ ತೆರಿಗೆಯನ್ನು ವಿಧಿಸುತ್ತಾರೆ. ಆಸ್ತಿ ಹೆಚ್ಚಾಗಿದ್ದಂತೆಲ್ಲಾ ತೆರಿಗೆಯ ದರವೂ ಹೆಚ್ಚಾಗುತ್ತದೆ. ೩೦ ಲಕ್ಷ ಪೌಂಡುಗಳಿಗಿಂತ ಹೆಚ್ಚಾಗಿ ಆಸ್ತಿಯಿದ್ದವರ ವಾರಸುದಾರರು ಆ ಆಸ್ತಿಯನ್ನು ಪಡೆಯುವಾಗ ಸುಮಾರು ಅರ್ಧದಷ್ಟು ಆಸ್ತಿಯನ್ನೇ ಸರಕಾರಕ್ಕೆ ತೆರಿಗೆಯ ರೂಪದಲ್ಲಿ ಕೊಡಬೇಕಾಗುವುದು. ಸತ್ತ ಆಸ್ತಿವಂತರಿಗೂ ಅವರ ತರುವಾಯ ಆ ಆಸ್ತಿಯನ್ನು ಅನುಭವಿಸುವವರಿಗೂ ಇರುವ ಬಾಂಧವ್ಯವು ಸಮೀಪವಾದರೆ ಸುಂಕದ ದರ ಕಡಮೆಯಾಗಿರುವುದೂ, ದೂರದ್ದಾದರೆ ಸುಂಕದ ದರ ಹೆಚ್ಚಾಗಿರುವುದೂ ಉಂಟು.

## ೩. ಅಧಿಕ ಲಾಭದ ತೆರಿಗೆ

ವಾರ್ಷಿಕ ವರಮಾನದ ಆಧಾರದ ಮೇಲೆ ವಸೂಲಾಗುವ ಇನ್ನೊಂದು ಬಗೆಯ ತೆರಿಗೆಯುಂಟು. ಅದನ್ನು ಅಧಿಕ ಲಾಭದ ತೆರಿಗೆ ಎಂದು ಕರೆಯಬಹುದು. ಲಾಭಕ್ಕೂ ಒಂದು ಪರಿಮಿತಿಯನ್ನು ಗೊತ್ತುಮಾಡಿ, ಅದಕ್ಕೆ ಮೀರಿದ ಲಾಭ ಸಂಪಾದಿಸುವವರಿಂದ ಈ ತೆರಿಗೆಯನ್ನು ವಸೂಲು ಮಾಡುವರು.

ಯುದ್ಧಗಳಿಗಾಗಿ ಸರಕಾರಗಳು ಅಪಾರವಾದ ಹಣವನ್ನು ವೆಚ್ಚಮಾಡಬೇಕಾಗುತ್ತದೆ. ಅದನ್ನು ಸಂಪಾದಿಸುವುದಕ್ಕಾಗಿ ಅಧಿಕ ಲಾಭದ ತೆರಿಗೆಯನ್ನು ವಿಧಿಸುತ್ತಾರೆ.*

ಯುದ್ಧಕಾಲದಲ್ಲಿಯೂ ಆಮೇಲೆಯೂ ಧಾರಣೆವಾಸಿಗಳು ವಿಪರೀತವಾಗಿ ಏರುವುದನ್ನು ನಾವು ಕಂಡಿದ್ದೇವೆ. ಧಾರಣೆವಾಸಿಗಳು ಹೀಗೆ ಏರುವುದರಿಂದ ವ್ಯಾಪಾರಗಾರರಿಗೂ ಕೃಷಿ ಕೈಗಾರಿಕೆಗಳನ್ನು ನಡೆಸುವವರಲ್ಲಿ ಕೆಲವರಿಗೂ ಹೆಚ್ಚಿನ ಆದಾಯ ಬರುವ ಸಂಭವ ಒದಗುವುದು. ಈ ಸಂದರ್ಭದಲ್ಲಿ ತಮ್ಮ ಆದಾಯ ಹೆಚ್ಚಲು ಅವರು ಯಾವ ವಿಧದಲ್ಲಿಯೂ ಕಷ್ಟಪಡಬೇಕಾಗಿಲ್ಲವಷ್ಟೆ? ಅದಕ್ಕಾಗಿ ಯಾವ ವಿಶೇಷ ಪ್ರಯತ್ನವನ್ನೂ ಅವರು ಮಾಡುವುದಿಲ್ಲ. ಅವರಿಗೆ ಬರುವ ಅಧಿಕ ಆದಾಯವು ಅನಾಯಾಸವಾಗಿ ಬರುವ ಆದಾಯ; ಯಾವುದೋ ಒಂದು ಸನ್ನಿವೇಶವು ಬಂದು ಒದಗಿದುದೇ ಅವರ ಆದಾಯವು ವಿಪರೀತವಾಗಿ ಹೆಚ್ಚಲು ಅನುಕೂಲವಾಯಿತು. ಆದ್ದರಿಂದ ಹೀಗೆ ಸಂಪಾದಿಸಿದ ಹೆಚ್ಚು ಆದಾಯದ ಬಹುಭಾಗವನ್ನು ಸರಕಾರಕ್ಕೆ ಪ್ರಜಾಹಿತಕಾರ್ಯಕ್ಕಾಗಿ ಕೊಡಬೇಕಾದುದು ನ್ಯಾಯ. ಹೀಗೆ ತೆರಿಗೆಯನ್ನು ಕೊಡಲು ಅವರು ಸಮರ್ಥರೂ ಹೌದು. ಉದಾಹರಣೆಗಾಗಿ ಕರ್ಪೂರದ ಬೆಲೆ ತೊಲ ೧ಕ್ಕೆ ಎಂಟು ಕಾಸಿನಿಂದ ಈಗ ಕೆಲವು ದಿವಸಗಳಿಂದೀಚೆಗೆ ಎರಡಾಣೆಗೆ ಏರಿತು. (ಯುದ್ಧದ ಕಾಲದಲ್ಲಿ ಇದರ ಬೆಲೆಗೆ ಮಿತಿ ಇಲ್ಲದೆ, ತೊಲಕ್ಕೆ ಎಂಟಾಣೆ ವರೆಗೆ ಹೆಚ್ಚಿತು.) ಕರ್ಪೂರವನ್ನು ಹಿಂದೆ ಹೆಚ್ಚಾಗಿ ಕೊಂಡಿಟ್ಟು ಈಗ ಎರಡಾಣೆಯಂತೆ ಮಾರಿ ಅಧಿಕಲಾಭ ಸಂಪಾದಿಸುವ ವರ್ತಕನು ತನಗೆ ಬರುವ ಲಾಭದ ಹೆಚ್ಚಿನ ಭಾಗವನ್ನು ಪ್ರಜೆಗಳ ಹಿತಕ್ಕಾಗಿ ದುಡಿಯುವ ಸರಕಾರಕ್ಕೆ ಸಲ್ಲಿಸಬೇಕೆಂದು ಕೇಳುವುದರಲ್ಲಿ ಅನ್ಯಾಯವೇನಿದೆ? ಯಾವುದೋ ಒಂದು ಸನ್ನಿವೇಶದ ಮಹಿಮೆಯಿಂದ ಅನಾಯಾಸವಾಗಿ ಬರುವ ಲಾಭದ ಹಣವು ಸಮಾಜಕ್ಕೆ ಸೇರಬೇಕಾದುದು ನ್ಯಾಯ ಎಂಬುದೇ ಈ ತೆರಿಗೆಯನ್ನು ಹಾಕುವುದರಲ್ಲಿನ ತತ್ವವೆನ್ನಬಹುದು.

---

*ಯುದ್ಧ ನಡೆಯುವ ಕಾಲದಲ್ಲಿ ಅದರ ಖರ್ಚಿಗೆ ಬೇಕಾಗುವ ಅಪಾರವಾದ ದ್ರವ್ಯವನ್ನು ಸಂಪಾದಿಸಲು ಸರಕಾರಗಳು ಅನುಸರಿಸಿರುವ ನೀತಿಯನ್ನು ಇಲ್ಲಿ ವಿಮರ್ಶೆ ಮಾಡಿಲ್ಲ. ಯುದ್ಧ ಆಕಸ್ಮಿಕವಾಗಿ ಸಂಭವಿಸುವುದು; ಆದುದರಿಂದ ಆ ವೇಳೆಯಲ್ಲಿ ವಿಧಿಸುವ ತೆರಿಗೆಗಳು, ಸರಕಾರ ಅನುಸರಿಸಿರುವ ನೀತಿ ಇವೆಲ್ಲಾ ನಿಯಮಗಳ ಅಳತೆಗೆ ಸಿಕ್ಕುವುದಿಲ್ಲ.

ಈ ತೆರಿಗೆಯು ೧೯೧೭–೧೭ರಲ್ಲಿ ಮೊದಲು ಜಾರಿಗೆ ಬಂದಿತು. ಕಳೆದ ಮಹಾ ಯುದ್ಧದಲ್ಲಿ ಈ ತೆರಿಗೆಯನ್ನು ಯೂರೋಪಿನ ಕೆಲವು ದೇಶಗಳಲ್ಲಿ ವಿಧಿಸಿದರು. ಕ್ರಮೇಣ ಇತರ ದೇಶಗಳಲ್ಲಿ ಎಂದರೆ ಕೆನಡ, ಸಂಯುಕ್ತ ಸಂಸ್ಥಾನ, ಇಂಡಿಯಾ ಇವೇ ಮೊದಲಾದ ದೇಶಗಳಲ್ಲಿ ಸರಕಾರ ಇದನ್ನು ಜಾರಿಗೆ ತಂದಿತು. ಈ ಬಗೆಯ ತೆರಿಗೆಯನ್ನು ಸಾಧಾರಣ ಕಾಲಗಳಲ್ಲಿ ವಿಧಿಸುವುದು ನ್ಯಾಯವಲ್ಲವೆಂಬುದು ಕೆಲವರ ಮತ. ಮತ್ತೆ ಕೆಲವರು ವರಮಾನದ ತೆರಿಗೆ, ಆಸ್ತಿಪಾಸ್ತಿ ಹಕ್ಕುದಾರಿಯ ತೆರಿಗೆಗಳಂತೆಯೇ ಇದನ್ನು ವಿಧಿಸುವುದು ಯುಕ್ತವೆಂದು ಅಭಿಪ್ರಾಯ ಪಡುತ್ತಾರೆ. ಸರಕಾರಕ್ಕೆ ಬೇಕಾಗುವ ಹಣವನ್ನು ಶೇಖರಿಸಲು ಇದು ಅನುಕೂಲವಾದ ಮಾರ್ಗವೆಂದೂ ತೆರಲು ಸಾಮರ್ಥ್ಯವುಳ್ಳವರಿಂದಲೇ ವಸೂಲಾಗುವ ತೆರಿಗೆಯಾಗಿರುವುದೆಂದೂ ಇದನ್ನು ಸಾಧಾರಣ ಕಾಲದಲ್ಲಿ ವಿಧಿಸುವುದು ನ್ಯಾಯವೆಂಬ ವಾದ ಈಚೀಚೆಗೆ ಬಲವಾಗುತ್ತಿದೆ.

ಇಂಗ್ಲೆಂಡಿನಲ್ಲಿ ಈ ತೆರಿಗೆಯಿಂದ ಬಂದ ಆದಾಯವನ್ನು ಕೆಳಗೆ ಕೊಟ್ಟಿರುತ್ತದೆ:

| ವರ್ಷ | ಸರ್ಕಾರದ ಆದಾಯ (ಅಧಿಕ ಲಾಭದ ತೆರಿಗೆಯಿಂದ) | ಒಟ್ಟು ರಾಜ್ಯಾದಾಯದಲ್ಲಿ ಶೇಕಡ |
|---|---|---|
| ೧೯೧೭ | ೧೪ ಕೋಟಿ ಪೌಂಡು | ೨೪ |
| ೧೯೧೮ | ೨೨ ,, | ೩೦ |
| ೧೯೧೯ | ೨೦.೫ ,, | ೩೨ |
| ೧೯೨೦ | ೨೯ ,, | ೨೨ |

ಈಗ ನಡೆದಿರುವ ಯುದ್ಧದ ಖರ್ಚಿಗೆ ಬೇಕಾಗುವ ಹಣವನ್ನು ಒದಗಿಸುವ ಸಂದರ್ಭದಲ್ಲಿ ಪುನಃ ಈ ತೆರಿಗೆಯು ಪ್ರಪಂಚದ ನಾನಾ ಭಾಗಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದಿದೆ ಲಾಭಗಾರರ ಕೈವಾಡವನ್ನು ಹತೋಟಿಯಲ್ಲಿಡಲು ಈ ತೆರಿಗೆಯಿಂದ ಬಲುಮಟ್ಟಿಗೆ ಸಾಧ್ಯವೆನ್ನಬಹುದು.

## ೪. ಆಮದು ರಫ್ತುಗಳ ಸುಂಕ

ಪರೋಕ್ಷವಾದ ತೆರಿಗೆಗಳಲ್ಲಿ ಹೆಚ್ಚು ದಿವಸಗಳಿಂದಲೂ ಬಳಕೆಯಲ್ಲಿರುವುದು ಆಮದು ರಫ್ತುಗಳ ಮೇಲಿನ ಸುಂಕ. ಇಂಡಿಯಾ ಸರಕಾರದ ತೆರಿಗೆ—ರಾಜ್ಯಾದಾಯದಲ್ಲಿನ ಬಹುಭಾಗ ಇದರಿಂದ ಬರುತ್ತದೆ ಎಂಬುದು ಈ ಕೆಳಗಿನ ಪಟ್ಟಿಯಿಂದ ತಿಳಿಯಬರುತ್ತದೆ:—

| ದೇಶದ ಹೆಸರು | ಈ ಸುಂಕದ ವರಮಾನ | ಒಟ್ಟು ತೆರಿಗೆ ಹುಟ್ಟುವಳಿಯಲ್ಲಿ ಶೇಕಡ |
|---|---|---|
| ಇಂಗ್ಲೆಂಡ್ | ೨೨·೬ ಕೋಟಿ ಪೌಂಡುಗಳು | ೨೪.೫ |
| ಸಂಯುಕ್ತ ಸಂಸ್ಥಾನ | ೩೫·೯ ಕೋಟಿ ಡಾಲರುಗಳು | ೬ |
| ಇಂಡಿಯಾ | ೪೩·೮೧ ಕೋಟಿ ರೂ. ಗಳು | ೩೬ |

ದೇಶದ ರಾಜಕೀಯ ಸರಹದ್ದಿನಿಂದ ಒಳಗೆ ಬರುವ ಮತ್ತು ಹೊರಗೆ ಹೋಗುವ ಸಾಮಾನುಗಳ ಮೇಲೆ ಈ ತೆರಿಗೆಯನ್ನು ವಿಧಿಸುತ್ತಾರೆ. ಈ ಸುಂಕ ದಲ್ಲಿ ಎರಡು ಬಗೆ. ಸರಕಾರಕ್ಕೆ ಹಣವನ್ನು ಗಳಿಸಿಕೊಡುವ ಉದ್ದೇಶದಿಂದಲೇ ವಿಧಾಯಕವಾಗುವ ಸುಂಕ ಒಂದನೆಯದು. ದೇಶೀಯ ಕೈಗಾರಿಕೆಗಳನ್ನು ರಕ್ಷಿಸಿ ಅವು ಬೆಳೆಯುವಂತೆ ಮಾಡುವ ಉದ್ದೇಶವುಳ್ಳ ಸುಂಕ ಎರಡನೆಯದು. ಇದನ್ನು ರಕ್ಷಣಾಸುಂಕವೆಂದು ಕರೆಯಬಹುದು; ಇಲ್ಲಿ ಸರಕಾರಕ್ಕೆ ಬರುವ ಸುಂಕದ ಆದಾಯ ಮುಖ್ಯವಾದುದಲ್ಲ. ಕೈಗಾರಿಕೆಗಳಿಗೆ ಉತ್ತೇಜನ ದೊರೆಯು ವಂತೆ ಮಾಡುವುದೇ ಇದರ ಆಶಯ.

ಕೈಗಾರಿಕೆಯ ಬೆಳವಣಿಗೆಗೂ ತೆರಿಗೆಗೂ ಸಂಬಂಧವುಂಟು. ಉದಾಹರಣೆ ಗಾಗಿ, ನಮ್ಮ ದೇಶದಲ್ಲಿ ರೇಷ್ಮೆ ಕೈಗಾರಿಕೆ ಬೆಳೆಯಬೇಕಾದರೆ ಹೊರಗಿನಿಂದ ಬರುವ ರೇಷ್ಮೆ ಪೈಪೋಟಿಯನ್ನು ತಡೆಗಟ್ಟಬೇಕು. ಎಂದರೆ ಹೊರಗಿನಿಂದ ಬರುವ ರೇಷ್ಮೆ ಪದಾರ್ಥಗಳ ಬೆಲೆ ನಮ್ಮ ದೇಶದಲ್ಲಿ ತಯಾರಾಗುವ ರೇಷ್ಮೆ ಪದಾರ್ಥ ಗಳ ಬೆಲೆಗಿಂತ ಕಡಮೆಯಾಗಿರಕೂಡದು. ಹೊರಗಿನಿಂದ ಆಮದಾಗಿ ಬರುವ ರೇಷ್ಮೆ ಸನಗುಗಳಮೇಲೆ ಸುಂಕವನ್ನು ಹಾಕುವುದರಿಂದ ಅದನ್ನು ಕೊಳ್ಳುವವರು ಹೆಚ್ಚಿನ ಬೆಲೆಯನ್ನು ತೆರಬೇಕಾಗುವುದು. ಸ್ವದೇಶೀ ರೇಷ್ಮೆ ಅದೇ ಬೆಲೆಗೆ ಅಥವಾ ಕಡಮೆ ಬೆಲೆಗೆ ದೊರೆಯುವಾಗ, ಹೆಚ್ಚು ಹಣ ತೆತ್ತು ಪರದೇಶಿ ರೇಷ್ಮೆ ಯನ್ನು ಕೊಳ್ಳುವುದು ಅಪೂರ್ವ. ಆದ್ದರಿಂದ ಪರದೇಶಿ ರೇಷ್ಮೆಯ ಆಮದು ಕಡಮೆಯಾಗಿ ಸ್ವದೇಶಿ ರೇಷ್ಮೆಗೆ ಉತ್ತೇಜನ ದೊರೆಯುತ್ತದೆ. ಹೀಗೆ ಕೈಗಾರಿಕೆ ಗಳನ್ನು ಊರ್ಜಿತಗೊಳಿಸಲು ಸರಕಾರ ಸುಂಕದ ಈ ನೀತಿಯನ್ನು ಉಪಯೋಗಿ ಸುವುದು ಈಚೆಗೆ ಬಹು ವಾಡಿಕೆಯಾಗಿದೆ.

ಇಂಡಿಯಾ ದೇಶದಲ್ಲಿ ಮೇಲ್ಕಂಡ ಎರಡು ಬಗೆಯ ಸುಂಕಗಳೂ ಉಂಟು. ಕಬ್ಬಿಣ, ಉಕ್ಕು, ರೇಷ್ಮೆ, ಹತ್ತಿ, ಸಕ್ಕರೆ ಇವೇ ಮೊದಲಾದುವುಗಳ ಮೇಲೆ ರಕ್ಷಣಾ ಸುಂಕವನ್ನು ಹಾಕಿದ್ದಾರೆ. ಹೊರದೇಶಗಳಿಂದ ನಾವು ತರಿಸಿಕೊಳ್ಳುವ ನೂರಾರು ಸಾಮಾನುಗಳ ಮೇಲೆ ಮೊದಲನೆಯ ಬಗೆಯ ಸುಂಕವನ್ನು ಹಾಕಿದ್ದಾರೆ. ಮೇಲಿನ ಪಟ್ಟಿಯಲ್ಲಿ ಕಾಣಿಸಿರುವ ಸುಂಕದ ಮೊತ್ತದ ಬಹುಭಾಗ ಸರಕಾರಕ್ಕೆ ಬಂದಿರುವುದು ಈ ಬಗೆಯ ಸುಂಕದಿಂದ. ನಮ್ಮ ದೇಶದಿಂದ ರಫ್ತು ಮಾಡುವ ಸಣಬು, ಟೀಸೊಪ್ಪು ಮೊದಲಾದ ಕೆಲವು ಸಾಮಾನುಗಳಮೇಲೂ ಈ ಬಗೆಯ ಸುಂಕವುಂಟು. ರಕ್ಷಣಾ ಸುಂಕದ ದರ ಮೊದಲನೆಯ ಸಾಮಾನ್ಯ ಸುಂಕ ಕ್ಕಿಂತ ಹೆಚ್ಚಾಗಿರುತ್ತದೆ, ಆಮದು ರಫ್ತು ಸರಕುಗಳ ಬೆಲೆಯನ್ನು ಅನುಸರಿಸಿ ಸುಂಕವನ್ನು ವಿಧಿಸುವುದೊಂದು ಕ್ರಮ; ಸರಕಿಗಿಷ್ಟೆಂದು ನಿರ್ಧರಮಾಡಿ ಸುಂಕ ವನ್ನು ವಿಧಿಸುವುದು ಮತ್ತೊಂದು ಕ್ರಮ.

ಈ ತೆರಿಗೆಯನ್ನು ಮೊದಲು ಸರಕಾರದ ಬೊಕ್ಕಸಕ್ಕೆ ಸಲ್ಲಿಸುವವರು ಮಂಡಿ ವ್ಯಾಪಾರಿಗಳು ಮತ್ತು ವರ್ತಕರು. ತಾವು ಸಾಮಾನುಗಳನ್ನು ಕೊಂಡಾಗ ಕೊಟ್ಟ ತೆರಿಗೆಯನ್ನು ಸಾಮಾನುಗಳ ಬೆಲೆಯೊಂದಿಗೆ ಸೇರಿಸಿ ಮಾರುವುದರಿಂದ ತಾವು ತೆತ್ತ

ಹಣವನ್ನು ಕಾಲಕ್ರಮದಲ್ಲಿ ವಸೂಲ್ಮಾಡಿಕೊಳ್ಳುವರು. ಆದುದರಿಂದ ತೆರಿಗೆಯನ್ನು ಕೊಡುವವರು ನಿಜವಾಗಿ ಪದಾರ್ಥವನ್ನು ಕೊಳ್ಳುವವರೇ ಎಂದು ತಿಳಿಯಬೇಕು. ಆದುದರಿಂದಲೇ ಇದನ್ನು ಪರೋಕ್ಷವಾದ ತೆರಿಗೆ ಎಂದು ಮೊದಲು ಕರೆದುದು.

## ೫. ಅಬ್ಕಾರಿ ಸುಂಕ

ಆಮದು ರಫ್ತುಗಳಮೇಲೆ ಹೇರುವ ಸುಂಕದಂತೆ ಅಬ್ಕಾರಿ ಸುಂಕವೂ ಒಂದು ಪರೋಕ್ಷವಾದ ತೆರಿಗೆ. ಒಂದು ದೇಶದಲ್ಲಿಯೇ ತಯಾರಾಗಿ ಅಲ್ಲಿಯೇ ಉಪಯೋಗಿಸಲ್ಪಡುವ ಪದಾರ್ಥಗಳಮೇಲೆ ಸರಕಾರವು ಹಾಕುವ ಸುಂಕವನ್ನು ಅಬ್ಕಾರಿ ಸುಂಕವೆನ್ನಬಹುದು. ಹಿಂದೆ ವಿವರಿಸಿದ ಸುಂಕವನ್ನು ಹೊರಸುಂಕವೆಂದೂ ಅಬ್ಕಾರಿ ತೆರಿಗೆಯನ್ನು ಒಳಸುಂಕವೆಂದೂ ವಿಂಗಡಿಸಬಹುದು.

ಹೆಂಡ, ಸಾರಾಯಿ, ಅಫೀಮು ಮೊದಲಾದ ಮಾದಕ ದ್ರವ್ಯಗಳೂ ಬೆಂಕಿ ಕಡ್ಡಿ, ಬೀಡಿ, ಉಪ್ಪು, ಸಕ್ಕರೆ ಮೊದಲಾದ ಪದಾರ್ಥಗಳೂ ಇಂಡಿಯಾ ದೇಶದಲ್ಲಿಯೇ ತಯಾರಾಗುತ್ತವೆ. ಹೊರಗಿನಿಂದ ಆಮದಾಗುವ ಸಕ್ಕರೆಯ ಮೇಲೆ ರಕ್ಷಣಾ ಸುಂಕವನ್ನು ಹಾಕಿರುತ್ತಾರೆ; ನಮ್ಮಲ್ಲಿ ತಯಾರಾಗುವ ಸಕ್ಕರೆಯ ಮೇಲೆ ಅಬ್ಕಾರಿ ಸುಂಕವನ್ನು ವಿಧಿಸಿರುತ್ತಾರೆ. ಹೊರಗಿನಿಂದ ಸಕ್ಕರೆ ಬಾರದೆ ಇದ್ದರೆ ಸರಕಾರಕ್ಕೆ ತೆರಿಗೆ ವರಮಾನ ಕಡಮೆಯಾಗುವುದಿಲ್ಲವೇ ಎಂದು ಕೇಳಬಹುದು. ಈ ನಷ್ಟ ಕೇವಲ ತಾತ್ಕಾಲಿಕವಾದದ್ದು. ದೇಶದಲ್ಲಿ ಸಕ್ಕರೆ ಕೈಗಾರಿಕೆ ಅಭಿವೃದ್ಧಿಹೊಂದಿದ ಮೇಲೆ ಅದರಮೇಲೆ ಅಬ್ಕಾರಿ ಸುಂಕವನ್ನು ಹಾಕಿ ಸರಕಾರಕ್ಕೆ ತೆರಿಗೆ ಆದಾಯದಲ್ಲಿ ಉಂಟಾದ ನಷ್ಟವನ್ನು ಸರಿಪಡಿಸಲು ಸಾಧ್ಯವಾಗುತ್ತದೆ.

ಅಬ್ಕಾರಿ ಸುಂಕವನ್ನು ಮುಖ್ಯವಾಗಿ ಎರಡು ಉದ್ದೇಶಗಳಿಗಾಗಿ ವಿಧಿಸುವುದುಂಟು. ಸರಕಾರದ ಖಜಾನೆಗೆ ಹಣವನ್ನು ಶೇಖರಿಸಬೇಕೆಂಬ ಉದ್ದೇಶವೇನೋ ಮೊದಲನೆಯದಾಗಿ ಇದ್ದೇ ಇದೆ. ಮಾದಕ ಪದಾರ್ಥಗಳ ಉಪಯೋಗವನ್ನು ಕಡಮೆ ಮಾಡುವ ಉದ್ದೇಶ ಎರಡನೆಯದು. ಹೆಂಡ, ಸಾರಾಯಿ, ಅಫೀಮು ಮೊದಲಾದ ಮಾದಕ ಪದಾರ್ಥಗಳ ಸೇವನೆಯನ್ನು ಹತೋಟಿಯಲ್ಲಿಡುವುದಕ್ಕಾಗಿ ಹೆಚ್ಚಿನ ತೆರಿಗೆಯನ್ನು ಹೇರಿ ಅವುಗಳ ಬೆಲೆಯನ್ನು ಹೆಚ್ಚಿಸಿಬಿಟ್ಟಿದ್ದಾರೆ. ಇವುಗಳ ತಯಾರಿಕೆ ಮಾರಾಟಗಳು ಕೂಡ ಸರಕಾರದ ಹತೋಟಿಯಲ್ಲಿರುವುದೂ ಪರದೇಶದಿಂದ ಆಮದಾಗಿ ಬರುವ ಮಾದಕ ದ್ರವ್ಯಗಳ ಮೇಲೆ ಹೆಚ್ಚಿನ ದರದಲ್ಲಿ ಸುಂಕವನ್ನು ಹೇರುವುದೂ ಇದಕ್ಕಾಗಿಯೇ. ಈ ಬಗೆಯ ಅಬ್ಕಾರಿ ಸುಂಕವನ್ನು ನಿರೋಧಕ ಅಬ್ಕಾರಿ ಸುಂಕ (Restrictive Excise) ಎಂದು ಕರೆಯಬಹುದು.

ಉಪ್ಪು, ಸಕ್ಕರೆ, ಬೆಂಕಿಕಡ್ಡಿ ಮೊದಲಾದ ಸರಕುಗಳ ಮೇಲೆ ಅಬ್ಕಾರಿ ಸುಂಕ ಹಾಕುವುದು ಈ ವಸ್ತುಗಳ ಸೇವನೆಯನ್ನು ತಗ್ಗಿಸಬೇಕೆಂಬ ಉದ್ದೇಶದಿಂದಲ್ಲ. ಇವು ಪ್ರತಿಯೊಬ್ಬನಿಗೂ ಬೇಕಾದ ವಸ್ತುಗಳೆಂದು ಸರಕಾರಕ್ಕೆ ಗೊತ್ತು. ಇದನ್ನು ತಿಳಿದುಕೊಂಡೇ, ತೆರಿಗೆ ರಾಜ್ಯಾದಾಯವನ್ನು ಪ್ರಜೆಗಳಿಗೆ ಹೆಚ್ಚಿನ ತೊಂದರೆಯಿಲ್ಲದೆ ಸುಲಭ ರೀತಿಯಲ್ಲಿ ಹೆಚ್ಚಿಸಿಕೊಳ್ಳಲು ಇದು ಅನುಕೂಲವಾದ ಮಾರ್ಗವೆಂದು ಅಬ್ಕಾರಿ

ಸುಂಕವನ್ನು ಈ ಸಾಮಾನುಗಳ ಮೇಲೆ ಹಾಕುವುದು. ಜನಗಳಿಗೆ ಅನಿವಾರ್ಯವಾಗಿ ಬೇಕಾಗುವ ವಸ್ತುಗಳನ್ನೇ ಚುನಾಯಿಸಿ ಅವುಗಳ ಮೇಲೆ ಮೊದಲನೆಯ ಬಗೆಯ ಅಬ್ಕಾರಿ ಸುಂಕವನ್ನು ವಿಧಿಸುವರು. ಹೀಗೆ ಮಾಡುವುದರಲ್ಲಿ ತೆರಿಗೆಯ ದರ ಮಾತ್ರ ತೀರ ಅಲ್ಪವಾಗಿರಬೇಕೆಂಬ ತತ್ವವನ್ನು ಅನುಸರಿಸಬೇಕು. ಹಾಗೆ ಕಡಮೆಯಾಗಿಲ್ಲದಿದ್ದರೆ ಜನರು ಬಹು ಕಷ್ಟಕ್ಕೆ ಸಿಕ್ಕಬೇಕಾಗುತ್ತದೆ. ಆವಶ್ಯಕವಾಗಿ ಬೇಕಾಗುವ ಪದಾರ್ಥಗಳ ಸೇವನೆಗೆ ಕೂಡ ಅಡ್ಡಿ ಆತಂಕಗಳು ಬಂದು, ತೆರಿಗೆ ಅಷ್ಟು ಫಲದಾಯಕವಾಗದೆ ಹೋಗುವ ಸಂಭವವೂ ಒದಗಬಹುದು. ಸಕ್ಕರೆಯ ಮೇಲಿನ ಸುಂಕ ಬಹಳ ಹೆಚ್ಚಿದರೆ ಸಕ್ಕರೆಯನ್ನೇ ಬಿಟ್ಟು ಬೆಲ್ಲವನ್ನು ಉಪಯೋಗಿಸಲು ಆರಂಭಿಸುವರು. ಇದರಿಂದ ಸಕ್ಕರೆ ಕೈಗಾರಿಕೆಗೆ ನಷ್ಟವಾಗುವುದು; ಕಬ್ಬು ಬೆಳೆದ ರೈತರಿಗೂ ತೊಂದರೆಯುಂಟಾಗಬಹುದು. ನಿರೋಧಕ ಅಬ್ಕಾರಿ ಸುಂಕದ ದರ ಮಾತ್ರ ಹೆಚ್ಚಾಗಿಯೇ ಇರಬೇಕು. ಮಾದಕ ದ್ರವ್ಯಗಳ ಉಪಯೋಗವನ್ನು ತಗ್ಗಿಸಬೇಕೆಂಬುದೇ ಆ ತೆರಿಗೆಯ ಮುಖ್ಯ ಉದ್ದೇಶವಾಗಿರುವುದರಿಂದ, ಆ ಪದಾರ್ಥಗಳ ಬೆಲೆಯನ್ನು ಬಹುಮಟ್ಟಿಗೆ ಹೆಚ್ಚಿಸಿ, ಸಾಮಾನ್ಯರಿಗೆ ಕೊಳ್ಳಲು ಅಸಾಧ್ಯವಾಗಿರುವಂತೆ ಮಾಡಬೇಕು. ಇತರ ಸುಂಕಗಳಂತೆ ಅಬ್ಕಾರಿ ಸುಂಕವನ್ನೂ ಆ ಪದಾರ್ಥಗಳನ್ನು ಕೊಳ್ಳುವವರೇ ಪರೋಕ್ಷವಾಗಿ ಸರಕಾರಕ್ಕೆ ಕೊಡುತ್ತಾರೆ. ಮೊದಲು ಸುಂಕ ತೆತ್ತವರು ಕ್ರಮೇಣ ಅದನ್ನು ಇತರರಿಗೆ ವರ್ಗ ಮಾಡುವರು.

## ೬. ವ್ಯಾಪಾರ ತೆರಿಗೆ

ಇದೂ ಪರೋಕ್ಷವಾದ ತೆರಿಗೆಯೇ. ಈ ತೆರಿಗೆಯು ಯೂರೋಪು (ಇಂಗ್ಲೆಂಡ್ ಹೊರತಾಗಿ) ಮತ್ತು ಅಮೆರಿಕಾ ಖಂಡಗಳ ಹಲವು ದೇಶಗಳಲ್ಲಿ ಪ್ರಚಾರವಾಗಿ ಹೆಚ್ಚು ಪ್ರಾಮುಖ್ಯವನ್ನು ಪಡೆಯುತ್ತಿದೆ. ಸುಂಕದ ಮತ್ತು ವರಮಾನದ ತೆರಿಗೆಗಳ ಮೂಲಕ ಎಷ್ಟು ಆದಾಯ ಬರುವುದೋ ಅಷ್ಟು ಆದಾಯ ಈ ವ್ಯಾಪಾರ ತೆರಿಗೆಯ ಮೂಲಕ ಸರಕಾರಗಳಿಗೆ ಬರುತ್ತಿದೆ. ಕೆಲವು ದೇಶಗಳಲ್ಲಂತೂ ಈ ತೆರಿಗೆಯ ಆದಾಯ ಸುಂಕ ವರಮಾನ ತೆರಿಗೆಗಳಿಂದ ಬರುವ ಆದಾಯವನ್ನು ಮೀರಿಸಿದೆ. ವ್ಯಾಪಾರ ತೆರಿಗೆಯಿಂದ ಹೆಚ್ಚಿನ ಹುಟ್ಟುವಳಿಯನ್ನು ಸರಕಾರಗಳು ಪಡೆಯುತ್ತಿವೆಯೆಂಬುದನ್ನು ಇಲ್ಲಿ ಕೊಟ್ಟಿರುವ ಪಟ್ಟಿಯಲ್ಲಿ ಕಾಣಬಹುದು :—

| ದೇಶ | ವರ್ಷ | ವರಮಾನದ ತೆರಿಗೆ | ಸುಂಕದಿಂದ ಬಂದದ್ದು | ವ್ಯಾಪಾರದ ತೆರಿಗೆಯಿಂದ | ಒಟ್ಟು |
|---|---|---|---|---|---|
| ಫ್ರಾನ್ಸ್ ... | ೧೯೩೪ | ೧೯.೫% | ೧೫.೧% | ೧೬.೫% | ೫೨.೧% |
| ಜರ್ಮನಿ ... | ೧೯೩೨-೩೩ | ೯.೪% | ೨೨.೩% | ೧೯.೧ | ೫೦.೮% |
| ಹಂಗೆರಿ ... | ೧೯೩೨-೩೩ | ೧೦.೬% | ೪.೮% | ೧೨.೦% | ೨೮.೩% |
| ಜೆಕೊಸ್ಲೊವೇಕಿಯಾ | ೧೯೩೩ | ೧೪.೬% | ೬.೫% | ೨೩.೦% | ೪೪.೧% |
| ಆಸ್ಟ್ರಿಯಾ ... | ೧೯೩೪ | ೧೯.೪% | ೧೬.೦% | ೨೦.೨% | ೫೬.೬% |

ಇಂಡಿಯಾ ದೇಶದಲ್ಲಿ ೧೯೩೭ ರಿಂದ ಈಚೆಗೆ, ಪ್ರಾಂತ ಸ್ವಾತಂತ್ರ್ಯ ದೊರೆತ ಮೇಲೆ, ಪ್ರಾಂತ ಸರಕಾರಗಳ ಕಾರ್ಯ ಕಲಾಪಗಳು ವಿಶೇಷವಾಗುತ್ತ ಬಂದಿವೆ. ಈ ಕಾರ್ಯಗಳಿಗಾಗಿ ಪ್ರತಿಯೊಂದು ಪ್ರಾಂತವೂ ತನ್ನ ಹುಟ್ಟುವಳಿಯನ್ನು ಹೆಚ್ಚಿಸಿ ಕೊಳ್ಳಬೇಕಾಗಿದೆ. ಇದಕ್ಕಾಗಿ ಪ್ರಾಂತ ಸರಕಾರಗಳು ಹೊಗೆಸೊಪ್ಪು, ಪೆಟ್ರೋಲು, ವಿದ್ಯುಚ್ಛಕ್ತಿ, ಜೀವನೋಪಾಯ ವೃತ್ತಿಗಳು—ಇವುಗಳ ಮೇಲೆ ತೆರಿಗೆಯನ್ನು ವಿಧಿಸುತ್ತಿವೆ. ಹಾಗೆಯೇ ಇಂಡಿಯಾ ಸರಕಾರವೂ ತನ್ನ ಆಯ ವ್ಯಯವನ್ನು ಸರಿತೂಗಿಸಿ ಕೊಳ್ಳುವುದಕ್ಕಾಗಿ ಹೊಸ ತೆರಿಗೆಗಳನ್ನು ವಿಧಿಸಲು ಪ್ರಯತ್ನಿಸುತ್ತಿದೆ.

ಮದರಾಸು ಸರ್ಕಾರ ವ್ಯಾಪಾರ ತೆರಿಗೆಯನ್ನು ವಿಧಿಸಬೇಕೆಂದು ಪ್ರಯತ್ನ ಮಾಡಿ ಅಲ್ಲಿನ ಶಾಸನ ಸಭೆಯ ಒಪ್ಪಿಗೆಯನ್ನು ಪಡೆದ ವಿಷಯ ಎಲ್ಲರಿಗೂ ತಿಳಿದಿದೆ. ಈ ತೆರಿಗೆ ಪ್ರಜಾ ಸಮುದಾಯಕ್ಕೆಲ್ಲಾ ಅನ್ವಯಿಸುವುದರಿಂದ ಇದರ ದರ ಕಡಿಮೆಯಾಗಿದ್ದರೂ ಹೆಚ್ಚು ಆದಾಯ ಬರುತ್ತದೆ. ವ್ಯಾಪಾರ ಹೆಚ್ಚಿದಂತೆಲ್ಲಾ ವರಮಾನವೂ ಹೆಚ್ಚುತ್ತದೆ.

ವ್ಯಾಪಾರ ತೆರಿಗೆಯನ್ನು ಎಲ್ಲ ಪದಾರ್ಥಗಳ ಮೇಲೂ ಎಲ್ಲ ವರ್ತಕರ ಮೇಲೂ ವಿಧಿಸಬಹುದು ; ಅಥವಾ ಸಣ್ಣ ವ್ಯಾಪಾರಗಳಿಗೂ ಅತ್ಯಾವಶ್ಯಕವಾದ ಪದಾರ್ಥಗಳಿಗೂ ವೃತ್ತಿಗಳಿಗೂ ಈ ತೆರಿಗೆ ಅನ್ವಯಿಸದಂತೆ ಮಾಡಬಹುದು. ಎಲ್ಲರೂ ಉಪಯೋಗಿಸುವ ಪದಾರ್ಥಗಳ ಮೇಲೆ ಕಡಮೆ ದರದ ವ್ಯಾಪಾರದ ತೆರಿಗೆಯನ್ನು ವಿಧಿಸುವುದೂ, ಭೋಗ ಸಾಮಗ್ರಿಗಳ ಮೇಲೂ ಅತಿ ಬೆಲೆಯುಳ್ಳ ಪದಾರ್ಥಗಳ ಮೇಲೂ ಹೆಚ್ಚಿನ ದರದ ತೆರಿಗೆಗಳನ್ನು ವಿಧಿಸುವುದೂ ವಾಡಿಕೆ.

ಜೀವನಕ್ಕೆ ಆವಶ್ಯಕವಾದ ಪದಾರ್ಥಗಳ ಮೇಲೆ ತೆರಿಗೆಗಳನ್ನು ಹೇರಬಾರದೆಂಬ ನಿಯಮಕ್ಕೆ ಇದು ವಿರುದ್ಧವಾದುದೇನೋ ಹೌದು. ಆದರೆ ತೆರಿಗೆಯ ದರ ತೀರ ಅಲ್ಪವಾಗಿರುವುದರಿಂದ ಇದರಿಂದ ಹೆಚ್ಚಿನ ಕೆಡುಕೇನೂ ಆಗಲಾರದು. ಹೆಚ್ಚಿನ ತೊಂದರೆಯಿಲ್ಲದೆ ಅಧಿಕ ವರಮಾನವನ್ನು ತರುವ ವ್ಯಾಪಾರ ತೆರಿಗೆ ಜನಪ್ರಿಯವಾಗುತ್ತದೆ.

## ಭೂ ಕಂದಾಯ

ಸರಕಾರದ ಒಟ್ಟು ಹುಟ್ಟುವಳಿಯಲ್ಲಿ ಒಂದು ಪ್ರಧಾನವಾದ ಅಂಶ ಭೂ ಕಂದಾಯದಿಂದಲೇ ಬರುತ್ತದೆ. ಭೂ ಕಂದಾಯ ತೆರಿಗೆಯೇ ಅಲ್ಲವೇ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿರುವುದರಿಂದ, ಇದನ್ನು ಪ್ರತ್ಯಕ್ಷ ಮತ್ತು ಪರೋಕ್ಷ ತೆರಿಗೆಗಳ ಬಾಬುಗಳಲ್ಲಿ ಸೇರಿಸದೆ ಇಲ್ಲಿ ಪರ್ಯಾಲೋಚಿಸಲಾಗಿದೆ.

ಭೂ ಕಂದಾಯ ಬಹುಕಾಲದಿಂದಲೂ ಸರಕಾರದ ಹಣಕಾಸಿನ ವ್ಯವಸ್ಥೆಯಲ್ಲಿ ಪ್ರಾಮುಖ್ಯವನ್ನು ಪಡೆದಿದೆ. ಈ ಬಾಬಿನಿಂದ ಸರಕಾರಕ್ಕೆ ಬರುವ ಆದಾಯ ಬಹು ಮುಖ್ಯವಾದುದು ಮಾತ್ರವೇ ಅಲ್ಲದೆ, ಇದನ್ನು ಸರಕಾರ ತಾನು ಮಾಡುವ ಪ್ರಜಾಸೇವೆಗಾಗಿ ಬಲಾತ್ಕಾರವಾಗಿ ವಸೂಲ್ಮಾಡುವ ತೆರಿಗೆಯೆನ್ನಬಹುದು. ಪೂರ್ವಕಾಲದಲ್ಲಿ ದೊರೆಗಳಿಗೆ ತಮ್ಮ ರಾಜ್ಯಕ್ಕೆ ಸೇರಿದ ಲಕ್ಷಾಂತರ ಎಕರೆಗಳ

ಜಮೀನು ಭೂ ರೂಪದ ಆಸ್ತಿಯಾಗಿತ್ತು. ಅದರಿಂದ ಬಂದ ಹುಟ್ಟುವಳಿಯಿಂದ ತಾವು ನಡಸಬೇಕಾದ ಕೆಲಸಗಳನ್ನು ಅವರು ಸರಾಗವಾಗಿ ನಡಸುತ್ತಿದ್ದರು. ಆಗ ತೆರಿಗೆಯ ಮೂಲಕ ಹಣ ವಸೂಲ್ಮಾಡುವ ಆವಶ್ಯಕತೆಯೂ ಇರಲಿಲ್ಲ. ಈಗಲೂ ಕೂಡ ಅರಣ್ಯ ಮೊದಲಾದುವುಗಳ ಮೇಲಣ ಸ್ವಾಮ್ಯ ರಾಜರಿಗೇ ಸೇರಿರುವುದು ಬಹುಶಃ ಮೇಲಿನ ಭಾವನೆಯ ಅವಶೇಷವೆನ್ನಬಹುದು. ಕೆಲವು ದೇಶಗಳಲ್ಲಂತೂ, ಅಲ್ಲಿಯ ಎಲ್ಲ ಭೂಮಿಯ ಸ್ವಾಮ್ಯವೂ ದೊರೆಗೇ ಸೇರಿದುದು. ಇತರ ದೇಶಗಳಲ್ಲಿ ಸಾಗುವಳಿಯಾಗುತ್ತಿರುವ ಬಹು ಭಾಗದ ಜಮೀನು ಪ್ರಜೆಗಳ ಕೈಲಿದೆ. ಅದರ ಆಡಳಿತ, ಅನುಭವ ಪ್ರಜೆಗಳಿಗೇ ಸೇರಿದ್ದರೂ ಅದರ (ಅಂತಿಮ) ಸ್ವಾಮ್ಯ, ರಾಜರ ದೆಂಬ ಭಾವನೆಯಂತೂ ಇದ್ದೇ ಇದೆ. ಪರಿಸ್ಥಿತಿ ಹೀಗಿರುವುದರಿಂದ ಪ್ರಜೆಯು ಕೊಡುವ ಭೂಕಂದಾಯ ತೆರಿಗೆಯೆ? ಅಥವಾ ತಾನೂ ಅದರಿಂದ ಅನುಭವಿಸುವ ಫಲಕ್ಕೆ ಬದಲಾಗಿ ಕೊಡುವ ಬಾಡಿಗೆಯೆ? ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಇದು ತೊಡಕಾದ ಪ್ರಶ್ನೆ. ವಿದ್ವಾಂಸರು ಈ ವಿಷಯದಲ್ಲಿ ಏಕಮುಖವಾದ ಅಭಿಪ್ರಾಯಕ್ಕೆ ಇನ್ನೂ ಬಂದಿಲ್ಲ.

ಹೀಗೆ ಜಮೀನಿನ ಮೇಲೆ ವರ್ಷಂಪ್ರತಿ ಭೂಕಂದಾಯವನ್ನು ಅನಾದಿ ಕಾಲ ದಿಂದಲೂ ದೊರೆಗಳು ವಸೂಲ್ಮಾಡುತ್ತಿದ್ದಾರೆ. ಪ್ರಾಚೀನ ಭಾರತದಲ್ಲಿ ಬೆಳೆಯ ಆರರಲ್ಲಿ ಒಂದು ಭಾಗವನ್ನು ದೊರೆ ತೆಗೆದುಕೊಳ್ಳುತ್ತಿದ್ದನೆಂಬುದು ನಾವೆಲ್ಲರೂ ತಿಳಿದ ಮಾತು. ಮಹಮದೀಯರ ಪ್ರಭುತ್ವ ಇಲ್ಲಿ ತಲೆದೋರಿದ ಮೇಲೆ ಅವರು ಜಮೀನಿನ ಬೆಳೆಯಲ್ಲಿ ಮೂರರಲ್ಲೊಂದು ಭಾಗವನ್ನು ವಸೂಲ್ಮಾಡಲಾರಂಭಿಸಿದರು. ಹೀಗೆಯೇ ಈ ಭೂಕಂದಾಯದ ವಿಷಯದಲ್ಲಿ ಕಾಲಕ್ರಮೇಣ ಅನೇಕ ಮಾರ್ಪಾಟುಗಳಾಗಿ, ಕೊನೆಗೆ ಬೆಳೆಯ ಭಾಗವನ್ನು ಸರಕಾರದವರು ತೆಗೆದುಕೊಳ್ಳುವ ಬದಲು ಹಣದ ಮೂಲಕ ವಸೂಲ್ಮಾಡುವ ಪದ್ಧತಿ ನೆಲೆಗೊಂಡಿತು. ಈ ಭೂಕಂದಾಯದಿಂದ ಪ್ರತಿ ದೇಶದಲ್ಲಿಯೂ, ಸ್ಥಳೀಯ ಸರಕಾರವಾಗಲಿ, ಕೇಂದ್ರ ಸರಕಾರವಾಗಲಿ, ಸರಕಾರದ ಆದಾಯದಲ್ಲಿನ ಬಹು ಭಾಗವನ್ನು ಪಡೆಯುತ್ತದೆ. ಆಸ್ಟ್ರಿಯಾ ಮತ್ತು ಸ್ವಿಟ್ಸರ್‌ಲೆಂಡ್ ದೇಶಗಳಲ್ಲಿ ಸ್ಥಳೀಯ ಸರಕಾರದ ಪೂರ್ತ ವರಮಾನ ಭೂಕಂದಾಯದಿಂದಲೇ ಬರುತ್ತದೆ. ರೈತರ ಅಥವಾ ಜಮೀನ್ದಾರರ ಸಾಗುವಳಿ ಪ್ರಯತ್ನವನ್ನು ದೃಷ್ಟಿಗೆ ತೆಗೆದುಕೊಳ್ಳದೆ, ಕೇವಲ ಜಮೀನಿನ ಬೆಳೆಯನ್ನೇ ಆಧಾರ ವಾಗಿಟ್ಟುಕೊಂಡು ಅಲ್ಲಿಯವರು ಭೂಕಂದಾಯವನ್ನು ವಿಧಿಸಿದ್ದಾರೆ.

ಮೈಸೂರು ದೇಶದಲ್ಲಿ ಜಮೀನಿನ ಮೂಲಕ ಐದಾರು ವಿಧವಾಗಿ ಸರಕಾರಕ್ಕೆ ವರಮಾನ ಬರುತ್ತದೆ :

೧. ಸರಕಾರದ ಜಮೀನುಗಳನ್ನು ಮಾರುವುದು (ಹರಾಜು ಮೊದಲಾದ ರೀತಿಯಲ್ಲಿ).

೨. ರೈತವಾರಿ ಪದ್ಧತಿ ಪ್ರಕಾರ ಅನುಭವಿಸುತ್ತಿರುವ ಜಮೀನಿನ ಮೇಲಿನ ಕಂದಾಯ.

೩. ಜೋಡಿ ಮತ್ತು ಇನಾಂ ಜಮೀನುಗಳ ಮೇಲಣ ಕ್ವಿಟ'ರೆಂಟ್ ಅಥವಾ ಗುತ್ತಿಗೆ ಮೊಬಲಗು.

೪. ಸರಕಾರಕ್ಕೆ ಸೇರಿದ (ಗೋಮಾಳದ) ಜಮೀನಿನಲ್ಲಿರುವ ಹುಲ್ಲು, ಮರಗಳು, ಕಲ್ಲು ಮತ್ತು ಮಣ್ಣು ಇವುಗಳನ್ನು ಮಾರುವುದು.

೫. ಸಾಗುವಳಿ ಜಮೀನನ್ನು ಬೇರೆ ವಿಧವಾಗಿ ಉಪಯೋಗಿಸಿಕೊಂಡರೆ ವಿಧಿಸಲಾಗುವ ಜುಲ್ಮಾನೆ.

೬. ಸ್ಥಳೀಯ ಸಂಸ್ಥೆಗಳ ಉಪಯೋಗಕ್ಕಾಗಿ ಆಗಿಂದಾಗ್ಗೆ ಜಮೀನಿನ ಮೇಲೆ ಹಾಕುವ ಸೆಸ್ಸುಗಳು.

ಇತರ ದೇಶಗಳಲ್ಲಿನ ಭೂಕಂದಾಯದ ವ್ಯವಸ್ಥೆ ಬೇರೆ ತೆರನಾಗಿದೆ. ಅಲ್ಲಿ ಭೂಕಂದಾಯವನ್ನು ವಸೂಲ್ಮಾಡುವುದರ ಜತೆಗೆ ಭೂಮ್ಯುತ್ಪನ್ನ ವಸ್ತು ಬೆಳೆಗಳ ಮೇಲೆಯೂ ಸಹ ಜನರು ತೆರಿಗೆಯನ್ನು ಸರಕಾರಕ್ಕೆ ಕೊಡಬೇಕಾಗುವುದು. ಆಸ್ಟ್ರಿಯಾ ಮತ್ತು ಸ್ವಿಟ್ಸರ'ಲೆಂಡ' ದೇಶಗಳಲ್ಲಿ ಮೊದಲು ಜಮೀನಿನ ಬೆಲೆಯನ್ನು ನಿರ್ಧರಿಸಿ, ಆ ಬೆಲೆಗನುಸಾರವಾಗಿ ತೆರಿಗೆಯನ್ನು ವಸೂಲ್ಮಾಡುವುದಲ್ಲದೆ, ಆ ಜಮೀನನ್ನು ಅನುಭವಿಸುತ್ತಿರುವವರ ಪ್ರಯತ್ನಗಳ ಪರಿಣಾಮವಾಗಿ ಉಂಟಾಗುವ ಬೆಳೆಯ ಫಲದ ಮೇಲೂ ಆದಾಯದ ತೆರಿಗೆಯಂತೆ ತೆರಿಗೆಯನ್ನು ವಿಧಿಸುತ್ತಾರೆ. ಜಪಾನಿನಲ್ಲಿಯೂ ಜಮೀನಿನ ಬೆಲೆಯು ಆಧಾರದ ಮೇಲೆಯೇ ಭೂಕಂದಾಯವನ್ನು ವಿಧಿಸುತ್ತಾರೆ. ವಾಸಕ್ಕೆ ಉಪಯೋಗಿಸುವ ಜಮೀನಿನ ಮೇಲೆ ಶೇ. ೨½, ಸಾಗುವಳಿ ಜಮೀನಿನ ಮೇಲೆ ಶೇ. ೫½, ಹೀಗೆ ಕಂದಾಯವನ್ನು ಅಲ್ಲಿ ವಿಧಿಸಿದ್ದಾರೆ. ಇದರ ಜತೆಗೆ, ಆ ಜಮೀನಿನಲ್ಲಿ ಹಿಂದಣ ಮೂರು ವರ್ಷಗಳಲ್ಲಿ ಬಂದಿರುವ ಲಾಭವೇನು ಎಂಬುದನ್ನು ತಿಳಿದುಕೊಂಡು ಅದರಮೇಲೆ ಆದಾಯದ ತೆರಿಗೆಯನ್ನು ಅಲ್ಲಿ ವಿಧಿಸಿದ್ದಾರೆ. ಇಂಗ್ಲೆಂಡಿನಲ್ಲಿ ಭೂಕಂದಾಯದ ಪದ್ಧತಿ ಇನ್ನೊಂದು ತೆರನಾಗಿದೆ. ಒಬ್ಬ ಪ್ರಜೆ ಅನುಭವಿಸುತ್ತಿರುವ ಜಮೀನು ಅವನ ಆಸ್ತಿಯೆಂದೂ ಆ ಜಮೀನಿನಿಂದ ಬರುವ ಬೆಳೆ ಅವನ ಆದಾಯವೆಂದೂ ಪರಿಗಣಿಸಿ, ಜಮೀನಿನ ಮೇಲೆ ಆಸ್ತಿಯ ಮೇಲಣ ಮತ್ತು ಆದಾಯದ ಮೇಲಣ ಎರಡು ತೆರನಾದ ತೆರಿಗೆಗಳನ್ನು ವಿಧಿಸುತ್ತಾರೆ. ಅಲ್ಲಿನ ಗ್ರಾಮಾಂತರ ಪ್ರದೇಶಗಳಲ್ಲಿನ ಜಮೀನಿನ ಮೇಲೆ ಹೆಚ್ಚು ದರದ ಭೂಕಂದಾಯವನ್ನು ಅವರು ವಿಧಿಸಿದ್ದಾರೆ. ಇದರಿಂದ ಅಲ್ಲಿಯ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚಿನ ವರಮಾನ ಬರುತ್ತದೆ.

ಭೂಕಂದಾಯದ ವಿಷಯದಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ ಅನೇಕ ವಿಧವಾದ ಮಾರ್ಗಗಳನ್ನು ಅನುಸರಿಸಲಾಗಿದೆ. ಮಾಂಟೆಗ್ಯೂ ಛೆಲ್ಮ್ಸ್‌ಫರ್ಡ್ ಸುಧಾರಣೆಗಳಾದ ಮೇಲೆ ಭೂಕಂದಾಯವು ಪೂರ್ತಿ ಪ್ರಾಂತ ಸರಕಾರಗಳಿಗೇ ಸಂಬಂಧಪಟ್ಟ ವರಮಾನದ ಬಾಬಾಯಿತು. ಇಲ್ಲಿ ಭೂಕಂದಾಯವನ್ನು ನಿರ್ಧರಿಸಬೇಕಾದರೆ ಅದಕ್ಕೆ ಮೊದಲು ಅನೇಕ ಕೆಲಸಗಳು ಆಗಬೇಕು. ಹತ್ತು, ಇಪ್ಪತ್ತು ಅಥವಾ ಮೂವತ್ತು ವರುಷಗಳಿಗೊಮ್ಮೆ ದೇಶದಲ್ಲಿನ ಎಲ್ಲಾ ಜಮೀನುಗಳ ವಿಸ್ತೀರ್ಣ ಆಕಾರಗಳನ್ನು ಪರಿ

ಶೀಲಿಸಿ ಸಾಗುವಳಿಯಾಗುವ ಜಮೀನು ಯಾವ ಬಗೆಯದು, ತರಿಯೋ, ಖುಷ್ಕಿಯೋ, ಬಾಗಾಯತೆ ಎಂಬುದನ್ನು ತೀರ್ಮಾನಿಸಿ, ಅಲ್ಲಿ ಸಾಮಾನ್ಯವಾಗಿ ಯಾವ ವಿಧವಾದ ಬೆಳೆಯನ್ನು ಬೆಳೆಯುತ್ತಾರೆಂಬುದನ್ನು ಅರಿತು ಆಮೇಲೆ ಆ ಜಮೀನಿನ ಮೇಲೆ ಕಂದಾಯವನ್ನು ನಿರ್ಧರಿಸುತ್ತಾರೆ. ಹೀಗೆ ಜಮೀನಿನ ಮೇಲೆ ಸರಕಾರದವರು ವಸೂಲ್ಮಾಡಬೇಕಾದ ತೆರಿಗೆಯನ್ನು ನಿರ್ಧರಿಸುವುದಕ್ಕಾಗಿ ಸರ್ವೆ ಇಲಾಖೆಯೆಂಬ ಪ್ರತ್ಯೇಕ ಇಲಾಖೆಯಿದೆ. ಈ ಇಲಾಖೆಯವರು ತೆರಿಗೆಯನ್ನು ಹೇಗೆ ನಿರ್ಧಾರ ಮಾಡಬೇಕೆಂಬುದನ್ನು ಆಗಿಂದಾಗ್ಗೆ ಸರಕಾರವು ತೀರ್ಮಾನಿಸುವ ವಿಧಿ ನಿಯಮಗಳು ಸೂಚಿಸುತ್ತವೆ. ಜಮೀನಿನ ಮೇಲೆ ವಿಧಿಸುವ ಕಂದಾಯವನ್ನು, ಆ ಜಮೀನು ಸಾಗುವಳಿ ಮಾಡುತ್ತಿರುವವನು ಮುಗ್ಗಟ್ಟಿನ ಕಾಲದಲ್ಲೂ ಸಹ ತಾನು ಹಿಂದೆ ಪಡೆದಿರುವ ಆದಾಯವನ್ನು ಸರಿಹೋಲಿಸಿಕೊಂಡು ತೆರುವಂತಿರಬೇಕು ಎಂಬುದನ್ನು ತೆರಿಗೆ ವಿಧಿಸುವವರು ನೆನಪಿನಲ್ಲಿಟ್ಟಿರುತ್ತಾರೆ.

ಇತ್ತೀಚೆಗೆ ಇತರ ವಿಧವಾದ ತೆರಿಗೆಗಳು ತಲೆದೋರಿ ಭೂಕಂದಾಯಕ್ಕೆ ಹಿಂದಿದ್ದ ಪ್ರಾಧಾನ್ಯ ಕಡಮೆ ಬೀಳುತ್ತಿದೆ. ಮೊದಮೊದಲು ನಮ್ಮ ದೇಶದ ಸರಕಾರದ ವರಮಾನದಲ್ಲಿ ಅರ್ಧಭಾಗ ಭೂಕಂದಾಯದಿಂದಲೇ ಬರುತ್ತಿತ್ತು. ಈಚೆಗೆ ಭೂಕಂದಾಯದಿಂದ ಆರರಲ್ಲಿ ಒಂದು ಭಾಗಕ್ಕಿಂತ ಕಡಮೆಯಷ್ಟು ಆದಾಯ ಬರುತ್ತಿದೆ. ಇದನ್ನು ಪರ್ಯಾಲೋಚಿಸಿದರೆ, ಈ ವಿಧವಾದ ತೆರಿಗೆ ಹೆಚ್ಚಾಗಿ ಬೆಳೆಯಲು ಮಾರ್ಗವಿಲ್ಲವೆಂಬುದೂ, ಇದರಿಂದ ಸರಕಾರಕ್ಕೆ ವರಮಾನ ಹೆಚ್ಚಾಗಿ ಬರಲಾರದು ಎಂಬುದೂ ವ್ಯಕ್ತವಾಗುತ್ತದೆ.

——— ———

# ಪ್ರಕರಣ ೧೧

## ತೆರಿಗೆ ಕೊಡುವ ಶಕ್ತಿ

ಪ್ರಜೆಗಳು ಸರಕಾರಕ್ಕೆ ಸಲ್ಲಿಸುವ ತೆರಿಗೆಯ ಹೊರೆಯನ್ನು ಕೇವಲ ತಾವು ಕೊಡುವ ಮೊಬಲಗಿನ ದೃಷ್ಟಿಯಿಂದ ನೋಡದೆ, ತೆರಿಗೆಯ ಪರಿಣಾಮವನ್ನು ವಿಮರ್ಶಿಸಿ ನಿಶ್ಚಯಿಸಬೇಕೆಂದು ಹಿಂದೆ ಹೇಳಲಾಗಿದೆ— ಈ ತೆರಿಗೆಯ ಹೊರೆ, ಪ್ರಜೆಗಳ ದೃಷ್ಟಿ; ತೆರಿಗೆಯ ವಿಷಯದಲ್ಲಿ ಸರಕಾರದ ದೃಷ್ಟಿಯೂ ಒಂದಿದೆ. ತೆರಿಗೆಯನ್ನು ದೇಶದ ಆರ್ಥಿಕ ಪರಿಸ್ಥಿತಿ ಕುಗ್ಗದೆ ಇರುವಂತೆ ಪ್ರಜೆಗಳಿಂದ ಯಾವ ರೀತಿ ಸಂಗ್ರಹಿಸಬಹುದೆಂಬುದೇ ಈ ದೃಷ್ಟಿ. ದೇಶದ ತೆರಿಗೆ ಸಿಸ್ತನ್ನು ವ್ಯವಸ್ಥೆ ಮಾಡಲು ಪ್ರಜೆಗಳಿಗಿರುವ "ತೆರುವ ಶಕ್ತಿಯನ್ನು" ತಿಳಿಯಬೇಕು.

ಸರಕಾರದ ಪ್ರಧಾನ ಮತ್ತು ಐಚ್ಛಿಕ ಕರ್ತವ್ಯಗಳನ್ನು ನಿರ್ವಹಣಮಾಡಲು ಇತ್ತೀಚೆಗೆ ಹೆಚ್ಚು ಹಣ ಬೇಕಾಗಿದೆ. ಒಂದು ಕಡೆ ಯುದ್ಧ ಮೊದಲಾದುವುಗಳಿಂದ ಮಾಡಿದ ಸಾಲ ತೀರಿಸುವುದು, ಇನ್ನೊಂದು ಕಡೆ ದೇಶಾಭ್ಯುದಯ ಕಾರ್ಯಗಳನ್ನು ವಿಸ್ತರಿಸುವುದು, ಮತ್ತೊಂದು ಕಡೆ ದೇಶರಕ್ಷಣೆಯನ್ನು ನಿರ್ವಹಿಸುವುದು, ಮುಗ್ಗಟ್ಟಿನ ಕಾಲದಲ್ಲಿ ಒದಗಿದ ತೊಂದರೆಗಳನ್ನು ಪರಿಹರಿಸುವುದು. ಇವುಗಳಿಗಾಗಿ "ಬಡ್ಜೆಟ್" ತಯಾರ್ಮಾಡುವಾಗ ಎಷ್ಟು ವರಮಾನವಿದ್ದರೂ ಸಾಲದೆ ಇರುವಂತೆ ಕಂಡುಬರುತ್ತದೆ. ಹೀಗಾಗಿ ಹಣಕಾಸಿನ ಆಡಳಿತವನ್ನು ಕೈಲಿ ಹಿಡಿದಿರುವ ಪ್ರತಿಯೊಬ್ಬನಿಗೂ ಸರಕಾರದ ವರಮಾನವನ್ನು ಹೆಚ್ಚಿಸುವುದು ಹೇಗೆ ಎಂಬುದು ನಿತ್ಯ ಸಮಸ್ಯೆಯಾಗಿದೆ. ಸರಕಾರದ ವರಮಾನವನ್ನು ಹೆಚ್ಚಿಸಬೇಕಾದರೆ ದೇಶದ ಉತ್ಪತ್ತಿ, ಅದರ ಖರ್ಚು, ಆಮೇಲೆ ನಿಲ್ಲುವ ಉಳಿತಾಯವೇನು— ಸಾಮಾನ್ಯ ಮತ್ತು ವಿಶೇಷ ಸಂದರ್ಭಗಳಲ್ಲಿ, ದೇಶದ ಆದಾಯದಲ್ಲಿ ಸರಕಾರ ಎತ್ತಬಹುದಾದ ವರಮಾನವೆಷ್ಟು ಎಂಬುದನ್ನು ಅಂಕಿ ಅಂಶಗಳ ಆಧಾರದಿಂದಲೇ ಮಾಡಬೇಕು. ಎಂದರೆ ಸರಕಾರ ತನ್ನ ಆದಾಯವನ್ನು ಪಡೆಯಲು ತೆರಿಗೆ ಹಾಕುವ ಮೊದಲು, ದೇಶದಲ್ಲಿ "ತೆರುವ ಶಕ್ತಿ" ಹೇಗಿದೆ, ಎಷ್ಟಿದೆ ಎಂಬುದನ್ನು ನಿರ್ಧಾರ ಮಾಡಬೇಕು.

ಇದನ್ನು ಆಯಾ ಸಂದರ್ಭಗಳು, ಸ್ಥಿತಿಗತಿಗಳು ಇವುಗಳನ್ನು ಅನುಸರಿಸಿ ನಿರ್ಧರಿಸಬೇಕೇ ಹೊರತು ದೇಶದ ಅಥವಾ ಒಬ್ಬ ಪ್ರಜೆಯ ಆದಾಯದಲ್ಲಿ ಶೇಕಡ ಇಷ್ಟು ತೆರಿಗೆ ವಸೂಲ್ಮಾಡಬಹುದೆಂದು ತೀರ್ಮಾನಿಸುವಂತಿಲ್ಲ. ತೆರಿಗೆಯು ಆಯಾ ದೇಶದ ತೆರುವ ಶಕ್ತಿಯನ್ನು ಅನುಸರಿಸಿ ಹೋಗಬೇಕು. ಇದನ್ನು ನಿಶ್ಚಯಿಸಬೇಕಾದರೆ ದೇಶದ ಆರ್ಥಿಕ ಪರಿಸ್ಥಿತಿಯನ್ನು ಮೊದಲು ಮನಗೊಳ್ಳಬೇಕು. ಕಾಲಕಾಲಕ್ಕೆ, ದೇಶದೇಶಕ್ಕೆ ಇದು ವ್ಯತ್ಯಾಸವಾಗುತ್ತಿರಬಹುದು. ಆದುದರಿಂದ ಒಂದು ದೇಶದ ತೆರುವ ಶಕ್ತಿ ಕಟ್ಟುನಿಟ್ಟಾಗಿ ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ.

ದೇಶದ “ತೆರುವ ಶಕ್ತಿ” ಎಂದರೆ ಏನು ಎಂಬ ವಿಷಯದಲ್ಲಿಯೇ ಭಿನ್ನಾಭಿಪ್ರಾಯಗಳಿವೆ. ಸರಕಾರದ ವರಮಾನಕ್ಕಾಗಿ ಆ ದೇಶದ ಜನರಿಂದ ಎಷ್ಟು ಹಣವನ್ನು ಸಂಗ್ರಹಿಸಲು ಸಾಧ್ಯವೊ ಅದು ಅಲ್ಲಿಯ ತೆರುವ ಶಕ್ತಿ ಎಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಒಂದು ದೇಶದಲ್ಲಿ ಹತ್ತು ಕೋಟಿ ರೂಪಾಯಿಗಳನ್ನು ಪ್ರಜೆಗಳಿಂದ ಸಂಗ್ರಹಿಸಬಹುದಾದರೆ, ಪ್ರಾಯಶಃ ಅಷ್ಟೇ ವಿಸ್ತಾರ ಪ್ರಜಾಸಂಖ್ಯೆಯುಳ್ಳ ಇನ್ನೊಂದು ದೇಶದಲ್ಲಿ ಅದರ ಅರ್ಧದಷ್ಟು ಹಣವನ್ನು ಬರಮಾಡಿಕೊಳ್ಳುವುದೇ ದುಸ್ತರವಾಗಬಹುದು. ಅಷ್ಟೇ ಅಲ್ಲ. ಒಂದು ದೇಶದಲ್ಲಿ ಸರಕಾರಕ್ಕೆ ಸಲ್ಲಿಸುತ್ತಿರುವಷ್ಟು ಹಣವನ್ನು ಅಕ್ಕಪಕ್ಕ ರಾಜ್ಯದವರು ಸಲ್ಲಿಸಲು ಒಪ್ಪದಿರಬಹುದು. ಅಲ್ಲಿಯ ಆರ್ಥಿಕ ಸ್ಥಿತಿಗಳು ಇನ್ನೊಂದು ದೇಶದಷ್ಟು ಸುಖಕರವಾಗಿಲ್ಲದಿರಬಹುದು. ಒಬ್ಬನ ಚೈತನ್ಯ ಇನ್ನೊಬ್ಬನ ಚೈತನ್ಯಕ್ಕಿಂತ ಕಡಿಮೆಯಾಗಿರಬಹುದ . ಅದುದರಿಂದ ತೆರುವ ಶಕ್ತಿಯೆಂದರೆ ಆ ದೇಶದ ಪ್ರಜೆಗಳಿಂದ ಬರಮಾಡಿಕೊಳ್ಳಬಹುದಾದ ಆದಾಯವೆಂದು ಭಾವಿಸುವುದು ಸಾಧ್ಯವಲ್ಲ.

ಒಂದು ದೇಶದ ಒಟ್ಟು ಆದಾಯದಲ್ಲಿ ಅಲ್ಲಿಯ ಜನರ ಜೀವನಕ್ಕೆ ಆಗಿ ಆ ಪ್ರಜೆಗಳು ಸರಕಾರಕ್ಕೆ ಸಲ್ಲಿಸಲು ಸಿದ್ಧವಾಗಿರುವ ಹಣವೇ “ತೆರುವ ಶಕ್ತಿ” ಎಂದು ಇನ್ನು ಕೆಲವರು ಅಭಿಪ್ರಾಯಪಟ್ಟಿದ್ದಾರೆ—ಎಂದರೆ ಇದು ಅಲ್ಲಿಯ ಪ್ರಜೆಗಳು ಯಾವ ಕಷ್ಟಕ್ಕೂ ಸಿಕ್ಕದೆ ಸರಕಾರವೆಂಬ ಯಂತ್ರ ನಡೆಸಬೇಕಾದ ಕರ್ತವ್ಯ ನಿರ್ವಹಣೆಗಾಗಿ ಸಲ್ಲಿಸಬಹುದಾದ ಹಣವೆಂದಂತಾಯಿತು. ಸಾಮಾನ್ಯವಾಗಿ ಪ್ರಜೆಗಳಿಗೆ ಒಂದು ಮಟ್ಟದಲ್ಲಿ ಜೀವನವನ್ನು ನಡೆಸಲು ಮಾತ್ರವೇ ಅಲ್ಲ, ಹಣ ಬೇಕಾದುದು. ಅವರು ಇನ್ನೂ ಪ್ರವರ್ಧಮಾನರಾಗಿ, ಹೆಚ್ಚುಹೆಚ್ಚಿನ ಕೆಲಸಕಾರ್ಯಗಳನ್ನು ಕೈಗೊಂಡು ತಮ್ಮ ಮತ್ತು ದೇಶದ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳಲು ಸಹ ಅವರಿಗೆ ಹಣ ಬೇಕು. ಜೀವನಯಾತ್ರೆಗೆ ಸಾಕಷ್ಟು ಹಣವಿದ್ದರೆ ಆಗದು—ಇನ್ನೂ ಹೆಚ್ಚು ಬೇಕು. ಹೀಗೆಂದಮೇಲೆ, ಒಂದು ದೇಶದ ಜನರ ಜೀವನಮಟ್ಟ ಯಾವುದು, ಅದನ್ನು ನಿರ್ವಹಿಸಲು ಎಷ್ಟು ಹಣ ಬೇಕು, ಅವರ ಪುರೋಭಿವೃದ್ಧಿಗಾಗಿ ನಡೆಯಬೇಕಾದ ಕಾರ್ಯಗಳೇನು, ಅದಕ್ಕೆ ಅವರಿಗೆ ಮೀಸಲಾಗಿರಬೇಕಾದ ಹಣವೆಷ್ಟು, ಎಂಬುದನ್ನು ಮೊದಲು ತೀರ್ಮಾನಮಾಡಿ, ಆಮೇಲೆ ಆ ದೇಶದ “ತೆರುವ ಶಕ್ತಿ” ಇಷ್ಟು ಎಂದು ನಿರ್ಧಾರಮಾಡಬೇಕಾಯಿತು. ಇದನ್ನು ನಿರ್ಧಾರಮಾಡುವುದು ಬಗೆಹರಿಯದ ಕೆಲಸ. ಜನರ ಜೀವನಾಧಾರಕ್ಕೆ ಮಾತ್ರ ಬೇಕಾಗುವ ಮತ್ತು ಅವರ ಅಭಿವೃದ್ಧಿಗೆ ಅವಶ್ಯಕವಾಗುವ ಹಣವನ್ನು ಬಿಟ್ಟು ಉಳಿದುದನ್ನು ಸರಕಾರ ತೆರಿಗೆಯ ರೂಪದಲ್ಲಿ ಅವರಿಂದ ಪಡೆಯಬೇಕು, ಎಂಬುದು ಒಪ್ಪದ ಮಾತು. ಅಥವಾ ಜನರ ಜೀವನದ ಮಟ್ಟ ಒಂದು ಸಂಸಾರಕ್ಕಿಂತ ಇನ್ನೊಂದು ಸಂಸಾರದಲ್ಲಿ ವ್ಯತ್ಯಸ್ತವಾಗಿರುತ್ತದೆ ಎಂದು ಭಾವಿಸುವುದಾದರೆ—ಆ ದೇಶದ ತೆರುವ ಶಕ್ತಿಯನ್ನು ನಿಶ್ಚಯಿಸಬೇಕಾದರೆ ಈ ಅಳತೆ ಕಡ್ಡಿಯಿಂದ ಸಾಧ್ಯವಾಗದು. ಅಷ್ಟೇ ಅಲ್ಲ. ತೆರುವ ಶಕ್ತಿಯನ್ನು ನಿರ್ಧರಿಸುವಾಗ, ಒಂದು ದೇಶದ ಉತ್ಪತ್ತಿ, ಶಕ್ತಿ, ಇದೇ ಮಟ್ಟದಲ್ಲಿರಬೇಕೆಂದು ಒಂದು ಬಾರಿ ನಿರ್ಧರಿಸುವುದು ಕೂಡ ಅಸಾಧುವಾದುದು ; ತಮ್ಮ ಹಣ

ವರ್ಷಂಪ್ರತಿ ಬೆಳೆಯುತ್ತ ಹೋಗಬೇಕೆಂದೂ, ತಮ್ಮ ಕಾರ್ಯಗಳು ದಿನಂಪ್ರತಿ ಫಲಕಾರಿಯಾಗಬೇಕೆಂದೂ ಜನರು ಬಯಸುತ್ತಾರೆ. ಇದು ಸಹಜ. ಆದುದರಿಂದ ಆಯಾ ಪರಿಸ್ಥಿತಿ ಸನ್ನಿವೇಶಗಳನ್ನು ಅನುಸರಿಸಿ ತೆರುವ ಶಕ್ತಿಯನ್ನು ನಿರ್ಧರಿಸ ಬೇಕು.

ಯುದ್ಧ ಮೊದಲಾದ ಕೆಲವು ವಿಶೇಷ ಸಂದರ್ಭಗಳಲ್ಲಿ ಮಾತ್ರ ಜನರ ಜೀವ ನಕ್ಕೆ ಬೇಕಾಗುವ ಹಣವನ್ನುಳಿದು ಮಿಕ್ಕ ಆದಾಯವನ್ನು ದೇಶದ ತೆರುವ ಶಕ್ತಿ ಯಾಗಿ ಭಾವಿಸಬಹುದು. ಇತರ ಸಮಯಗಳಲ್ಲಿ ದೇಶದ ಸಂಪತ್ತು ಎಷ್ಟು, ದೇಶದ ಆದಾಯವೇನು ಎಂಬುದನ್ನು ತಿಳಿದು ತೆರುವ ಶಕ್ತಿಯನ್ನು ತಿಳಿಯಬೇಕು.

ಸಾಮಾನ್ಯ ಸಂದರ್ಭಗಳಲ್ಲಿ, ದೇಶದ ಸಂಪತ್ತು ಬೆಳೆಯುವುದಕ್ಕೆ ಬೇಕಾ ದಷ್ಟು ಅವಕಾಶ ಒದಗಿಸಿ ಆಮೇಲೆ ತೆರುವ ಶಕ್ತಿ ಇಷ್ಟು ಎಂದು ತೀರ್ಮಾನಿಸುವುದು ಉತ್ತಮವಾದ ಮಾರ್ಗ. ಆದುದರಿಂದಲೇ ಸರಕಾರದ ವರಮಾನವನ್ನು ತೆರಿಗೆಯ ರೂಪದಲ್ಲಿ ಪಡೆದು ಅದನ್ನು ನಿಶ್ಚಯಿಸುವಾಗ—ರಾಜನೀತಿಜ್ಞರು, ಪ್ರಸಕ್ತ ಕಾಲಕ್ಕೆ ಮಾತ್ರವಲ್ಲ, ಮುಂದೆ ಒದಗಬಹುದಾದ ಈತಿಬಾಧೆಗಳ ನಿವಾರಣೆಗಾಗಿಯೂ, ಎಂತಹ ಸಂದರ್ಭಗಳಲ್ಲಿಯೂ ದೇಶದ ಆಸ್ತಿ ನಾಶವಾಗದಂತೆ ಮಾಡಬೇಕಾದ ಏರ್ಪಾಡುಗಳಿಗಾಗಿಯೂ ಸಾಕಷ್ಟು ಹಣವನ್ನು ದೇಶದಲ್ಲಿ ಬಿಟ್ಟು, ತೆರುವ ಶಕ್ತಿ ಯನ್ನು ನಿರ್ಧರಿಸುತ್ತಾರೆ.

ಎಂದರೆ ತೆರುವ ಶಕ್ತಿ ಯಾವಾಗಲೂ ಒಂದೇ ಬಗೆಯಾಗಿರುವುದಿಲ್ಲ. ಯುದ್ಧ ಮೊದಲಾದ ವಿಶೇಷ ಸಂದರ್ಭಗಳಲ್ಲಿ ಒಂದು ರೀತಿ, ಇತರ ಸಾಮಾನ್ಯ ಕಾಲಗಳಲ್ಲಿ ಇನ್ನೊಂದು ರೀತಿ ಇರುತ್ತದೆ. ವಿಶೇಷ ಸಮಯಗಳಲ್ಲಿ ದೇಶಾಭಿಮಾನದಿಂದಲೋ, ಇತರ ಆವಶ್ಯಕತೆಯಿಂದಲೋ ದೇಶದ ಪ್ರಜೆಗಳು ತಮ್ಮ ಶಕ್ತಿಗೆ ಮೀರಿ ಹಣವನ್ನು ಒದಗಿಸಿಕೊಡಲು ಸಿದ್ಧರಾಗಿರುತ್ತಾರೆ. ಆದುದರಿಂದ ಆ ಸಂದರ್ಭಗಳಲ್ಲಿ ತೆರುವ ಶಕ್ತಿ ಹೆಚ್ಚುತ್ತದೆ.

ಸಾಮಾನ್ಯ ಕಾಲದಲ್ಲಿ ವಿಧಾಯಕಮಾಡಿದ ತೆರಿಗೆಯು ಪೂರ್ತಿಯಾಗಿ ವಸೂ ಲಾಗದೆ ಸರಕಾರದ ವರಮಾನ ಕಡಮೆಯಾದರೆ, ಜನರ ತೆರುವ ಶಕ್ತಿ ಕಡಮೆ ಯಾಗಿದೆಯೆಂದೇ ಅರ್ಥ. ಅವರು ಕೊಡುವುದಕ್ಕಿಂತ ಹೆಚ್ಚಿನ ತೆರಿಗೆಯನ್ನು ಅವರ ಮೇಲೆ ವಿಧಿಸಲಾಗಿದೆಯೆಂದು ಇದರಿಂದ ತಿಳಿದುಬರುವುದು. ತೆರುವ ಶಕ್ತಿ ಕಡಮೆ ಯಾಗುವುದರಿಂದ ಮಾತ್ರವೇ ಸರಕಾರದ ಆದಾಯ ಕುಗ್ಗುತ್ತದೆಯೆಂದು ಭಾವಿ ಸಲಾಗದು. ತೆರಿಗೆಯ ರೀತಿ, ನೀತಿ, ತೆರಿಗೆ ಏತಕ್ಕಾಗಿ ವಿನಿಯೋಗವಾಗುವುದು ಎಂಬುದನ್ನು ಅನುಸರಿಸಿ ಸರಕಾರದ ಆದಾಯದ ಏರಿಳಿತಗಳು ಕಂಡುಬರುತ್ತವೆ. ತೆರಿಗೆ ಪರೋಕ್ಷವಾದ ತೆರಿಗೆಯಾಗಿ ಭೋಗ್ಯವಸ್ತುಗಳ ಮೇಲೆ ಮಾತ್ರ ಹಾಕಲ್ಪಟ್ಟುದಾಗಿ ಅದರಿಂದ ಸರಕಾರದ ವರಮಾನವಿಳಿದರೆ ತೆರುವ ಶಕ್ತಿ ಇಳಿದಂ ತಾಗಲಿಲ್ಲ. ಸಾಮಾನ್ಯವಾಗಿ ತೆರಿಗೆಗಳು ಜನಸಾಮಾನ್ಯದ ಮೇಲೆ ಬಿದ್ದು ಅವು ಪ್ರತ್ಯಕ್ಷವಾದ ತೆರಿಗೆಗಳಾಗಿ, ಅದರಿಂದ ಸರಕಾರದ ವರಮಾನವಿಳಿದರೆ ಆಗ ತೆರುವ ಶಕ್ತಿ ಕಡಮೆಯಾಗಿದೆಯೆಂದು ಭಾವಿಸಬೇಕು.

ಎಂದರೆ ಒಟ್ಟಿನಲ್ಲಿ ಒಂದು ಜನಾಂಗದಲ್ಲಿ, ಜನರ ಜೀವನೋಪಾಯಕ್ಕೂ ದೇಶದ ಸಂಪತ್ತಿನ ಉತ್ಪತ್ತಿಗೂ ಬೇಕಾಗುವ ಹಣವನ್ನು ಬಿಟ್ಟು ಉಳಿಯುವ ಹಣವನ್ನು ಅಲ್ಲಿಯ ತೆರುವ ಶಕ್ತಿಯೆಂದು ಕರೆದಂತಾಯಿತು. ಜನರ ಜೀವನೋಪಾಯವೆಂದರೆ ಬರಿಯ ಅನ್ನ, ಬಟ್ಟೆ, ನೀರು ಅಷ್ಟೇ ಅಲ್ಲ. ಅವರ ಕೈಗಾರಿಕೆಗಳು ಅಭಿವೃದ್ಧಿಯಾಗಬೇಕು, ಅವರಿಗೆ ವಿದ್ಯಾಭ್ಯಾಸ ದೊರೆಯಬೇಕು, ಅವರಿಗೆ ಜೀವನದಲ್ಲಿನ ಮುಖ್ಯ ಸೌಕರ್ಯಗಳು ಸಿಕ್ಕಬೇಕು, ಇವುಗಳಿಗಾಗಿ ಬೇಕಾಗುವ ಹಣವನ್ನು ಅತ್ಯಗತ್ಯವಾದ ಹಣವೆಂದೇ ಕರೆಯಬೇಕು. ಈ ಜೀವನಯಾತ್ರೆಗೆ ಬೇಕಾದ ಸಲಕರಣೆಗಳು, ಅವುಗಳ ಬೆಲೆ—ಮೊದಲಾದುವುಗಳಲ್ಲಿ ಒಂದು ದೇಶಕ್ಕೂ ಮತ್ತೊಂದು ದೇಶಕ್ಕೂ ವ್ಯತ್ಯಾಸವಿರುತ್ತದೆ. ಆದುದರಿಂದ ಒಂದು ದೇಶದ ತೆರುವ ಶಕ್ತಿಗೂ ಇನ್ನೊಂದು ದೇಶದ ತೆರುವ ಶಕ್ತಿಗೂ ಅಂತರವಿರುತ್ತದೆ.

ಇಷ್ಟೇ ಅಲ್ಲ. ತೆರಿಗೆಯ ಸ್ವರೂಪ ಮತ್ತು ತೆರಿಗೆಯನ್ನು ವಿಧಿಸುವ ಕ್ರಮ, ವಿಧಾನ ಇವು ಕೂಡ ತೆರುವ ಶಕ್ತಿಯನ್ನು ನಿರ್ಧರಿಸುತ್ತವೆ. ತೆರಿಗೆಯನ್ನು ವಿಧಿಸುವ ರೀತಿನೀತಿಗಳಲ್ಲಿ ಕಾಣುವ ವ್ಯತ್ಯಾಸಗಳಿಂದ ತೆರುವ ಶಕ್ತಿಯೂ ಬದಲಾಯಿಸುತ್ತದೆ. ಇತ್ತೀಚೆಗೆ ಪ್ರಪಂಚದಲ್ಲಿನ ರಾಷ್ಟ್ರಗಳು, ತಾವು ವೆಚ್ಚಮಾಡುತ್ತಿರುವಷ್ಟು ಹಣವನ್ನು ಕೆಲವು ಹೊಸ ಪ್ರತ್ಯಕ್ಷವಾದ ತೆರಿಗೆಗಳಿಂದ ಪಡೆಯುತ್ತಿವೆಯೆಂಬುದನ್ನು ನಾವು ಕಾಣಬಹುದು. ಒಂದೇ ತೆರನಾದ ತೆರಿಗೆಯನ್ನು ಹೆಚ್ಚಿಸುವುದಕ್ಕಿಂತ ಹೊಸ ಹೊಸ ತೆರಿಗೆಗಳನ್ನು ಹಾಕುವುದರಿಂದ ಆ ದೇಶದ ತೆರುವ ಶಕ್ತಿಯನ್ನು ಹೆಚ್ಚಿಸಬಹುದು. ಯಾವ ತೆರಿಗೆಯನ್ನು ಹಾಕಿದರೆ ಜನರು ಅಡ್ಡಿಮಾಡುವುದಿಲ್ಲವೋ ಯಾವ ತೆರಿಗೆಯಿಂದ ದೇಶದ ಸಂಪದಭಿವೃದ್ಧಿಗೆ ಕುಂದು ಬರುವುದಿಲ್ಲವೋ ಅಂತಹ ತೆರಿಗೆಗಳನ್ನು ಶಾಸ್ತ್ರೀಯವಾಗಿ ಪರಿಶೀಲಿಸಿ ವಿಧಿಸಬೇಕು.

ಒಂದು ದೇಶದ ಒಟ್ಟು ವರಮಾನ, ಅಲ್ಲಿಯ ಪ್ರಜಾಸಂಖ್ಯೆ—ಇವುಗಳನ್ನು ಅನುಸರಿಸಿ ಅಲ್ಲಿಯ ತೆರುವ ಶಕ್ತಿ ಇರುತ್ತದೆ. ಒಂದು ದೇಶದಲ್ಲಿ ದೇಶದ ವರಮಾನಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಪ್ರಜಾಸಂಖ್ಯೆ ಬೆಳೆಯುತ್ತ ಹೋದರೆ ಆ ದೇಶದ ತೆರುವ ಶಕ್ತಿ ಕ್ರಮೇಣ ಇಳಿದು ಹೋಗುವುದು. ಕೆಲವು ಪಾಶ್ಚಾತ್ಯ ಕೈಗಾರಿಕೆಯ ದೇಶಗಳ ಹಾಗೆ, ಜನಸಂಖ್ಯೆಗಿಂತ, ವರಮಾನ ಬಲವಾಗುತ್ತ ಹೋದರೆ ಅಲ್ಲಿಯ ತೆರುವ ಶಕ್ತಿಯೂ ಏರುತ್ತ ಹೋಗುವುದು. ಆದರೆ ವರಮಾನದ ಅಂಕಿಗಳಿಂದಲೇ ತೆರುವ ಶಕ್ತಿಯನ್ನು ನಿರ್ಧಾರ ಮಾಡುವುದು ಸಾಧ್ಯವಾಗದು. ಆ ದೇಶದಲ್ಲಿ ಅಲ್ಲಿಯ ಜನರಿಗೆ ದೊರೆಯಬೇಕಾದ ಸೌಕರ್ಯಗಳು, ಅವುಗಳಿಗಾಗಿ ಆವಶ್ಯಕವಾದ ಸಲಕರಣೆಗಳು, ಅವುಗಳ ಬೆಲೆ—ಇವೆಲ್ಲವನ್ನೂ ಮೊದಲು ತಿಳಿಯಬೇಕು. ಒಂದು ದೇಶದ ವರಮಾನವು ಇನ್ನೊಂದು ದೇಶದ ವರಮಾನದಷ್ಟೇ ಇರಬಹುದು. ಆದರೆ ಆವಶ್ಯಕ ಕಾರ್ಯಗಳಿಗಾಗಿ ವೆಚ್ಚವಾಗುವ ಹಣ ಒಂದು ದೇಶಕ್ಕಿಂತ ಇನ್ನೊಂದು ದೇಶದಲ್ಲಿ ಹೆಚ್ಚಾದರೆ ಅಲ್ಲಿಯ ತೆರುವ ಶಕ್ತಿ ಕ್ರಮೇಣ ಕಡಿಮೆಯಾಗುತ್ತದೆ.

ತೆರುವ ಶಕ್ತಿಯನ್ನು ನಿರ್ಧರಿಸಬೇಕಾದರೆ ಆ ದೇಶದ ಆದಾಯ ಹೇಗೆ ಹಂಚಿಕೆಯಾಗಿದೆ ಎಂಬ ಅಂಶವನ್ನೂ ಪರಿಶೀಲಿಸಬೇಕು. ಆದಾಯದ ಹಂಚಿಕೆಯಲ್ಲಿ

ಅಸಮತೆ ಹೆಚ್ಚಿದ್ದರೆ ಅಲ್ಲಿಯ ಜನರ ತೆರುವ ಶಕ್ತಿಯು ಹೆಚ್ಚಬಹುದು. ಉದಾಹರಣೆಗೆ 'ಎ' ಎಂಬುವನೊಬ್ಬನು ವರ್ಷಕ್ಕೆ ೨,೦೦೦ ರೂ. ಗಳನ್ನು ಸಂಪಾದಿಸುತ್ತಾನೆನ್ನೋಣ. ಇತರ ಇಪ್ಪತ್ತು ಮಂದಿ ವರ್ಷಕ್ಕೆ ೧೦೦ ರೂ. ಗಳನ್ನೂ ಸಂಪಾದಿಸುತ್ತಾರೆನ್ನೋಣ. ಎಂದರೆ 'ಎ' ಯ ಒಟ್ಟು ಆದಾಯವೂ, ಇಪ್ಪತ್ತು ಮಂದಿಯ ಒಟ್ಟು ಆದಾಯವೂ ಒಂದೇ ಆಯಿತು; 'ಎ' ಒಬ್ಬನ ಆದಾಯದಿಂದ ತೆರಿಗೆಯ ಮೂಲಕ ಬರುವ ಹಣ ಇಪ್ಪತ್ತು ಜನರ ಆದಾಯದಿಂದ ಬರುವ ಹಣಕ್ಕಿಂತ ಹೆಚ್ಚಾಗಿರುತ್ತದೆ. ಈ ೪,೦೦೦ ರೂ. ಗಳ ಒಟ್ಟು ಆದಾಯವನ್ನು ಇಪ್ಪತ್ತೊಂದು ಮಂದಿಗೂ ಸಮನಾಗಿ ಹಂಚಿದಲ್ಲಿ ಆಗ ಅವರಿಂದ ಬರುತ್ತಿದ್ದ ವರಮಾನ ಮೊದಲನೆಯದಕ್ಕಿಂತ ಕಡಿಮೆಯೆಂಬುದರಲ್ಲಿ ಸಂದೇಹವಿಲ್ಲ. ಸಾಮಾನ್ಯವಾಗಿ ನೂರು ರೂಪಾಯಿ ಸಂಪಾದನೆಯುಳ್ಳವನಿಗೆ ಇನ್ನೊಂದು ನೂರು ರೂಪಾಯಿ ಬಂದರೆ ಎಷ್ಟು ಸೌಕರ್ಯ ಒದಗುವುದೋ, ತೃಪ್ತಿಯಾಗುವುದೋ, ಎರಡು ಸಾವಿರ ರೂಪಾಯಿಗಳ ವರಮಾನವುಳ್ಳವನಿಗೆ ಆ ನೂರು ರೂಪಾಯಿಗಳ ಆದಾಯದಿಂದ ಅಷ್ಟು ತೃಪ್ತಿಯಾಗಲಿ, ಸೌಕರ್ಯವಾಗಲಿ, ಉಂಟಾಗಲಾರದು. ಇಪ್ಪತ್ತು ಜನ ವ್ಯಕ್ತಿಶಃ ಸಂಪಾದಿಸುವ ಹಣದಿಂದ ಉಂಟಾಗುವ ಸೌಲಭ್ಯಗಳಿಗಿಂತ ಹೆಚ್ಚಾಗಿ ಅಷ್ಟೇ ಹಣವನ್ನು ಸಂಪಾದಿಸುವ ಒಬ್ಬನ ಸೌಲಭ್ಯಗಳು ಹೆಚ್ಚು ಎಂದಂತಾಯಿತು. ಆದುದರಿಂದ ಅವನಿಗೆ ಉಳಿದ ಇಪ್ಪತ್ತು ಜನಗಳಿಗಿಂತ ಹೆಚ್ಚು ತೆರುವ ಶಕ್ತಿ ಇರುತ್ತದೆ. ಎರಡು ಸಾವಿರ ರೂಪಾಯಿ ಸಂಪಾದಿಸಬಲ್ಲವನಿಗೆ ಎಲ್ಲ ಆವಶ್ಯಕ ಮತ್ತು ಭೋಗ್ಯ ಸಲಕರಣೆಗೂ ಆಗಿ ಹೇರಳವಾದ ಹಣ ಉಳಿಯುವ ಸಂಭವ ಇರುತ್ತದೆ. ಅದೇ ಮೊತ್ತದ ಹಣವನ್ನು ಸಂಪಾದಿಸಬಲ್ಲ ಇಪ್ಪತ್ತು ಜನರಿಗೆ ಸುಖವಾಗಿ ಜೀವನ ಮಾಡಲು ಕೂಡ ಹಣ ಸಾಲದಾಗುತ್ತದೆ. ಎರಡು ರಾಜ್ಯಗಳ ವಿಸ್ತೀರ್ಣ, ಪ್ರಜಾಸಂಖ್ಯೆ, ಒಟ್ಟು ಆದಾಯ ಎಲ್ಲವೂ ಒಂದೇ ಸಮನಾಗಿದ್ದರೂ ಕೂಡ, ಎಲ್ಲಿ ಆ ಆದಾಯವು ಸಮನಾಗಿ ಹಂಚಿಕೆಯಾಗದೆ ಅಸಮತ ಇರುತ್ತದೋ ಅಲ್ಲಿ ತೆರುವ ಶಕ್ತಿಯು ವ್ಯತ್ಯಾಸವಾಗುತ್ತದೆ.

ಹೀಗೆಂದ ಮಾತ್ರಕ್ಕೆ ದೇಶದ ಆದಾಯ ಯಾವಾಗಲೂ ಅಸಮತೆಯಿಂದ ಹಂಚಿಕೆಯಾಗುವಂತೆ ಏರ್ಪಡಿಸುವುದು ಶ್ರೇಯಸ್ಕರವೆಂದು ಮಾತ್ರ ಭಾವಿಸಬಾರದು. ತೆರುವ ಶಕ್ತಿ ಏರಿದಮಾತ್ರಕ್ಕೇ ಆ ರಾಷ್ಟ್ರ ಸುಖವಾಗಿದೆ ಎಂದಂತಾಗದು. ಸಮಾನವಾದ ಹಂಚಿಕೆಯಿಲ್ಲದೆ ಹೋಗಿರುವುದರಿಂದ ಉಂಟಾಗುವ ಕುಂದು ಕೊರತೆಗಳನ್ನು ನೀಗುವುದಕ್ಕಾಗಿಯೇ ಅನೇಕ ರಾಜ್ಯಗಳು ಈಗ ಲಕ್ಷಾಂತರ ರೂಪಾಯಿಗಳನ್ನು ಪ್ರತಿವರ್ಷವೂ ವೆಚ್ಚಮಾಡಬೇಕಾಗಿದೆ. ದೇಶದ ನಿವ್ವಳ ಆದಾಯ ಹೆಚ್ಚು ಅಂತರವಿಲ್ಲದೆ ಪ್ರಜೆಗಳಲ್ಲಿ ಹಂಚಲ್ಪಡುವುದಾದರೆ ಆ ಸಂದರ್ಭದಲ್ಲಿ ಹೆಚ್ಚು ತೆರಿಗೆಯನ್ನು ಹಾಕಬೇಕಾದ ಆವಶ್ಯಕತೆಯೇ ಕಂಡುಬರದು. ಆಗ ದಾರಿದ್ರ್ಯ ನಾಶವಾಗಿ, ಸರಕಾರ ಮಾಡಬೇಕಾದ ಕೆಲಸಗಳನ್ನು ಪ್ರಜೆಗಳೇ ನಿರ್ವಹಿಸಿಕೊಳ್ಳಲು ಸಮರ್ಥರಾಗುತ್ತಾರೆ.

ತೆರುವ ಶಕ್ತಿ ಜನರಿಂದ ವಸೂಲಾದ ತೆರಿಗೆ ಯಾವ ಉದ್ದೇಶಕ್ಕಾಗಿ ವೆಚ್ಚ ವಾಗುತ್ತದೆ ಎಂಬುದನ್ನು ಅನುಸರಿಸುವುದು. ಒಂದು ದೇಶದಲ್ಲಿ ಹೆಚ್ಚು ತೆರಿಗೆ ಯನ್ನು ವಸೂಲ್ಮಾಡಿದರೂ ಆ ತೆರಿಗೆಯಿಂದ ಪ್ರಜೆಗಳ ಸಂಪತ್ತಾಗಲೀ ಸಂಪಾದನ ಶಕ್ತಿಯಾಗಲೀ ಕುಂದದೆ ಇರಬಹುದು. ತೆರಿಗೆಯಿಂದ ವಸೂಲಾದ ಹಣ ಬಡ್ಡಿಯ ರೂಪದಲ್ಲೋ ಅಥವಾ ಇನ್ನಾವುದಾದರೂ ವಿಧವಾಗಿಯೋ ಪ್ರಜೆಗಳಿಗೇ ಸೇರು ವಂತಿರಬಹುದು. ಹೀಗೆ ಕೊಟ್ಟ ಹಣ ಒಂದಲ್ಲ ಒಂದು ರೂಪದಲ್ಲಿ ಪ್ರಜೆಗಳ ಕೈಗೆ ಬಂದಾಗ ದೇಶದಲ್ಲಿ ಕ್ಷೋಭೆಯುಂಟಾಗುವುದಿಲ್ಲ. ಆ ದೇಶದ ಸಂಪತ್ತು ಮತ್ತು ವರಮಾನ ಕುಗ್ಗುವುದಿಲ್ಲ. ಇದು ಉಳಿದು ವಸೂಲಾದ ತೆರಿಗೆಯ ಹಣ ಆ ದೇಶಕ್ಕೆ ಉಪಯೋಗವಾಗದೆ ಇತರ ವಿಧವಾಗಿ ವೆಚ್ಚವಾಗುವುದಾದರೆ ಆ ದೇಶದಲ್ಲಿ ತೆರುವ ಶಕ್ತಿ ಕ್ರಮೇಣ ಕುಸಿದುಬೀಳುತ್ತದೆ. ಉದಾಹರಣೆಗೆ, ಅನೇಕ ಸರಕಾರಗಳು ತಮ್ಮ ಕರ್ತವ್ಯನಿರ್ವಹಣೆಗಾಗಿ ಸಾಲ ಮಾಡುತ್ತವೆ ಎಂಬುದನ್ನು ನಾವು ಕಂಡಿದ್ದೇವೆ. ಆ ಸರಕಾರಗಳಿಗೆ ಸಾಲದ ಬಡ್ಡಿ ಕೊಡಲು ಸಾಲವನ್ನು ತೀರಿಸಲು ವರ್ಷಂ ಪ್ರತಿ ಹಣಬೇಕು. ಇಂತಹ ಸಾಲವನ್ನು ಆ ದೇಶದಲ್ಲಿಯೇ ಎತ್ತಿದರೆ, ಆ ಸಾಲವನ್ನಾ ಗಲಿ ಅದರ ಬಡ್ಡಿಯನ್ನಾಗಲಿ ಪಾವತಿ ಮಾಡುವುದಕ್ಕಾಗಿ ಬೇಕಾಗುವ ಹಣ ವನ್ನು ಅಲ್ಲಿಯ ಪ್ರಜೆಗಳಿಂದಲೇ ಹೆಚ್ಚುಹೆಚ್ಚು ತೆರಿಗೆಹಾಕಿ ಎತ್ತಿದರೂ, ಆ ಹಣ ಅವರಿಗೇ ಹಿಂತಿರುಗಿ ಹೋಗುತ್ತದೆ. ಆ ದೇಶದ ಪ್ರಜೆಗಳಿಗಾಗಿಯೇ ವೆಚ್ಚವಾಗು ವುದಕ್ಕಾಗಿ ಹೆಚ್ಚು ತೆರಿಗೆ ಕೊಡುವುದರಿಂದ ಅಲ್ಲಿಯ ಪ್ರಜೆಗಳಿಗೆ ಹೆಚ್ಚು ತೊಂದರೆ ಯುಂಟಾಗಲಾರದು. ಹಾಗಲ್ಲದೆ ಸಾಲ, ಪರರಾಷ್ಟ್ರಗಳಿಂದ ತಂದ ಸಾಲವಾ ದರೆ ಅದನ್ನೂ ಬಡ್ಡಿಯನ್ನೂ ಕೊಡುವುದಕ್ಕಾಗಿ ಪ್ರತಿವರ್ಷವೂ ದೇಶದ ಪ್ರಜೆಗಳಿಂದ ಎತ್ತಿ ಸಾಲ ತೀರಿಸುವಾಗ, ದೇಶದ ಪ್ರಜೆಗಳ ಆರ್ಥಿಕಶಕ್ತಿ ಕುಗ್ಗಿಹೋಗುತ್ತದೆ. ಆದುದರಿಂದ ವಸೂಲಾದ ತೆರಿಗೆ ಅಥವಾ ಅದರಲ್ಲಿನ ಬಹುಭಾಗ ಯಾವ ರೀತಿ ವೆಚ್ಚ ವಾಗುತ್ತದೆಯೆಂಬ ಅಂಶವನ್ನು ತಿಳಿದು ತೆರುವ ಶಕ್ತಿ ನಿರ್ಧರಿಸಬೇಕಾಗುತ್ತದೆ.

ಹಾಗೆಯೇ, ತೆರಿಗೆಯ ಮೂಲಕ ವಸೂಲಾದ ಹಣವನ್ನು ರಸ್ತೆಗಳ ನಿರ್ಮಾಣ, ನಾಲೆಗಳು, ಮೊದಲಾದ ಫಲಪ್ರದವಾದ ಕಾರ್ಯಗಳಿಗಾಗಿ ವೆಚ್ಚಮಾಡುತ್ತೇವೆ. ಇಂತಹ ಸಂದರ್ಭಗಳಲ್ಲಿ ತೆರಿಗೆಯ ಹೊರೆ ಏನೆಂಬುದನ್ನು ತಿಳಿಯಬೇಕಾದರೆ ಆ ಕೆಲಸಗಳಿಗಾಗಿ ವೆಚ್ಚವಾಗಿರುವ ಅಸಲು ಮೊತ್ತದಿಂದ ಉಂಟಾಗಿರುವ ಪ್ರತಿಫಲವನ್ನು ನಾವು ಗಮನಕ್ಕೆ ತೆಗೆದುಕೊಳ್ಳಬೇಕಾಗುವುದು. ಆದುದರಿಂದ ಯಾವ ಯಾವ ದೇಶ ಎಷ್ಟೆಷ್ಟು ವೆಚ್ಚಮಾಡಬಹುದು ಎಂಬುದು ಆ ವೆಚ್ಚದ ಉದ್ದೇಶವನ್ನು ಅನುಸರಿಸಿರು ತ್ತದೆ. ಒಂದು ದೇಶದ ಸೈನ್ಯದ ಮೇಲಾಗಲಿ, ನಾವೆಯ ಮೇಲಾಗಲಿ ಹಣವನ್ನು ವೆಚ್ಚಮಾಡಲು ಶಕ್ತಿ ಇಲ್ಲದಿರಬಹುದು. ಆದರೆ ಆ ದೇಶ ಪ್ರಗತಿಪರವಾದ ಕೆಲಸಗಳ ಮೇಲೆ ಹಣವನ್ನು ವೆಚ್ಚ ಮಾಡುವುದು ಸೂಕ್ತವಾದುದು. ಇದರಿಂದ ಮುಂದೆ ಆ ದೇಶದ ಜನರ ಆದಾಯ ಬೆಳೆದು ಸಂಪತ್ತು ಹೆಚ್ಚಿ ದೇಶದ ಶ್ರೇಯಸ್ಸು ಸಾಧ್ಯ ವಾಗುವುದು.

ಅಷ್ಟೇ ಅಲ್ಲದೆ ಒಂದು ದೇಶದ ತೆರುವ ಶಕ್ತಿ, ಅದರ ಆರ್ಥಿಕ ನೀತಿ ಮಾತ್ರವಲ್ಲದೆ ರಾಜಕೀಯ ಮತ್ತು ಮಾನಸಿಕ ಪ್ರಭಾವಗಳಿಗೆ ಬಲವಾಗಿ ಒಳಗಾಗಿರುತ್ತದೆ. ಒಂದು ದೇಶದ ತೆರುವ ಶಕ್ತಿ ಸಾಮಾನ್ಯ ಕಾಲಕ್ಕಿಂತ ಯುದ್ಧ ಕಾಲದಲ್ಲಿ ಹೆಚ್ಚುತ್ತದೆ. ಯುದ್ಧಕಾಲದಲ್ಲಿ ದೇಶಾಭಿಮಾನದಿಂದ ರಾಷ್ಟ್ರದ ರಕ್ಷಣೆಗಾಗಿ ತಮ್ಮ ಶ್ರಮವನ್ನು ಎಳ್ಳಷ್ಟೂ ಲೆಕ್ಕಿಸದೆ ಸರಕಾರಕ್ಕೆ ಹಣವನ್ನು ಒದಗಿಸಲು ಜನರು ಸಿದ್ಧರಾಗುತ್ತಾರೆ. ಅವರಿಗೆ ಸುಖಜೀವನದ ಆಶೆ ಮರೆಯಾಗುತ್ತದೆ. ಹಾಗೆಯೇ ಯುದ್ಧ ಮುಗಿದು, ರಾಷ್ಟ್ರದ ಪುನರ್ನಿರ್ಮಾಣ ಕಾರ್ಯಗಳು ನಡೆಯುವಾಗಲೂ ಪ್ರಜೆಗಳು ಹಣ ಒದಗಿಸಿಕೊಡಲು ಮುಂದೆ ಬರುತ್ತಾರೆ. ಕಳೆದ ಘೋರ ಯುದ್ಧವಾದ ಮೇಲೆ ನಿರುದ್ಯೋಗ ಸಮಸ್ಯಾ ಪರಿಹಾರಕ್ಕಾಗಿ, ರಣರಂಗದಲ್ಲಿ ಯುದ್ಧಮಾಡಿ ಸತ್ತ ಸೈನಿಕರ ಕುಟುಂಬಗಳ ರಕ್ಷಣೆಗಾಗಿ, ಉಳಿದ ಕುಂಟು, ಕುರುಡು, ಕಿವುಡು ಸೈನಿಕರ ಪೋಷಣೆಗಾಗಿ, ರಾಷ್ಟ್ರ ನಿರ್ಮಾಣಕಾರ್ಯಗಳಿಗಾಗಿ ಹಿಂದೆಂದೂ ಕೇಳದಷ್ಟು ತೆರಿಗೆಗಳನ್ನು ಹಾಕಲಾಯಿತು. ಅದನ್ನು ಪ್ರಜೆಗಳು ಮನಃಪೂರ್ವಕವಾಗಿ ಕೊಡಲು ಸಿದ್ಧರಾದರು.

ಆದುದರಿಂದ ಒಂದು ದೇಶದ ತೆರುವ ಶಕ್ತಿಯನ್ನು ಯಾವುದೋ ಸ್ಥೂಲವಾದ ಆರ್ಥಿಕ ಅಥವಾ ರಾಜಕೀಯ ದೃಷ್ಟಿಯಿಂದ ಅಳೆದು, ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ದೇಶದ ತೆರುವ ಶಕ್ತಿಯನ್ನು ಅರಿಯಬೇಕಾದರೆ, ವ್ಯಕ್ತಿಶಃ ಆ ದೇಶದ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ತಿಳಿಯಬೇಕು. ಇದರ ಜತೆಗೆ ಸ್ಥಳೀಯ ವಿದ್ಯಮಾನಗಳ ಪರಿಚಯವೂ ಬೇಕು. ಎಷ್ಟೋ ಸರಕಾರಗಳ ತಃಖ್ತೆಗಳಲ್ಲಿ ಅಲ್ಲಿಯ ಸ್ಥಳೀಯ ಸಂಸ್ಥೆಗಳ ಆದಾಯ ವೆಚ್ಚಗಳನ್ನೇ ಸೂಚಿಸಿರುವುದಿಲ್ಲ. ಇದನ್ನು ತಿಳಿಯದೆ ಅಲ್ಲಿಯ ತೆರುವ ಶಕ್ತಿಯನ್ನು ನಿರ್ಧರಿಸಲು ಸಾಧ್ಯವಾಗದು. ಒಂದು ದೇಶದ ಸ್ಥಳೀಯ ಸರಕಾರ ಇನ್ನೊಂದು ದೇಶಕ್ಕಿಂತ ಹೆಚ್ಚು ವ್ಯಾಪ್ತಿಯನ್ನೂ ಅಧಿಕಾರವನ್ನೂ ಪಡೆದಿರಬಹುದು. ಅದು ಅದರ ಪಕ್ಕದ ದೇಶಕ್ಕಿಂತ ಹೆಚ್ಚಾಗಿ ತೆರಿಗೆಯನ್ನು ವಸೂಲ್ಮಾಡುತ್ತಿರಬಹುದು. ಹಾಗೆಯೇ ಅನೇಕ ದೇಶಗಳಲ್ಲಿ ಕೇಂದ್ರ ಸರಕಾರ ಸ್ಥಳೀಯ ಸರಕಾರಗಳಿಗೆ ಸಹಾಯ ದ್ರವ್ಯವನ್ನು ಒದಗಿಸುತ್ತದೆ. ಮತ್ತಿತರ ಕಡೆಗಳಲ್ಲಿ ಈ ಪದ್ಧತಿ ಇಲ್ಲದಿರಬಹುದು. ತೆರುವ ಶಕ್ತಿಯನ್ನು ನಿರ್ಧರಿಸುವಾಗ ಇದನ್ನೂ ಗಮನದಲ್ಲಿಟ್ಟಿರಬೇಕು. ಇದರ ಜತೆಗೆ ದೇಶದ ಸಂಪತ್ತಿನ ಸೃಷ್ಟಿ ಮತ್ತು ವಿಂಗಡಣೆ ಕ್ರಮ, ಅಲ್ಲಿಯ ಹಣಕ್ಕಿರುವ ವಿಕ್ರಯಶಕ್ತಿ (Purchasing Power), ಜನರು ಸಲ್ಲಿಸುವ ಸೇವೆ, ಮೊದಲಾದುವುಗಳ ಪರಿಚಯವೂ ಆವಶ್ಯಕ.

ಒಟ್ಟಿನಲ್ಲಿ ತೆರಿಗೆ ಹಾಕುವುದರಿಂದ, ದೇಶದ ಆರ್ಥಿಕ ರಚನೆ ಮತ್ತು ಫಲದಾಯಕಶಕ್ತಿ, ಇವುಗಳ ಮೇಲೆ ಹೇಗೆ ಪರಿಣಾಮವಾಗಿದೆ ಎಂಬುದನ್ನು ಪರೀಕ್ಷಿಸಿದರೆ ತೆರುವ ಶಕ್ತಿಯನ್ನು ಕಂಡುಹಿಡಿಯಲು ಸಾಧ್ಯವಾಗುವುದು. ವಿಧಾಯಕ ಮಾಡಿದ ತೆರಿಗೆಯಿಂದ ದೇಶದ ಫಲದಾಯಕ ಶಕ್ತಿ ಕುಗ್ಗಿತೆಂದರೆ ಅಲ್ಲಿ ತೆರುವ ಶಕ್ತಿ ಪರಮಾವಧಿಯನ್ನು ಮುಟ್ಟಿತೆಂದರ್ಥ. ಕಾಲ, ದೇಶ, ಸನ್ನಿವೇಶಗಳು ವ್ಯತ್ಯಾಸವಾದಂತೆಲ್ಲಾ ತೆರುವ ಶಕ್ತಿಯೂ ವ್ಯತ್ಯಾಸವಾಗುತ್ತದೆ.

ಸಾಧಾರಣವಾಗಿ ಒಂದು ದೇಶದ ತೆರುವ ಶಕ್ತಿಯನ್ನು ಈ ಆರು ದೃಷ್ಟಿಗಳಿಂದ ನಿರ್ಧರಿಸುವುದು ಸಂಪ್ರದಾಯವಾಗಿದೆ :—

೧. ತೆರಿಗೆಯ ರೀತಿ,
೨. ದೇಶದ ಪ್ರಜಾಸಂಖ್ಯೆ ಮತ್ತು ಅಲ್ಲಿಯ ಉತ್ಪತ್ತಿ,
೩. ಉತ್ಪನ್ನ ವಸ್ತುಗಳ ಮತ್ತು ಕಾರ್ಯಗಳ ಸ್ವಭಾವ,
೪. ತೆರಿಗೆಯ ಉದ್ದೇಶ ಅಥವಾ ವಸೂಲಾದ ತೆರಿಗೆ ವರಮಾನ ವೆಚ್ಚವಾಗುವ ರೀತಿ,
೫. ಅಲ್ಲಿಯ ಸಂಪತ್ತು ಹಂಚಿಕೆಯಾಗಿರುವ ರೀತಿ, ಮತ್ತು
೬. ರಾಜಕೀಯ ಮತ್ತು ಮಾನಸಿಕ ಪ್ರಭಾವಗಳು

ಇವುಗಳನ್ನ ದೃಷ್ಟಿಯಲ್ಲಿಟ್ಟುಕೊಂಡಿದ್ದರೆ ದೇಶದ ತೆರುವ ಶಕ್ತಿಯನ್ನು ಸ್ಥೂಲವಾಗಿ ನಿರ್ಧರಿಸಬಹುದು.

## ತೆರುವ ಶಕ್ತಿಯನ್ನು ಅಳೆಯಲು ಸಾಧ್ಯವೇ ?

ತೆರುವ ಶಕ್ತಿಯನ್ನು ಅಳೆಯುವುದು ಕಷ್ಟಸಾಧ್ಯವಾದ ಕೆಲಸ. ಆದರೂ ಇದನ್ನು ಕಂಡುಹಿಡಿಯಲು ಎರಡು ಸ್ಥೂಲವಾದ ಮಾರ್ಗಗಳಿವೆ ಅದರಲ್ಲಿ ಒಂದು ಮಾರ್ಗವನ್ನು ಬ್ರಿಟನ್ನಿನಲ್ಲಿ ಅನುಸರಿಸುತ್ತಾರೆ. ಇದು ಆದಾಯ ತೆರಿಗೆ, ಆಸ್ತಿಯ ಮೇಲಿನ ತೆರಿಗೆ, ಇತರ ಪ್ರತ್ಯಕ್ಷ ತೆರಿಗೆಗಳು ಮೊದಲಾದುವುಗಳನ್ನು ತೆರುವವರ ಲೆಕ್ಕದಲ್ಲಿ ದೊರೆವ, ತೆರಿಗೆ ಕಳೆದು, ಉಳಿತಾಯವಾದ ಹಣವನ್ನು ವಿಮರ್ಶೆಮಾಡುವ ಮಾರ್ಗ. ಈ ಮಾರ್ಗವನ್ನು ಎಲ್ಲ ದೇಶಗಳಲ್ಲಿಯೂ ಅನುಸರಿಸಲು ಸಾಧ್ಯವಿಲ್ಲ. ಬ್ರಿಟನ್ನಿನಲ್ಲಿ ಪ್ರತಿಯೊಬ್ಬ ಪ್ರಜೆಯ ಆದಾಯ ಮತ್ತು ತೆರಿಗೆಗಳ ಲೆಕ್ಕ ಪತ್ರಗಳು ಬಹು ಸಾಮರ್ಥ್ಯದಿಂದಲೂ ಶಾಸ್ತ್ರೀಯವಾಗಿಯೂ ಶೇಖರಿಸಲ್ಪಡುತ್ತವೆ. ಇದರಿಂದ ಅಲ್ಲಿ ಅದು ಸಾಧ್ಯ. ಆ ದೇಶದಲ್ಲಿ ಆದಾಯ ತೆರಿಗೆಯ ವರಮಾನದಲ್ಲಿಯೇ ಭಾಗವಿಭಾಗಗಳನ್ನೂ ಮಾಡಿದ್ದಾರೆ: ೧. ಸಾಲರೂಪದಲ್ಲಿ ಕೊಟ್ಟ ಹಣದ ಮೇಲೆ ಬಡ್ಡಿ. ೨. ಮನೆ ಜಮೀನಿನ ಆದಾಯ. ೩. ವ್ಯವಸಾಯದಿಂದ ಬರುವ ಲಾಭ. ೪ ಉದ್ಯೋಗದಿಂದ ಬರುವ ವರಮಾನ. ೫ ವೃತ್ತಿಯಿಂದ ಬರುವ ಆದಾಯ ಮತ್ತು ೬. ವ್ಯಾಪಾರದಿಂದ ಬರುವ ಲಾಭ—ಇವುಗಳೆಲ್ಲದರ ಮೇಲೂ ಅವರು ತೆರಿಗೆ ಹಾಕುತ್ತಾರೆ. ಇವುಗಳೆಲ್ಲದರ ಲೆಕ್ಕ ಪತ್ರಗಳು ಸುಲಭವಾಗಿ ದೊರೆಯುತ್ತವೆ. ಆ ಅಂಕಿ ಅಂಶಗಳ ಆಧಾರದ ಮೇಲೆ, ಪ್ರಜೆಗಳ ನಿವ್ವಳ ಆದಾಯವನ್ನು ಕಂಡುಹಿಡಿದು, ಅಲ್ಲಿ ಅವರ ತೆರುವಶಕ್ತಿ ಇಷ್ಟೆಂದು ನಿರ್ಧರಿಸುವುದು ಸುಲಭ.

ಓದುಗರ ಅವಗಾಹನೆಗಾಗಿ ಬ್ರಿಟನ್ನಿನ ಮತ್ತು ಬ್ರಿಟಿಷ್ ಇಂಡಿಯಾದ ತೆರುವ ಶಕ್ತಿಯನ್ನು ತೋರಿಸುವ ಎರಡು ಪಟ್ಟಿಗಳನ್ನು ಇಲ್ಲಿ ಕೊಡಲಾಗಿದೆ. ಬ್ರಿಟನ್ನಿನ ತೆರುವ ಶಕ್ತಿ ಮಹಾಯುದ್ಧಕ್ಕಿಂತ ಈಚೆಗೆ ಹೇಗೆ ವ್ಯತ್ಯಾಸವಾಗಿದೆ ಎಂಬುದನ್ನು ಇಲ್ಲಿಯ ಅಂಕಿಗಳಿಂದ ಕಾಣಬಹುದು.

## ಬ್ರಿಟನ್ನಿನ ತೆರುವ ಶಕ್ತಿ *

(ಹತ್ತು ಲಕ್ಷ ಪೌಂಡುಗಳಲ್ಲಿ)

| | ಮಹಾಯುದ್ಧಕ್ಕೆ ಮೊದಲು ೧೯೧೩-೧೪ | ೧೯೨೧-೨೨ | ೧೯೨೨-೨೩ |
|---|---|---|---|
| ೧. ಆದಾಯಕ್ಕೂ ವೆಚ್ಚಕ್ಕೂ ಇರುವ ಅಂತರ. | ೭೫೦ | ೯೬೦ | ೮೧೦ |
| ೨. ಆಸ್ತಿಯ ಉಳಿವು ಮತ್ತು ಬೆಳವಣಿಗೆಗಾಗಿ ಉಳಿಸುವ ಹಣ. | ೫೦೦ | ೧೫೦ | ೧೪೦ |
| ತೆರುವ ಶಕ್ತಿ (೧–೨) | ೨೫೦ | ೮೧೦ | ೬೭೦ |
| ೩. ಬಡ್ಜೆಟ್ (ತೆರಿಗೆಯಿಂದ ಪ್ರತ್ಯೇಕವಾದ ಆದಾಯವನ್ನುಳಿದು) | ೧೬೩ | ೯೬೪ | ೭೨೯ |
| ೪. ಸರಕಾರದ ಸಾಲದ ಮೇಲೆ ಕೊಟ್ಟ ಬಡ್ಡಿ. | ೧೫ | ೨೦೦ | ೨೦೦ |
| ೫. ದೇಶದ ಒಳಗಣ ಸರಕಾರದ ಸಾಲ ತೀರ್ವೆಗಾಗಿ. | ೧೦ | ೧೦೦ | ೧೦೦ |
| ಖಚಿತವಾದ ತೆರಿಗೆ: ೩–(೪+೫) | ೧೩೮ | ೬೬೪ | ೪೨೯ |
| ಉಳಿದಿರುವುದು ... | ೧೧೨ | ೧೪೬ | ೨೪೧ |

* ಈ ಪಟ್ಟಿಗಳನ್ನು ಷಿರಾಸ್ ಅವರ The Science of Public Finance ಎಂಬ ಪುಸ್ತಕದಿಂದ ತೆಗೆದುಕೊಂಡಿದೆ.

ಈ ಅಂಕಿಗಳಿಂದ ಕಂಡುಬರುವ ದೇಶದ ತೆರುವ ಶಕ್ತಿಯನ್ನು ಈ ರೀತಿ ತೋರಿಸ ಬಹುದು :—

| | ಘೋರಯುದ್ಧಕ್ಕೆ ಮೊದಲು ೧೯೧೩-೧೪ | ೧೯೨೧-೨೨ | ೧೯೨೨-೨೩ |
|---|---|---|---|
| ದೇಶದ ಆದಾಯ ಮತ್ತು ವೆಚ್ಚ-ಇವುಗಳಿಗಿರುವ ಅಂತರದಿಂದ ಕಾಣುವ ಶೇಕಡ ತೆರುವ ಶಕ್ತಿ. | ೩೩ | ೮೪ | ೮೩ |
| ತೆರಿಗೆ ವರಮಾನದ ಬಡ್ತಿಯಿಂದ ಸೂಚಿತವಾದ ಶೇಕಡ ತೆರುವ ಶಕ್ತಿ. | ೧೮ | ೬೯ | ೫೩ |
| ಶೇಕಡ ತೆರುವ ಶಕ್ತಿಯನ್ನು ಸೂಚಿಸುವ ಉಳಿತಾಯ (Balance). | ೪೫ | ೧೮ | ೩೬ |

ತೆರುವ ಶಕ್ತಿಯನ್ನು ಕಂಡುಹಿಡಿಯಲು ಎರಡು ಮಾರ್ಗಗಳಿವೆಯೆಂದು ಮೇಲೆ ಸೂಚಿಸಿದೆ. ಎರಡನೆಯದು, ಸಂಪತ್ತಿನ ಉತ್ಪತ್ತಿ ಅಥವಾ ಆದಾಯದ ಮಾರ್ಗ (Productive) ವೆನ್ನಬಹುದು. ಎಂದರೆ ಯಾವ ಯಾವ ಬಾಬಿನಿಂದ ಎಷ್ಟೆಷ್ಟು ಆದಾಯವಿದೆ ಎಂಬುದನ್ನೂ ಒಟ್ಟು ಆದಾಯವೇನೆಂಬುದನ್ನೂ ಕಂಡುಹಿಡಿದು ಅದರ ಮೇಲೆ ತೆರುವ ಶಕ್ತಿಯನ್ನು ನಿರ್ಧರಿಸುವುದು ಎರಡನೆಯ ಮಾರ್ಗ.

ಈ ಎರಡನೆಯ ಮಾರ್ಗವನ್ನು ಅನುಸರಿಸಿ, ಬ್ರಿಟಿಷ್ ಇಂಡಿಯದ ತೆರುವ ಶಕ್ತಿಯು ಈ ಕೆಳಗೆ ಕಂಡಂತೆ ಸ್ಥೂಲವಾಗಿ ನಿರ್ಧರಿಸಲ್ಪಟ್ಟಿದೆ:—

## ಬ್ರಿಟಿಷ್ ಇಂಡಿಯಾದ ತೆರುವ ಶಕ್ತಿ

(ಲಕ್ಷ ರೂಪಾಯಿಗಳಲ್ಲಿ)

| ವಿವರ | ೧೯೧೦—೧೪<br>೧೧ | ೧೯೨೦—೨೧<br>೨೧ ಮುಗ್ಗಟ್ಟಿನ ವರುಷ | ೧೯೨೧—೨೨ ವ್ಯವಸಾಯ ಚೆನ್ನಾಗಿ ಆದರೂ, ವ್ಯಾಪಾರದ ಮುಗ್ಗಟ್ಟಿತ್ತು. |
|---|---|---|---|
| ೧. ಆದಾಯ:— | | | |
| ವ್ಯವಸಾಯ ... | ೧,೪೧,೨೦೧ | ೧,೭೧೫,೦೦ | ೧,೯೮೩,೦೦ |
| ವ್ಯವಸಾಯೇತರ ... | ೫೩,೩೦೦ | ೮೮೩,೦೦ | ೮೮೩,೦೦ |
| ಒಟ್ಟು ... | ೧,೯೪,೨೦೦ | ೨,೫೯೮,೦೦ | ೨,೮೬೬,೦೦ |
| ೨. ಅತ್ಯಲ್ಪವೆಚ್ಚ ... | ೧,೨೧೪,೦೦ | ೨,೨೨೦,೦೦ | ೨,೨೨೦,೦೦ |
| ೩. ಗೊಬ್ಬರ ಬಿತ್ತನೆ ಬಾಬುಗಳಿಗೆ ... | ೧೪೧,೦೦ | ೧೭೨,೦೦ | ೧೯೮,೦೦ |
| ೪. ಆಸ್ತಿ ಕುಗ್ಗದಿರುವುದಕ್ಕೆ ಉಳಿಸಿದ ಹಣ. | ೨೫,೦೦ | ೪೫,೦೦ | ೫೫,೦೦ |
| ೫. ತೆರುವ ಶಕ್ತಿ ೧—(೨+೩+೪) | ೫೬೨,೦೧ | ೧೬೧,೦೦ | ೩೯೩,೦೦ |
| ೬. ತೆರಿಗೆಯಿಂದ ಆದಾಯ :-ಕೇಂದ್ರ ಮತ್ತು ಪ್ರಾಂತ ಸರಕಾರಗಳು. | ೭೯,೮೩ | ೧೩೦,೧೫ | ೧೩೫,೩೦ |
| ಸ್ಥಳೀಯ ... | ೭೧೭ | ೧೧,೬೪ | ೧೧,೬೪ |
| ಒಟ್ಟು ... | ೮,೭೦೦ | ೧೪,೧೭೯ | ೧೪,೬೯೪ |
| ೭. ಒಳಗಣ ಸಾಲಕ್ಕಾಗಿ ವೆಚ್ಚ:-ಕೇಂದ್ರ ಮತ್ತು ಪ್ರಾಂತ ಸರಕಾರಗಳು. | ೫,೬೧ | ೨೧,೦೪ | ೨೪,೨೬ |
| ಸ್ಥಳೀಯ ... | ೧,೭೦ | ೨,೩೪ | ೨,೩೯ |
| ಒಟ್ಟು ... | ೭,೩೧ | ೨೩,೩೮ | ೨೬,೫೧ |
| ೮. ಖಚಿತವಾದ ತೆರಿಗೆ (೬—೭) ... | ೭೯,೬೯ | ೧೧೮,೬೧ | ೧೨೯,೩೩ |
| ೯. ಉಳಿದಿರುವುದು (೫—೮) ... | ೪೮೨,೩೧ | ೪೨,೩೯ | ೨೬೨,೬೪ |

ಈ ಅಂಕಿಗಳ ಆಧಾರದಿಂದಲೇ ಇಂಡಿಯಾದೇಶದಲ್ಲಿ ತೆರುವ ಶಕ್ತಿ ಹೆಚ್ಚು ಉಳಿದಿದೆ ಎಂದೂ ಇನ್ನೂ ಹೆಚ್ಚು ತೆರಿಗೆಯನ್ನು ಪ್ರಜೆಗಳ ಮೇಲೆ ವಿಧಿಸಿ ಸರಕಾರದ ಆದಾಯವನ್ನು ಹೆಚ್ಚಿಸಿಕೊಳ್ಳಬಹುದೆಂದೂ ಭಾವಿಸಬಾರದು. ಆದರೂ ಸರಕಾರದ ವರಮಾನವನ್ನು ಇನ್ನೂ ತೆರಿಗೆಯ ಮೂಲಕವೇ ಹೆಚ್ಚಿಸಿಕೊಳ್ಳಲೂ ಮಾತ್ರ ಅವಕಾಶ ವಿದೆ ಎಂಬುದು ವ್ಯಕ್ತವಾಗುತ್ತದೆ. ಸೈಮನ್ ಕಮಿಷನ್ನಿಗೆ ಹಣಕಾಸಿನ ಸಲಹೆಗಾರ ರಾಗಿದ್ದ ಸರ್ ವಾಲ್ಟರ್ ಲೇಟನ್ ಎಂಬುವರೂ ಇದೇ ರೀತಿ ಅಭಿಪ್ರಾಯಪಟ್ಟಿದ್ದಾರೆ.

ನಮ್ಮ ದೇಶದಲ್ಲಿ ಬಹು ಮಂದಿ ಕಡು ಬಡವರು. ಆದರೂ ಕೆಲವೆಡೆಗಳಲ್ಲಿ ಅಲ್ಪ ಸಂಖ್ಯೆಯಲ್ಲಿ ಕೋಟ್ಯಂತರ ರೂಪಾಯಿಗಳನ್ನು ಪಡೆದಿರುವ ಧನಿಕರಿದ್ದಾರೆ. ಅವರು ಹೆಚ್ಚು ತೆರಿಗೆಯನ್ನು ತೆತ್ತು ಸರಕಾರದ ವರಮಾನವನ್ನು ಹೆಚ್ಚಿಸಲು ಶಕ್ತ ರಾಗಿದ್ದಾರೆ. ಅವರ ಮೇಲೆ ಈಗಿರುವ ತೆರಿಗೆಯ ಹೊರೆ ಬಹಳ ಲಘುವಾಗಿದೆ. ತೆರುವ ಶಕ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ತೆರಿಗೆಯನ್ನು ವಿಧಿಸಿದರೆ ಅಸಾಧ್ಯ ವಾಗದಿರಬಹುದು. ಅತ್ಯಾವಶ್ಯಕವಾಗಿ ಜೀವನಯಾತ್ರೆಗೆ ಬೇಕಾಗುವ ವಸ್ತು ಗಳ ಮೇಲೆ ತೆರಿಗೆಯನ್ನು ಹೆಚ್ಚಿಸದೆ ಕೊಡಬಲ್ಲವರ ಶಕ್ತಿಗಳಿಗನುಸಾರವಾಗಿ ತೆರಿಗೆ ಹಾಕಿದರೆ ಅದನ್ನು ಸಹಿಸಲು ಅವರಿಗೆ ಸಾಧ್ಯ. ಆಗ ಸರಕಾರಕ್ಕೂ ಹಣ ಒದಗು ತ್ತದೆ. ಅಷ್ಟೇ ಅಲ್ಲದೆ ತೆರಿಗೆಯಿಂದ ವಸೂಲಾದ ಹಣವನ್ನು ದೇಶಾಭ್ಯುದಯ ಕಾರ್ಯಗಳಿಗಾಗಿಯೇ ವಿನಿಯೋಗಿಸಿದರೆ, ಪ್ರಜೆಗಳು ಅಂತಹ ತೆರಿಗೆಯನ್ನು ಸಲ್ಲಿಸಲು ಎಂದಿಗೂ ಹಿಂತೆಗೆಯಲಾರರು ಎಂಬುದನ್ನು ಮರೆಯಬಾರದು.

# ಪ್ರಕರಣ ೧೨

## ಸರಕಾರದ ಆಯವ್ಯಯ ವಿಭಜನೆ

ಸರಕಾರದ ರಚನೆಯಲ್ಲಿ ಸ್ಥಳಸಂಸ್ಥೆ ಮತ್ತು ಕೇಂದ್ರಸಂಸ್ಥೆಗಳಿಗೆ ಪ್ರತ್ಯೇಕವಾದ ಸ್ಥಾನವಿರುತ್ತದೆ. ಕೇಂದ್ರ ಸಂಸ್ಥೆಯ ಹತೋಟಿಯು ಎಲ್ಲ ಸಾರ್ವಜನಿಕ ಸಂಸ್ಥೆಗಳ ಮೇಲಿದ್ದಾಗ್ಗೂ, ಸ್ಥಳಸಂಸ್ಥೆಗಳ ಮತ್ತು ಕೇಂದ್ರಸರಕಾರದ ಆಯವ್ಯಯ ವಿಭಜನೆಗೆ ಬೇಕಾದಷ್ಟು ಅವಕಾಶವಿದೆ. ಈಚೆಗೆ ಸ್ಥಳಸಂಸ್ಥೆಗಳ ಪ್ರಾಬಲ್ಯ ಮತ್ತು ಪ್ರಭಾವ ಹೆಚ್ಚಿರುವ ಚಿಹ್ನೆಗಳು ಕಂಡುಬರುತ್ತಿವೆ. ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯಲ್ಲಿ ಕೇಂದ್ರ ಮತ್ತು ಅಂಗಸಂಸ್ಥೆಗಳಿಗೆ ಬೇರೆ ಬೇರೆ ಸ್ಥಾನವಿರುತ್ತದೆ. ಪ್ರಧಾನ ಸರಕಾರ, ಪ್ರಾಂತ ಸರಕಾರ, ಮತ್ತು ಸ್ಥಳ ಸರಕಾರವೆಂಬ ಮೂರು ಬಗೆಯ ಸಾರ್ವಜನಿಕ ಸಂಸ್ಥೆಗಳ ಆಯವ್ಯಯ ವಿಭಜನೆಗೆ ಶಾಸನಕಾರರು ನಿಯಮಗಳನ್ನು ಮಾಡಬೇಕು.

ಸಾರ್ವಜನಿಕ ಸಂಸ್ಥೆಗಳ ವೆಚ್ಚಕ್ಕೆ ಬೇಕಾಗುವ ಹಣವನ್ನೆಲ್ಲಾ ಬಹುಮಟ್ಟಿಗೆ ಒದಗಿಸುವವರು ಅದರ ಆಡಳಿತಕ್ಕೆ ಒಳಪಟ್ಟ ಪ್ರಜೆಗಳು. ಹಾಗೆ ಕೂಡಿಸಿ ವೆಚ್ಚಮಾಡಿದ ದ್ರವ್ಯದ ಪ್ರಯೋಜನವೂ ಬಹುಮಟ್ಟಿಗೆ ಆ ಪ್ರಜೆಗಳಿಗೇ ದೊರೆಯುತ್ತದೆಯೆಂದು ಹೇಳಬಹುದು. ಹೀಗಿದ್ದಾಗ್ಗೂ ಸರಕಾರದ ಹುಟ್ಟುವಳಿ ಮತ್ತು ವೆಚ್ಚಗಳಲ್ಲಿ ಒಂದು ವಿಧದ ವಿಭಜನೆಯ ಕ್ರಮವನ್ನರಿತು ಆ ಸಂಸ್ಥೆಗಳು ಕಾರ್ಯನಿರ್ವಾಹ ಮಾಡುವುದು ಶಾಸ್ತ್ರಸಮ್ಮತವಾದುದು. ಇದರಿಂದ ರಾಷ್ಟ್ರದ ಮತ್ತು ಪ್ರಜೆಗಳ ಹಿತಸಾಧನೆಗೆ ಹೆಚ್ಚಿನ ಅನುಕೂಲವಾಗುತ್ತದೆ. ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯಲ್ಲಿ ಕೇಂದ್ರ ಅಥವಾ ಪ್ರಧಾನ ಸರಕಾರದ ತೆರಿಗೆ, ವೆಚ್ಚ, ಅಂಗ ಅಥವ ಪ್ರಾಂತ ಸರಕಾರಗಳ ತೆರಿಗೆ ಮತ್ತು ವೆಚ್ಚ, ಸ್ಥಳಸಂಸ್ಥೆಗಳ ತೆರಿಗೆ ಮತ್ತು ವೆಚ್ಚವೆಂದು, ಮೂರು ವಿಧವಾಗಿ ಸರಕಾರದ ಆಯವ್ಯಯ ವಿಂಗಡನೆಯಾಗಬೇಕು. ಇಂಗ್ಲೆಂಡಿನಂತಹ ಏಕರೂಪ (Unitary) ಸರಕಾರವಿರುವ ರಾಜ್ಯಗಳಲ್ಲಿ ಕೇಂದ್ರ ಅಥವ ಪ್ರಧಾನ ಸರಕಾರದ ತೆರಿಗೆ ಮತ್ತು ವೆಚ್ಚ, ಸ್ಥಳಸಂಸ್ಥೆಗಳ ತೆರಿಗೆ ಮತ್ತು ವೆಚ್ಚವೆಂಬ ಎರಡು ವಿಧವಾದ ವಿಂಗಡಣೆಗೆ ಮಾತ್ರ ಅವಕಾಶವಿದೆ. ಇಲ್ಲಿ ಸ್ಥಳಸಂಸ್ಥೆಗಳ ಆಯವ್ಯಯವನ್ನು ಬೇರೊಂದು ಪ್ರಕರಣದಲ್ಲಿ ಸೂಚಿಸಲಾಗಿದೆ. ಇಲ್ಲಿ ಪ್ರಧಾನ ಸರಕಾರಕ್ಕೂ ಅಂಗ ಸರಕಾರಕ್ಕೂ ಅನ್ವಯಿಸುವ ಆಯವ್ಯಯ ವಿಭಜನೆಗೆ ಸಂಬಂಧಿಸಿದ ಕೆಲವು ಅಂಶಗಳನ್ನು ಹೇಳಲಾಗಿದೆ.

ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ಏರ್ಪಟ್ಟಿರುವ ರಾಷ್ಟ್ರಗಳಲ್ಲೆಲ್ಲಾ ಕೇಂದ್ರ ಮತ್ತು ಪ್ರಾಂತ ಸರಕಾರಗಳ ಕಾರ್ಯಕಲಾಪಗಳು ಇಂತಹುವೆಂದು

ಮೊದಲೇ ತೀರ್ಮಾನವಾಗಿರುತ್ತದೆ. ರಾಷ್ಟ್ರದ ಹಿತಸಾಧನೆಯ ದೃಷ್ಟಿಯಿಂದ ಸರಕಾರ ನಡಸಬೇಕಾದ ಕೆಲಸಗಳಲ್ಲಿ ಕೆಲವನ್ನು ಕೇಂದ್ರಸರಕಾರವೂ ಮತ್ತೆ ಕೆಲವನ್ನು ಪ್ರಾಂತಸರಕಾರಗಳೂ ನಡಸುವುದು ಶ್ರೇಯಸ್ಕರ ಮತ್ತು ಉಚಿತ. ಆದುದರಿಂದ ಈ ರೀತಿಯ ಕಾರ್ಯವಿಭಾಗವೇರ್ಪಟ್ಟಿದೆ. ಆಯಾ ಸರಕಾರಗಳ ಹಣ ಕಾಸಿನ ವ್ಯವಸ್ಥೆ ಕೂಡ ಇದೇ ತತ್ವದಮೇಲೆಯೇ ನಿರ್ಧರವಾಗಿದೆ. ಪ್ರಧಾನ ಮತ್ತು ಪ್ರಾಂತ ಸರಕಾರಗಳಿಗೆ ವಿಧಿಸಿರುವ ಕೆಲಸಗಳನ್ನು ಸಲೀಸಾಗಿ ನಡಸಿಕೊಂಡು ಹೋಗಲು ಎಷ್ಟು ಹಣ ಬೇಕೋ ಅಷ್ಟೂ ಆಯಾ ಸರಕಾರಗಳಿಗೆ ಒದಗುವಂತಿರಬೇಕು. ಸಾಮಾನ್ಯವಾಗಿ ಆ ಸರಕಾರಗಳಿಗೆ ಆವಶ್ಯಕವಾಗಿ ಬೇಕಾದ ಹಣವನ್ನು ಆಯಾ ಪ್ರಾಂತಗಳಲ್ಲೇ ಎತ್ತುವ ತೆರಿಗೆ ಕ್ರಮವನ್ನು ಈ ಸರಕಾರಗಳು ಅನುಸರಿಸುತ್ತವೆ. ಇದರಿಂದ ಹೆಚ್ಚು ಅನ್ಯೋನ್ಯಾಶ್ರಯವಿಲ್ಲದೆ ಈ ಸರಕಾರಗಳು ಸ್ವತಂತ್ರವಾಗಿ ಕೆಲಸ ಮಾಡಲು ಸಹಾಯವಾಗುತ್ತದೆ. ಆ ಸರಕಾರಗಳು ತಮ್ಮ ಖರ್ಚಿಗೆ ಬೇಕಾದ ಹಣವನ್ನು ತಮ್ಮ ಪ್ರಾಂತದ ಜನರಿಂದಲೇ ತೆರಿಗೆಯ ಮೂಲಕ ಪಡೆಯ ಬೇಕು. ಅಷ್ಟೇ ಅಲ್ಲದೆ ಸರಕಾರಗಳು ಈ ನಿಯಮಕ್ಕೆ ಒಳಪಡುವುದರಿಂದ ಅಲ್ಲಿಯ ಜನರು ನಾನಾವಿಧವಾಗಿ, ತಿಳಿದೂ ತಿಳಿಯದೆ, ತೆರಿಗೆಯನ್ನು ಕೊಡಬೇಕಾಗು ವುದನ್ನು ತಪ್ಪಿಸಬಹುದು.

ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ಏರ್ಪಟ್ಟಿರುವ ರಾಷ್ಟ್ರಗಳಲ್ಲೆಲ್ಲಾ ಪ್ರಧಾನ ಮತ್ತು ಅಂಗಸರಕಾರಗಳ ಆಯವ್ಯಯ ವಿಭಜನೆ ಒಂದೇ ರೀತಿಯಾಗಿರಲು ಸಾಧ್ಯ ವಿಲ್ಲ. ಅಲ್ಲಿಯ ಆಯವ್ಯಯ ವಿಭಜನೆ ಆ ಸರಕಾರಗಳು ಹುಟ್ಟಿ ಬೆಳೆದ ಬಗೆ, ಅವುಗಳ ಚಾರಿತ್ರಕ ಹಿನ್ನೆಲೆ, ಅಲ್ಲಿಯ ಸಾಮಾಜಿಕ ಪರಿಸ್ಥಿತಿ, ಇವುಗಳನ್ನು ಅನುಸರಿಸುವ ಕಾರ್ಯವಿಭಜನೆಯ ಮೇಲೆ ನಿಂತಿದೆ.

ಅಮೆರಿಕಾದಲ್ಲಿ ಸಂಯುಕ್ತ ರಾಜ್ಯಾಂಗವ್ಯವಸ್ಥೆ ಇದೆ. ಆಸ್ಟ್ರೇಲಿಯದಲ್ಲಿಯೂ ಇದೇ ವಿಧವಾದ ಸರಕಾರ. ಇಂಡಿಯಾದೇಶಕ್ಕೂ ಸಂಯುಕ್ತ ಸರಕಾರ ಬರು ವುದಿದೆ. ಈ ಎಲ್ಲ ದೇಶಗಳ ಸರಕಾರಗಳನ್ನೂ "ಸಂಯುಕ್ತ ಸರಕಾರ" ವೆಂಬ ಒಂದು ಹೆಸರಿನಿಂದ ಕರೆದರೂ, ಆ ಸರಕಾರಗಳ ರೂಪರಚನೆಗಳಲ್ಲಿ ವ್ಯತ್ಯಾಸಗಳಿವೆ. ಅಮೆರಿಕಾ ಖಂಡದ ಅನೇಕ ಪ್ರಾಂತಗಳೂ, ಅವುಗಳ ಸರಕಾರಗಳೂ ಒಟ್ಟು ಸೇರಿ ತಮ್ಮ ರಕ್ಷಣೆ ಮತ್ತು ಸೌಕರ್ಯಗಳಿಗಾಗಿ ಕೇಂದ್ರ ಸರಕಾರವೊಂದನ್ನು ಸೃಷ್ಟಿ ಮಾಡಿ ಕೊಂಡಿವೆ. ಅಲ್ಲಿ ಕೇಂದ್ರ ಮತ್ತು ಪ್ರಾಂತ ಸರಕಾರಗಳಿಗಿಂತ ಸ್ಥಳೀಯ ಸರಕಾರ ಗಳು ಪ್ರಬಲವಾಗಿವೆ. ಆಸ್ಟ್ರೇಲಿಯಾದಲ್ಲಿ ಪ್ರಧಾನಸರಕಾರಕ್ಕಿಂತ ಪ್ರಾಂತಸರಕಾರ ಪ್ರಬಲವಾಗಿದೆ. ಇಂಡಿಯಾ ದೇಶದ ಸ್ಥಿತಿ ಹೀಗಲ್ಲ. ಇಲ್ಲಿ ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ಏರ್ಪಟ್ಟರೂ, ಅದರ ರಚನೆ, ಅಮೆರಿಕ ಮತ್ತು ಆಸ್ಟ್ರೇಲಿಯಗಳ ಸಂಯುಕ್ತ ಸರಕಾರದಂತಿರುವುದಿಲ್ಲ. ಇಂಡಿಯಾ ದೇಶದಲ್ಲಿ ಕೇಂದ್ರ ಸರಕಾರ ಪ್ರಾಂತ ಸರಕಾರಗಳನ್ನು ಸೃಷ್ಟಿಮಾಡಿದೆ. ಆದುದರಿಂದ ಸ್ವಾಭಾವಿಕವಾಗಿ ಕೇಂದ್ರ ಸರಕಾರದ ಶಕ್ತಿ ಹೆಚ್ಚು. ಹೀಗೆ "ಸಂಯುಕ್ತ ಸರಕಾರ" ದ ರೂಪರಚನೆಗಳಲ್ಲಿರುವ ವ್ಯತ್ಯಾಸದಿಂದ ಅಲ್ಲಿಯ ಪ್ರಧಾನ ಮತ್ತು ಅಂಗ ಸರಕಾರಗಳ ಆಯವ್ಯಯ

ವಿಭಜನೆಯಲ್ಲಿ ವೈವಿಧ್ಯ ಕಂಡುಬಂದರೂ, ಆ ಆಯವ್ಯಯ ವಿಭಜನೆ, ಸ್ಥೂಲವಾಗಿ ಕೆಲವು ನಿಯಮಗಳನ್ನು ಅನುಸರಿಸುವುದು ನಮಗೆ ಗೋಚರವಾಗುತ್ತದೆ.

ಒಂದು ರಾಷ್ಟ್ರದ ಯಾವ ಶಾಸನಗಳನ್ನು ಅಲ್ಲಿಯ ಸಂಯುಕ್ತಸರಕಾರ ಮಾತ್ರ ವಿಧಾಯಕ ಮಾಡಲು ಅಧಿಕಾರವನ್ನು ಪಡೆದಿದೆಯೋ, ಆ ಬಾಬುಗಳಿಂದ ಹುಟ್ಟುವ ಆದಾಯ ಸಂಯುಕ್ತ ಸರಕಾರದ ಆದಾಯವೆಂದು ಭಾವಿಸಬೇಕು. ಈ ಆದಾಯ ಆ ಸರಕಾರದ ವೆಚ್ಚಕ್ಕೆ ಸಾಕಾಗುವಷ್ಟಿರಬೇಕು ; ಅದು ಸ್ಥಾಯಿ (Stable) ಯಾದುದಾಗಿರಬೇಕು. ಅಲ್ಲದೆ, ವಿಶೇಷ ಸಮಯಗಳಲ್ಲಿ, ಈ ಆದಾಯ ಹೆಚ್ಚು ವಂತಿರಬೇಕು. ಅಂಗ ಸರಕಾರಗಳು ಯಾವ ಶಾಸನಗಳನ್ನು ನಿರ್ಮಾಣ ಮಾಡಲು ಅರ್ಹತೆಯನ್ನು ಪಡೆದಿವೆಯೋ ಆ ಬಾಬುಗಳಿಂದ ಬರುವ ಹುಟ್ಟುವಳಿ, ಆ ಪ್ರಾಂತ ಸರಕಾರಗಳಿಗೆ ಸೇರಿದ್ದು.

ಸಂಯುಕ್ತರಾಜ್ಯಾಂಗ ವ್ಯವಸ್ಥೆ ಏರ್ಪಟ್ಟಿರುವ ಅನೇಕ ರಾಷ್ಟ್ರಗಳಲ್ಲಿ ಪ್ರಧಾನ ಮತ್ತು ಅಂಗಸರಕಾರಗಳಿಗೆ ಕೆಲವು ಆದಾಯದ ಬಾಬುಗಳು ಪ್ರತ್ಯೇಕವಾಗಿ ನಿರ್ದಿಷ್ಟವಾಗಿರುತ್ತವೆ. ಹೊರ ಸುಂಕ, ಬಂದರುಗಳ ಆದಾಯ, ಅಬ್ಕಾರಿ ಸುಂಕ (Excise duties) ಮೊದಲಾದ ಬಾಬುಗಳು, ಉಪ್ಪು, ಹೊಗೆಸೊಪ್ಪು, ಸಿಡಿಮದ್ದು ಮೊದಲಾದ ಪೂರ್ಣಾಧಿಕಾರದಿಂದ ನಡಸುವ ಕೆಲವು ವ್ಯಾಪಾರೋದ್ಯಮಗಳು, ಕಪ್ಪಕಾಣಿಕೆಗಳು, ಪ್ರೊಗದಿ—ಇವು ಪ್ರಧಾನ ಸರಕಾರದ ಹುಟ್ಟುವಳಿ ಬಾಬುಗಳು. ಸಾಧಾರಣವಾಗಿ ಆದಾಯತೆರಿಗೆ, ಆಸ್ತಿಪಾಸ್ತಿಗಳ ತೆರಿಗೆ, ಅರಣ್ಯ ಮೊದಲಾದುವು ಗಳಿಂದ ಬರುವ ಲಾಭ, ಕೆಲವು ಕಡೆ ಭೂ ಕಂದಾಯ, ಇವೇ ಮೊದಲಾದ ಪ್ರತ್ಯಕ್ಷ ತೆರಿಗೆಗಳೂ, ಅಂಗಸರಕಾರಗಳು ನಡಸುವ, ವ್ಯಾಪಾರ, ಕೈಗಾರಿಕೆಗಳು ಇವುಗಳ ಹುಟ್ಟುವಳಿಯೂ ಅಂಗಸರಕಾರಗಳಿಗೆ ಸೇರುತ್ತವೆ.

ಸಾಮಾನ್ಯವಾಗಿ, ಪ್ರತ್ಯಕ್ಷ ತೆರಿಗೆಗಳೆಲ್ಲವೂ ಅಂಗಸರಕಾರಗಳಿಗೆ ಸೇರ ತಕ್ಕವೆಂದೂ, ಪರೋಕ್ಷವಾದ ತೆರಿಗೆಗಳು ಪ್ರಧಾನ ಸರಕಾರದ ಆದಾಯದ ಬಾಬುಗಳೆಂದೂ ನಿರ್ದಿಷ್ಟವಾಗಿದ್ದುವು. ಕಳೆದ ಮಹಾಯುದ್ಧವಾದ ಮೇಲೆ ಈ ತೆರದ ವಿಂಗಡನೆ ಮಾಯವಾಗುತ್ತ ಬಂತು. ಪ್ರಧಾನ ಸರಕಾರಗಳು ಪ್ರತ್ಯಕ್ಷ ತೆರಿಗೆಗಳ ಆದಾಯವನ್ನು ಕೂಡ ಸ್ವಲ್ಪಮಟ್ಟಿಗೆ ಸಂಗ್ರಹಿಸಲು ಪ್ರಯತ್ನ ಮಾಡುತ್ತಿವೆ. ಪ್ರಧಾನ ಮತ್ತು ಅಂಗಸರಕಾರದ ಆದಾಯದ ಬಾಬುಗಳಲ್ಲಿ ಒಂದು ನಿಕರವಾದ ವಿಭಜನೆ ಏರ್ಪಟ್ಟಿದ್ದರೂ ಸಹ, ಪರಿಸ್ಥಿತಿಗೆ ತಕ್ಕಂತೆ ಈ ಸರಕಾರಗಳು ಅನ್ಯೋನ್ಯ ವಾಗಿ ಸಹಾಯ ದ್ರವ್ಯವನ್ನೊದಗಿಸಿಕೊಟ್ಟು ಇಡೀ ರಾಷ್ಟ್ರದ ಹಿತವನ್ನು ಸಾಧಿಸು ವುದಕ್ಕೆ ಪ್ರಯತ್ನಿಸಬೇಕು.

ಎಲ್ಲಾ ಸಂಯುಕ್ತ ರಾಜ್ಯಗಳಲ್ಲೂ ಆ ಸರಕಾರಕ್ಕೆ ವಹಿಸಿರುವ ಮುಖ್ಯ ಕರ್ತವ್ಯ ರಕ್ಷಣಾಕಾರ್ಯ. ಆದುದರಿಂದ, ರಕ್ಷಣಾಕಾರ್ಯಕ್ಕೆ ತಗಲುವ ವೆಚ್ಚ ಪ್ರಧಾನ ಸರಕಾರಕ್ಕೆ ಸೇರಿದ್ದು. ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ಇಲ್ಲದಿರುವ ರಾಷ್ಟ್ರಗಳಲ್ಲಿ ಇದು ಆ ರಾಷ್ಟ್ರದ ಪ್ರಧಾನ ಸರಕಾರಕ್ಕೆ ಸಂಬಂಧಿಸುತ್ತದೆ.

ಅಮೆರಿಕಾ, ಇಂಡಿಯಾ, ಇತರ ಡೊಮಿನಿಯನ್‌ಗಳಲ್ಲಿಯೂ ಈ ವೆಚ್ಚ ಪ್ರಧಾನ ಸರಕಾರಕ್ಕೇ ಸೇರಿದೆ. ಹಾಗೆಯೇ ನ್ಯಾಯ, ಸುಂಕ, ಟಾರಿಫ್, ನಾವೆ, ಬಂದರುಗಳು, ದೇಶಾಂತರಾದಿ ವಾಸಿಗಳು, ಅನ್ಯದೇಶಗಳೊಡನೆ ಇರುವ ಸಂಬಂಧ, ತಂತಿ, ಅಂಚೆ, ರೇಡಿಯೋ, ಸ್ಟೈಸಸ್, ದೇಶದ ಸಾಲಸೋಲಗಳು, ಪೊಗದಿ, ತಮಗೆ ಸೇರಿದ ಪ್ರಾಂತ ಮತ್ತು ಸ್ಥಳಸಂಸ್ಥೆಗಳು ಇವುಗಳಿಗೆ ಕೊಡಬೇಕಾದ ಸಹಾಯದ್ರವ್ಯ— ಈ ಬಾಬುಗಳ ವೆಚ್ಚವೆಲ್ಲವೂ ಪ್ರಧಾನ ಸರಕಾರಕ್ಕೆ ಸಂಬಂಧಪಟ್ಟವುಗಳು. ಒಂದೊಂದು ಬಾರಿ, ಪ್ರಾಂತ ಸರಕಾರಗಳು ತೀರಿಸಬೇಕಾದ ಸಾಲದ ಹೊರೆಯೂ ಈ ಪ್ರಧಾನ ಸರಕಾರದ ಮೇಲೆಯೇ ಬೀಳುತ್ತದೆ.

ವಿದ್ಯಾಭ್ಯಾಸ, ವೈದ್ಯಸಹಾಯ, ಗ್ರಾಮನೈರ್ಮಲ್ಯ, ಕಾನೂನು ಮತ್ತು ನ್ಯಾಯ ತೀರ್ಮಾನ, ಪೋಲೀಸು, ಜೈಲು, ರಸ್ತೆ, ನಾಲೆ, ಸೇತುವೆ, ಕಟ್ಟಡಗಳು, ಇವುಗಳ ನಿರ್ಮಾಣ ಮತ್ತು ಪಾಲನೆ, ವ್ಯವಸಾಯ, ಕೈಗಾರಿಕೆ, ಕೂಲಿಗಾರರು, ಸ್ಥಳ ಸಂಸ್ಥೆಗಳಿಗೆ ಮಾಡುವ ಸಹಾಯ, ಇವುಗಳಿಗೆ ತಗಲುವ ವೆಚ್ಚ ಅಂಗಸರಕಾರಗಳಿಗೆ ಸೇರುತ್ತದೆ.

ಸಮಾಜ ಸೇವೆಗೆ ಸಂಬಂಧ ಪಡುವಂತಹ ನಿರುದ್ಯೋಗ ಸಮಸ್ಯೆ, ಆರೋಗ್ಯದ ಜೀವವಿಮೆ (Health Insurance), ವೃದ್ಧಾಪ್ಯದ ವೇತನಗಳು (Old age pensions) ಮೊದಲಾದ ಕೆಲಸಗಳನ್ನು ಪ್ರಾಂತಸರಕಾರಗಳು ಚೆನ್ನಾಗಿ ನಿರ್ವಹಿಸಲು ಅವಕಾಶವಿರುವುದರಿಂದ, ಈ ವೆಚ್ಚವನ್ನು ಪ್ರಧಾನ ಸರಕಾರದಿಂದ ಹಣವನ್ನು ಪಡೆದು ಅಂಗಸರಕಾರಗಳೇ ವಹಿಸುವುದು ಒಳ್ಳೆಯದು.

ಯಾವುದೋ ಒಂದು ತತ್ವವನ್ನು ಮೊದಲೇ ನಿರ್ಧರಮಾಡಿ ಅದರ ಪ್ರಕಾರ ಸರಕಾರದ ಆಯವ್ಯಯವನ್ನು ವಿಂಗಡಿಸುವುದು ಪ್ರಪಂಚದ ಯಾವ ರಾಷ್ಟ್ರದಲ್ಲಿಯೂ ಕಂಡುಬರದು. ಇದು ಸಾಧುವಾದ ಮಾರ್ಗವೂ ಅಲ್ಲ. ಶಾಸನ ಬದ್ಧವಾದ ಕರ್ತವ್ಯ ನಿರ್ವಹಣೆಗಾಗಿ ಯಾವ ಸರಕಾರ ಯಾವ ಆದಾಯ ವೆಚ್ಚಗಳನ್ನು ವಹಿಸಿದೆ ಎಂಬುದನ್ನು ಆ ಶಾಸನಗಳಲ್ಲಿ ಕಂಡುಬರುವ ಅನುಬಂಧಗಳ ಮೂಲಕ ತಿಳಿದು, ವಿಂಗಡಣೆಯ ತತ್ವಗಳಿವು ಎಂದು ಅಭಿಪ್ರಾಯ ಪಡಲು ಅವಕಾಶವಾಗುತ್ತದೆ. ಸ್ಥೂಲವಾಗಿ ರಾಷ್ಟ್ರದ ಒಟ್ಟು ಹಿತವೂ ಮತ್ತು ಸಮಾಜದ ಎಲ್ಲಾ ವ್ಯಕ್ತಿಗಳಿಗೂ ದೊರೆಯಬೇಕಾದ ಸೌಕರ್ಯಗಳೂ ಎಲ್ಲಿ ಅಡಗಿವೆಯೋ ಅವೆಲ್ಲವೂ ಪ್ರಧಾನ ಸರಕಾರದಿಂದ ನಡೆಯಬೇಕಾದ ಕೆಲಸಗಳು. ಇದಕ್ಕೆ ಸಂಬಂಧಪಟ್ಟ ಆದಾಯ ವೆಚ್ಚಗಳು ಪ್ರಧಾನ ಸರಕಾರಕ್ಕೆ ಸೇರಿದ್ದು. ಆಯಾ ಪ್ರಾಂತಗಳಿಗೆ ಅನ್ವಯಿಸುವ ಸೌಕರ್ಯಗಳು, ಸ್ಥಳೀಯರೇ ನಡೆಸಬಹುದಾದ ಕಾರ್ಯಗಳು ಅಂಗಸರಕಾರಗಳಿಗೆ ಸೇರಿದವುಗಳು.

## ಪ್ರಕರಣ ೧೩

# ಸ್ಥಳೀಯ ಸರಕಾರದ ಹಣಕಾಸು

ಮೊದಮೊದಲು ಸರಕಾರವೆಂಬ ಸಾರ್ವಜನಿಕ ಸಂಸ್ಥೆ ಸ್ಥಾಪಿತವಾದ ಕಾಲದಲ್ಲಿ, ಕೇಂದ್ರಸರಕಾರ, ಪ್ರಾಂತಸರಕಾರವೆಂಬ ವಿಂಗಡಣೆ ಇರಲಿಲ್ಲ. ಹೀಗೆ ಪ್ರತ್ಯೇಕವಾಗಿ ಸರಕಾರದ ವಿಭಾಗ ಮಾಡಿಕೊಂಡು ಆಡಳಿತವನ್ನು ನಡೆಸಬೇಕಾದ ಆವಶ್ಯಕತೆ ಆಗ ಕಂಡುಬರಲಿಲ್ಲ. ಆಗಿನ ಕಾಲದಲ್ಲಿ ಒಂದು ಸರಕಾರದ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳೂ ಸಣ್ಣವಾಗಿದ್ದವು. ಅಲ್ಲಿಯ ಪ್ರಜಾಸಂಖ್ಯೆಯೂ ಕಡಿಮೆಯಾಗಿಯೇ ಇರುತ್ತಿತ್ತು. ಆಗಿನ ಕಾಲದಲ್ಲಿ ಬಹುದೊಡ್ಡ ಜನಾಂಗಗಳೆಂದೂ ರಾಷ್ಟ್ರಗಳೆಂದೂ ಹೇಳಿಕೊಂಡು ಕಾರ್ಯಭಾರ ಮಾಡುತ್ತಿದ್ದ ಸರಕಾರಗಳ ಆಡಳಿತ ವ್ಯವಹಾರ, ಈಗ ದೊಡ್ಡ ಸ್ಥಳೀಯ ಸಂಸ್ಥೆಯೆಂಬ ಹೆಸರಿನಲ್ಲಿ ಕೆಲಸಮಾಡುವ ಮುನಿಸಿಪಾಲಿಟಿಗಳ ವ್ಯವಹಾರದಷ್ಟು ಕೂಡ ಇರಲಿಲ್ಲವೆಂದು ಕಂಡುಬರುತ್ತದೆ. ವಿಸ್ತೀರ್ಣ, ಮತ್ತು ಪ್ರಜಾಸಂಖ್ಯೆಯ ಬೆಳವಣಿಗೆಯ ಜತೆಗೆ ಈಗಿನ ಕಾಲದಲ್ಲಿ ಸರಕಾರ ಕೈಗೊಳ್ಳುವ ಕಾರ್ಯಗಳು ಹೆಚ್ಚುತ್ತಿವೆ. ಇದರಿಂದ ಈಚೆಗೆ, ಸರಕಾರದ ರಾಜ್ಯಾಂಗವನ್ನು ರಚಿಸುವಾಗ, ಸರಕಾರಗಳ ಕಾರ್ಯಕಲಾಪಗಳ ವಿಭಾಗವನ್ನು ಹಣಕಾಸಿನ ವ್ಯವಸ್ಥೆಯನ್ನು ಮಾಡಬೇಕಾಗಿ ಬಂದು, ದೇಶದ ಹಿತವು ಸರಿಯಾಗಿ ಕೈಗೂಡುವುದಕ್ಕೋಸ್ಕರ, ಆಡಳಿತಕ್ರಮದಲ್ಲಿ ಶಿಸ್ತು ಇರುವುದಕ್ಕೋಸ್ಕರ ಸರಕಾರವನ್ನು ಕೇಂದ್ರ, ಪ್ರಾಂತ ಮತ್ತು ಸ್ಥಳೀಯ ಎಂದು ವಿಭಜನೆ ಮಾಡಬೇಕಾಯಿತು. ಒಂದು ದೇಶದ ವಿಸ್ತೀರ್ಣ ಅಲ್ಪವಾಗಿದ್ದರೆ, ಅಲ್ಲಿಯ ಪ್ರಜೆಗಳಿಗೂ ಆಡಳಿತಗಾರರಿಗೂ ಇರುವ ಸಂಬಂಧ ದೂರವಾಗುತ್ತದೆ. ಪ್ರಜಾಹಿತಕ್ಕಾಗಿ ದುಡಿಯಬೇಕಾದ ಸರಕಾರದವರು ಅವರೊಂದಿಗೆ ನೇರವಾದ ಸಂಬಂಧವನ್ನು ಏರ್ಪಡಿಸಿಕೊಳ್ಳಲು ಅವಕಾಶವಿಲ್ಲದೆ ಹೋಗುತ್ತದೆ. ಈ ಕೊರತೆಯನ್ನು ನಿವಾರಿಸಿಕೊಳ್ಳುವುದಕ್ಕೋಸ್ಕರ ಮೊದಲು ಸೂಚಿಸಿದ ಒಂದು ಮುಖ್ಯ ಅಥವಾ ಕೇಂದ್ರಸರಕಾರಕ್ಕೂ ಪ್ರಜೆಗಳಿಗೂ ನಡುವೆ ಕೆಲವು ಸಂಸ್ಥೆಗಳು ನಿರ್ಮಾಣವಾಗ ಬೇಕಾಯಿತು. ಜನಹಿತ ಸಾಧನೆಯೇ ಸರಕಾರದ ಕರ್ತವ್ಯವೆಂಬ ತತ್ವ ಬೆಳೆದಂತೆಲ್ಲಾ ಇಂತಹ ಸಂಸ್ಥೆಗಳೂ ಹುಟ್ಟಿ ಬೆಳೆದು ಬಲಗೊಳ್ಳತೊಡಗಿದವು. ಕೊನೆಗೆ ಈ ಸ್ಥಳೀಯ ಸಂಸ್ಥೆಗಳಿಲ್ಲದೆ ಗತ್ಯಂತರವಿಲ್ಲದಾಯಿತು. ಅಷ್ಟೇ ಅಲ್ಲದೆ, ಬೇರೆ ದೃಷ್ಟಿಯಿಂದಲೂ ಸ್ಥಳೀಯ ಸಂಸ್ಥೆಗಳ ಪ್ರಾಧಾನ್ಯ ಕಂಡುಬಂದಿತು. ದೂರಪ್ರದೇಶದಲ್ಲಿರುವ ಕೇಂದ್ರಸರಕಾರಕ್ಕೆ ಒಂದು ಸ್ಥಳದ ವಿಶೇಷ ವಿದ್ಯಮಾನಗಳು ತಿಳಿಯದೆ ಹೋಗುವುದರಿಂದ, ಅಲ್ಲಿ ನಡೆಯಬೇಕಾದ ಕೆಲಸಗಳನ್ನು ತೃಪ್ತಿಕರವಾಗಿ

ನಡಸಲು ಸ್ಥಳೀಯಸಂಸ್ಥೆಗಳು ಆವಶ್ಯಕವಾಗಿದ್ದುವು. ಈ ಆವಶ್ಯಕತೆಯಿಂದ ದೇಶದ ರಾಜ್ಯಾಂಗ ರಚನೆ ಮಾಡುವಾಗ ಕೇಂದ್ರ, ಪ್ರಾಂತ, ಸ್ಥಳೀಯ ಸರಕಾರಗಳೆಂಬ ವಿಂಗಡನೆ, ಅವುಗಳ ಕರ್ತವ್ಯ, ಹಣಕಾಸಿನ ಸೌಕರ್ಯಗಳು, ಅನ್ಯೋನ್ಯ ಸಂಬಂಧ ಗಳನ್ನು ಸ್ಪಷ್ಟಗೊಳಿಸಿ, ಪ್ರಜಾಹಿತಕಾರ್ಯಗಳಿಗಾಗಿ ಬೇಕಾದ ಈ ಹೊಸ ಸಂಸ್ಥೆಗಳ ಪ್ರೋಷಣೆಗೆ ಆರಂಭವಾಯಿತು.

ಈ ಸ್ಥಳೀಯ ಸಂಸ್ಥೆಗಳ ಬೆಳವಣಿಗೆ, ಇವುಗಳಿಗೂ ಕೇಂದ್ರ ಸಂಸ್ಥೆಗೂ ಇರುವ ಸಂಬಂಧ, ಅವೆರಡರ ಕರ್ತವ್ಯ ವಿಭಜನೆ, ಇವು ಎಲ್ಲ ದೇಶಗಳಲ್ಲಿಯೂ ಒಂದೇ ವಿಧವಾಗಿಲ್ಲ. ಒಂದೊಂದು ದೇಶದಲ್ಲಿ ಒಂದು ತೆರನಾಗಿರುತ್ತದೆ. ಈ ವ್ಯತ್ಯಾಸಕ್ಕೆ ಆಯಾ ದೇಶದ ಇತಿಹಾಸ ಭೂಗುಣಗಳೇ ಕಾರಣವೆನ್ನಬಹುದು. ಕೆಲವು ದೇಶಗಳಲ್ಲಿ ಸ್ವಾತಂತ್ರ್ಯದಿಂದ ತಮಗೆ ಬೇಕಾದ ಹಣವನ್ನು ಸಂಪಾದಿಸಿ ಕೇಂದ್ರ ಸರಕಾರಕ್ಕಿಂತ, ಸ್ಥಳೀಯ ಸರಕಾರಗಳೇ ಶಕ್ತಿಯುತವಾಗಿವೆ. ಮತ್ತಿತರ ರಾಜ್ಯಗಳಲ್ಲಿ ಸ್ಥಳೀಯ ಸರಕಾರಗಳಿಗೆ ಬೇಕಾದ ಶಕ್ತಿ, ಸೌಲಭ್ಯಗಳು ಕೇಂದ್ರ ಸರಕಾರದಿಂದ ಬರಬೇಕಾಗಿವೆ. ಅಲ್ಲಿ ಸ್ಥಳೀಯ ಸಂಸ್ಥೆಗಳು ಕೇಂದ್ರ ಸರಕಾರದ ಅಪ್ಪಣೆಯಂತೆ ಕೆಲಸ ಮಾಡುತ್ತವೆ. ಆ ಪ್ರದೇಶದಲ್ಲಿ ಸ್ಥಳೀಯ ಸಂಸ್ಥೆಗಳು ಕೇಂದ್ರ ಸರಕಾರದ ಕೈಗೊಂಬೆಗಳು. ಇಂಗ್ಲೆಂಡಿನಲ್ಲಿ ಕೌಂಟಿ ಪ್ಯಾರಿಷ್ ಎಂಬ ಹೆಸರುಗಳಿಂದ ಕೆಲಸ ಮಾಡುವ ಸ್ಥಳೀಯ ಸಂಸ್ಥೆಗಳು ಎಷ್ಟೇ ಶಕ್ತಿಯುತವಾಗಿ ಕೆಲಸಮಾಡುತ್ತಿದ್ದಾಗ್ಯೂ, ಇವು ಅಲ್ಲಿಯ ಕೇಂದ್ರ ಸರಕಾರದ ಅಧಿಕಾರಕ್ಕೆ ಒಳಪಟ್ಟಿವೆ. ಆದರೆ ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಕೇಂದ್ರಸರಕಾರಕ್ಕೆ ಸ್ಥಳೀಯ ಸಂಸ್ಥೆಗಳ ಮೇಲೆ ಎಳ್ಳಷ್ಟೂ ಅಧಿಕಾರವಿಲ್ಲ.

ರಾಜ್ಯಾಂಗ ವ್ಯವಸ್ಥೆಯಲ್ಲಿ ಬಹು ಪ್ರಾಮುಖ್ಯವಾದ ಸ್ಥಳೀಯ ಸರ್ಕಾರಗಳ ಆದಾಯ ವೆಚ್ಚಗಳಿಗೆ ಅನ್ವಯಿಸುವ ಕೆಲವು ಮುಖ್ಯ ವಿಷಯಗಳನ್ನು ಇಲ್ಲಿ ಸೂಚಿಸಲಾಗುವುದು.

ಮೊದಲು ಸೂಚಿಸಿದಂತೆ ಇಂಗ್ಲೆಂಡ್ ಮತ್ತು ಅಮೆರಿಕ ಈ ಎರಡು ದೊಡ್ಡ ರಾಷ್ಟ್ರಗಳಲ್ಲಿಯೂ ಸ್ಥಳೀಯ ಸಂಸ್ಥೆಗಳು ಬೆಳೆದು, ಶಾಸ್ತ್ರೀಯವಾದ ರೀತಿಯ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾ ಇವೆ. ಅಮೆರಿಕಾದೇಶದಲ್ಲಿ ಸ್ಥಳೀಯ ಸರಕಾರಗಳ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳು ಬಹು ವಿಶಾಲವಾಗಿರುವುದರಿಂದಲ ಸ್ಥಳೀಯ ಸರಕಾರಗಳಿಂದಲೇ ಸೃಷ್ಟಿಸಲ್ಪಟ್ಟ ಕೇಂದ್ರಸರಕಾರವು ಬಲಿಷ್ಠವಾಗಿ ದಿರುವುದರಿಂದಲೂ, ಅಲ್ಲಿಯ ಸ್ಥಳೀಯ ಸಂಸ್ಥೆಗಳು ಇಂಗ್ಲೆಂಡಿನ ಸಂಸ್ಥೆಗಳಿಗಿಂ ಶಕ್ತಿಯುತವಾಗಿವೆ. ಇಂಗ್ಲೆಂಡಿನ ಸ್ಥಳೀಯ ಸಂಸ್ಥೆಗಳು ಪಡೆಯಲಾರದಷ್ಟ ಆದಾಯವನ್ನು ಅಮೆರಿಕಾದಲ್ಲಿ, ಸ್ಥಳೀಯ ಸರಕಾರಗಳು ಪಡೆಯುತ್ತಿ ಇಲ್ಲಿಯ ಸ್ಥಳೀಯ ಸಂಸ್ಥೆಗಳು ತಮ್ಮ ಆದಾಯದ ಬಹುಭಾಗವನ್ನು ಜನರ ಆ ಮೇಲಿನ ತೆರಿಗೆಯಿಂದಲೂ, ಆದಾಯದ ತೆರಿಗೆಯಿಂದಲೂ ಪಡೆಯುತ್ತವೆ. ಅಷ ಅಲ್ಲದೆ, ಇನ್ನೂ ಅನೇಕ ಪ್ರತ್ಯಕ್ಷ ತೆರಿಗೆಗಳನ್ನು ಅಲ್ಲಿ ವಿಧಿಸುತ್ತಾರೆ. ಇಂಗ್ಲೆಂಡಿನ ಸ್ಥಳೀಯ ಸಂಸ್ಥೆಗಳ ಕರ್ತವ್ಯ ನಿರ್ವಹಣಕ್ಕಾಗಿ ಕೇಂದ್ರ ಸರಕಾರವು ಹೆಚ್ಚಿ

“ ಸಹಾಯದ್ರವ್ಯ ” (Grant-in-aid) ವನ್ನು ಒದಗಿಸಿಕೊಡುತ್ತದೆ. ಪ್ರಪಂಚದ ಕೆಲವು ಪ್ರಮುಖ ರಾಷ್ಟ್ರಗಳಲ್ಲಿ ಸ್ಥಳೀಯ ಸರಕಾರದ ತೆರಿಗೆ ಆದಾಯದಲ್ಲಿ ಕಂಡುಬರುವ ತಾರತಮ್ಯವನ್ನೂ ಅದರ ಪ್ರಾಮುಖ್ಯವನ್ನೂ ಕೆಳಗೆ ಕೊಟ್ಟಿರುವ ಅಂಕಿಗಳಿಂದ ತಿಳಿಯಬಹುದು :—

| ದೇಶ | ವರ್ಷ | ಕೇಂದ್ರಸರಕಾರದ ತೆರಿಗೆ ಆದಾಯ | ಅಂಗಸರಕಾರಗಳ ತೆರಿಗೆ ಆದಾಯ | ಸ್ಥಳೀಯ ಸಂಸ್ಥೆಗಳ ತೆರಿಗೆ ಆದಾಯ | ಒಟ್ಟು ತೆರಿಗೆ ಆದಾಯ | ಒಟ್ಟು ತೆರಿಗೆ ಆದಾಯದಲ್ಲಿ ಸ್ಥಳೀಯ ಸಂಸ್ಥೆಗಳ ಶೇಕಡ ಪಾಲು |
|---|---|---|---|---|---|---|
| ಇಂಗ್ಲೆಂಡ್ | ೧೯೩೨ | ೭೩ ಕೋಟಿ ಪೌಂ. | ... | ೧೮ ಕೋಟಿ ಪೌಂ. | ೯೧ ಕೋಟಿ ಪೌಂ. | ೧೯·೭% |
| ಅಮೆರಿಕದ ಸಂಯುಕ್ತ ಸಂಸ್ಥಾನ | ೧೯೩೩ | ೧೮೬ ಕೋಟಿ ಡಾಲರು | ೧೨೧ ಕೋಟಿ ಡಾಲರು | ೧೬೪ ಕೋಟಿ ಡಾಲರು | ೪೭೧ ಕೋಟಿ ಡಾಲರು | ೫೭·೦% |
| ಜಪಾನ್ | ೧೯೩೨ | ೯೭ ಕೋಟಿ ಎನ್. | ೨೬ ಕೋಟಿ ಎನ್. | ೬೦ ಕೋಟಿ ಎನ್. | ೧೮೩ ಕೋಟಿ ಎನ್. | ೩೨·೮% |

ಇಟಲಿ, ಫ್ರಾನ್ಸ್ ಮತ್ತು ಸ್ಪೇನ್ ಮೊದಲಾದ ಕೆಲವು ಯೂರೋಪು ದೇಶಗಳಲ್ಲಿನ ಸ್ಥಳೀಯ ಸಂಸ್ಥೆಗಳು (ಅಕ್ಟ್ರಾಯ್) ಸುಂಕದ ಮೂಲಕ ಹಣವನ್ನು ಗಳಿಸುತ್ತವೆ. ಇಂಗ್ಲೆಂಡಿನಲ್ಲಿ ಮೊದಮೊದಲು ಸುಂಕದಿಂದಲೇ ಹೆಚ್ಚು ಹಣ ಬರುತ್ತಿದ್ದರೂ, ಈಗ ಆ ಪದ್ಧತಿ ತಪ್ಪಿಹೋಗಿದೆ. ಹೀಗೆ, ಒಂದು ಊರು, ಹಳ್ಳಿ, ಗ್ರಾಮಗಳ ಒಳಕ್ಕೆ ಬರುವ, ಅಲ್ಲಿಂದ ಹೊರಗೆ ಹೋಗುವ, ಪದಾರ್ಥಗಳ ಮೇಲೆ ತೆರಿಗೆ ಹಾಕುವುದು ನ್ಯಾಯವಲ್ಲವೆಂಬ ಅಭಿಪ್ರಾಯ ತಲೆದೋರಿದೆ.

ಮೇಲೆ ಹೇಳಿದಂತೆ, ಒಂದೊಂದು ದೇಶದಲ್ಲಿನ ಸ್ಥಳೀಯ ಸರಕಾರದ ಹಣಕಾಸಿನ ರೀತಿ ಒಂದೊಂದು ವಿಧವಾಗಿರುವುದಕ್ಕೆ ಈ ಸ್ಥಳೀಯ ಸರಕಾರಗಳ ಕರ್ತವ್ಯಗಳು ಒಂದೇ ವಿಧವಾಗಿ ಎಲ್ಲ ದೇಶಗಳಲ್ಲಿಯೂ ಇಲ್ಲದಿರುವುದೇ ಕಾರಣವೆನ್ನಬಹುದು.

ಒಂದು ದೇಶದ ಪ್ರತಿಯೊಂದು ಮೂಲೆಯಲ್ಲೂ ಆಯಾ ಸ್ಥಳೀಯ ವಿದ್ಯಮಾನಗಳಿಗೆ ಅನುಸಾರವಾಗಿ ಬೇಕಾದ ಕೆಲಸಗಳು ಸುಸೂತ್ರವಾಗಿ ನಡೆಯಬೇಕಾಗಿದ್ದರೆ, ಸ್ಥಳೀಯ ಸರಕಾರಗಳಿಗೆ ಪೂರ್ಣ ಸ್ವಾತಂತ್ರ್ಯವಿರಬೇಕಾಗುವುದು. ಹಾಗೆಯೇ ಇಲ್ಲಿ ನಡೆಯಬೇಕಾದ ಕೆಲಸಗಳನ್ನು ದೇಶದ ಹಿತದೃಷ್ಟಿಯಿಂದ ಸಮನ್ವಯ ಮಾಡಿಕೊಳ್ಳಬೇಕಾದರೆ ಕೇಂದ್ರ ಸರಕಾರದ ಹತೋಟಿ ಅವುಗಳ ಮೇಲೆ

ಇರಬೇಕಾದುದೂ ಅವಶ್ಯಕ. ಒಂದು ಜಿಲ್ಲೆಯಲ್ಲಿ ನಡೆಯಬೇಕಾದ ಕೆಲಸಗಳನ್ನು ಸರಿಯಾಗಿ ನಿರ್ವಾಹಮಾಡುವುದಕ್ಕೆ ಕೇಂದ್ರ ಸರಕಾರಕ್ಕಿಂತ ಅಲ್ಲಿಯ ಸ್ಥಳೀಯ ಸರಕಾರಕ್ಕೇ ಅನುಕೂಲಗಳು ಹೆಚ್ಚಾಗಿ ದೊರೆಯುತ್ತವೆ. ಅಲ್ಲಿ ನಡೆಯಬೇಕಾದ ಕೆಲಸಗಳು ಆಯಾ ಸ್ಥಳಗಳ ವಿಶೇಷ ವಿದ್ಯಮಾನಗಳನ್ನು ಅನುಸರಿಸಿರಬೇಕಾಗುತ್ತದೆ. ಈ ಕೆಲಸಗಳನ್ನು ನೆರವೇರಿಸಬೇಕಾಗಿದ್ದರೆ ಅಲ್ಲಿಯ ಜನರೇ ಶಕ್ತರು. ಅಲ್ಲಿ ನಡೆಯಬೇಕಾದ ಕೆಲಸಗಳಿಗೆ ಸಂತತವಾದ ಮೇಲ್ವಿಚಾರಣೆಯೂ ಕೆಲವು ಬಾರಿ ಅವಶ್ಯಕವಾಗಬಹುದು. ಅಂತಹ ಪ್ರಸಂಗಗಳಲ್ಲಿ ಸ್ಥಳೀಯ ಸಂಸ್ಥೆಗಳ ಕಾರ್ಯಗಳು ಫಲಪ್ರದವಾಗುವುದರಲ್ಲಿ ಸಂದೇಹವಿಲ್ಲ. ಹೀಗೆ ಸ್ಥಳೀಯ ಸಂಸ್ಥೆಗಳು ಆಯಾ ಪ್ರಾಂತಗಳ ಕೆಲಸಗಳನ್ನು ಸಾಮರ್ಥ್ಯದಿಂದಲೂ, ಸೌಕರ್ಯದಿಂದಲೂ ನಿರ್ವಹಿಸಬಹುದಾದರೂ, ದೇಶದ ಐಕ್ಯತೆ, ಮತ್ತು ಹಿತದೃಷ್ಟಿಯಿಂದ ಕೆಲವು ಕೆಲಸಗಳನ್ನು ಕೇಂದ್ರ ಸರಕಾರಕ್ಕೇ ಮೀಸಲಾಗಿಡಬೇಕು.

ಒಳಗಣ ಮತ್ತು ಹೊರಗಣ ಉಪದ್ರವಗಳಿಂದ ದೇಶವನ್ನು ಉಳಿಸಬೇಕಾದ ರಕ್ಷಣಾಕಾರ್ಯ, ಇತರ ಸರಕಾರಗಳೊಂದಿಗೆ ನಡಸಬೇಕಾದ ವ್ಯವಹಾರ, ಸೈನ್ಯ ಮತ್ತು ನಾವೆ, ನಾಣ್ಯ ತಯಾರಿಕೆ, ತೂಕ ಮತ್ತು ಅಳತೆ, ರೈಲ್ವೆ, ಅಂಚೆ ಮೊದಲಾದುವುಗಳು ಕೇಂದ್ರಸರಕಾರದ ಕರ್ತವ್ಯಗಳು. ಇವುಗಳ ಮೇಲಣ ಅಧಿಕಾರ ಕೇಂದ್ರಸರಕಾರಕ್ಕೇ ಇರಬೇಕು.

ಇನ್ನು ಕೆಲವು ನೀರಿನ ವಸತಿ, ದೀಪದ ಸೌಕರ್ಯ, ಆರೋಗ್ಯ, ಪೋಲೀಸ್‌ರಕ್ಷಣೆ ವಿದ್ಯಾಭ್ಯಾಸ ಮೊದಲಾದ ಕೆಲಸಗಳನ್ನು ಕೇಂದ್ರ ಸರಕಾರವೇ ಸುಸೂತ್ರವಾಗಿ ನಡಸಲು ಸಾಧ್ಯವಿಲ್ಲ. ಇದನ್ನು ಸ್ಥಳೀಯ ಸಂಸ್ಥೆಗಳು ನೆರವೇರಿಸುವುದು ಸಾಧುವಾದುದು. ಹೀಗೆಂದ ಮಾತ್ರಕ್ಕೇ ಇವುಗಳ ಮೇಲೆ ಕೇಂದ್ರಸರಕಾರಕ್ಕೆ ಅಧಿಕಾರವಿರಕೂಡದೆಂದಲ್ಲ. ಆದಷ್ಟುಮಟ್ಟಿಗೆ ಈ ವಿಧವಾದ ಸ್ಥಳೀಯ ಕಾರ್ಯಗಳನ್ನು ನಿರ್ವಹಿಸಲು ಸ್ಥಳೀಯ ಸರಕಾರಕ್ಕೇ ಅವಕಾಶವನ್ನು ಒದಗಿಸಿಕೊಡುವುದು ಯುಕ್ತವಾದ ಮಾರ್ಗ. ಮೇಲೆ ಸೂಚಿಸಿದ ಕೆಲಸಗಳ ಜತೆಗೆ ಕೆಲವು ದೇಶಗಳಲ್ಲಿ ನಿರ್ಗತಿಕರ ಕ್ಷೇಮ ಚಿಂತನೆಯೂ ಸ್ಥಳೀಯ ಸಂಸ್ಥೆಗಳಿಗೇ ಹಿಂದೆ ಸೇರಿಹೋಗಿತ್ತು. ನಿರುದ್ಯೋಗ ಮತ್ತು ದಾರಿದ್ರ್ಯ ಸಮಸ್ಯೆಗಳು ದಿನೇದಿನೇ ಪ್ರಬಲವಾಗಿ ಅವುಗಳ ನಿವಾರಣೆ ಈಗ ಕೇಂದ್ರಸರಕಾರದ ಕರ್ತವ್ಯವಾಗಿ ಪರಿಣಮಿಸಿದೆ.

ಹೀಗೆ ಸ್ಥಳೀಯ ಸಂಸ್ಥೆಗಳೇ ನಿರ್ವಹಿಸಬೇಕಾದ ಕರ್ತವ್ಯಗಳಿಗಾಗಿ ಆ ಸಂಸ್ಥೆಗಳಿಗೆ ಹಣ ಅಗತ್ಯ. ಈ ಹಣವನ್ನು ಆಯಾ ಪ್ರದೇಶಗಳಲ್ಲಿರುವ ಪ್ರಜೆಗಳಿಂದಲೇ ತೆರಿಗೆಯ ರೂಪದಲ್ಲಿ ಸಂಪಾದಿಸಬೇಕು. ಆದುದರಿಂದ ಕೇಂದ್ರಸರಕಾರವಾಗಲಿ, ಸ್ಥಳೀಯ ಸರಕಾರವಾಗಲಿ, ರಾಜ್ಯಾದಾಯದ ಬಹುಭಾಗವನ್ನು ತೆರಿಗೆಯ ಮುಖಾಂತರವಾಗಿ ಪಡೆಯಬೇಕು. ಈ ತೆರಿಗೆಯ ತತ್ವದಲ್ಲಾಗಲಿ, ಕ್ರಮದಲ್ಲಾಗಲಿ, ಕೇಂದ್ರ ಮತ್ತು ಸ್ಥಳೀಯ ಸರಕಾರಗಳಿಗೆ ಹೆಚ್ಚಿನ ವ್ಯತ್ಯಾಸವಿಲ್ಲ.

ಸಾಮಾನ್ಯವಾಗಿ, ಲಂಡನ್, ಪ್ಯಾರಿಸ್, ಬೊಂಬಾಯಿ ಮೊದಲಾದ ಕೆಲವು ಪಟ್ಟಣಗಳ ಆಡಳಿತವನ್ನು ನಿರ್ವಹಿಸುವ ಪೌರಸಭೆಗಳ ಆದಾಯ ವೆಚ್ಚಗಳು, ಸಣ್ಣ

ಪುಟ್ಟ ರಾಜ್ಯಗಳ ಒಟ್ಟು ರಾಜ್ಯಾದಾಯದಷ್ಟು ಆಗುತ್ತವೆ. ನಮ್ಮ ದೇಶದಲ್ಲಿ ಒಂದು ಜಿಲ್ಲಾ ಸಮಿತಿ ಸ್ಥಳೀಯ ಸಂಸ್ಥೆ. ಒಂದು ಜಿಲ್ಲೆಯಷ್ಟೇ ವಿಸ್ತೀರ್ಣ ಪ್ರಜಾಸಂಖ್ಯೆ, ಆದಾಯ ಇವು ಉಳ್ಳ ಒಂದು ಸಣ್ಣ ರಾಜ್ಯದಲ್ಲಿ ಒಂದು ಗ್ರಾಮ ಪಂಚಾಯಿತಿ ಸ್ಥಳೀಯ ಸಂಸ್ಥೆಯಾಗುತ್ತದೆ. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಒಂದೊಂದು ಪ್ರಾಂತದ ಸರಕಾರವೂ ಸ್ಥಳೀಯ ಸರಕಾರವೆನಿಸಿಕೊಳ್ಳುತ್ತದೆ. ಆದುದರಿಂದ "ಸ್ಥಳೀಯ" ಎಂಬುದರ ವ್ಯಾಪ್ತಿ ಆಯಾ ದೇಶದ ವಿಸ್ತೀರ್ಣ, ಜನಸಂಖ್ಯೆ, ಆದಾಯಗಳನ್ನು ಅನುಸರಿಸಿರುತ್ತದೆ.

ದೇಶದ ಮುಖ್ಯ ಅಥವಾ ಕೇಂದ್ರ ಸರಕಾರದ ಹಣಕಾಸನ್ನು ಸ್ಥಳೀಯ ಸರಕಾರದ ಹಣಕಾಸಿನೊಂದಿಗೆ ಹೋಲಿಸಿದರೆ ಥಟ್ಟನೆ ಕಣ್ಣಿಗೆ ಕಟ್ಟಿದಂತೆ ಕೆಲವು ಅಂಶಗಳು ಕಂಡುಬರುತ್ತವೆ. ೧. ಕೇಂದ್ರ ಸರಕಾರದ ಹಣದ ಪ್ರಮಾಣ ಸ್ಥಳೀಯ ಸರಕಾರದ ಹಣಕ್ಕಿಂತ ಹೆಚ್ಚಾಗಿರುತ್ತದೆ. ೨. ಕೇಂದ್ರ ಸರಕಾರದ ತೆರಿಗೆಯ ಕ್ರಮದಲ್ಲಿ ಒಂದು ಐಕ್ಯತೆಯಿದೆ. ಸ್ಥಳೀಯ ಸರಕಾರದ ತೆರಿಗೆಯ ಕ್ರಮದಲ್ಲಿ ವೈವಿಧ್ಯವಿದೆ. ೩. ಕೇಂದ್ರ ಸರಕಾರದ ತೆರಿಗೆಯ ವಿಧಾನದಲ್ಲಿ ಐಕ್ಯತೆ ಇರುವುದರ ಜತೆಗೆ, ಆ ತೆರಿಗೆ ಸರ್ವತೋಮುಖವಾಗಿಯೂ ಇರುತ್ತದೆ.

ಸ್ಥಳೀಯ ಸರಕಾರದ ತೆರಿಗೆಯ ಕ್ರಮದಲ್ಲಿ ವೈವಿಧ್ಯವಿದ್ದರೂ, ಅಲ್ಲಿನ ತೆರಿಗೆ ಆದಾಯದಲ್ಲಿ ಹೆಚ್ಚಿನ ಭಾಗವನ್ನು ಸ್ಥಿರ ಆಸ್ತಿಗಳಮೇಲೆ ವಿಧಿಸಿದ ತೆರಿಗೆಗಳ ಮೂಲಕ ವಸೂಲ್ಮಾಡುವ ಸಂಪ್ರದಾಯ ಬಂದಿದೆ. ಈ ಶತಮಾನದಲ್ಲಿ, ಕೇಂದ್ರ ಸರಕಾರದಂತೆಯೇ ಸ್ಥಳೀಯ ಸರಕಾರದ ವ್ಯಾಪ್ತಿಯೂ ಹೆಚ್ಚುತ್ತಿದೆ. ಸ್ಥಳೀಯ ಸಂಸ್ಥೆಗಳು ಜನಜೀವನವನ್ನು ಉತ್ತಮಗೊಳಿಸಲು ಹೆಚ್ಚಿನ ಹಣವನ್ನು ವೆಚ್ಚಮಾಡಬೇಕಾಗಿದೆ. ಇದಕ್ಕಾಗಿ ಬೇಕಾಗುವ ಹಣವನ್ನು ಶೇಖರಿಸಲು, ನೂತನ ತೆರಿಗೆ ಮತ್ತು ಇತರ ವಿಧದಲ್ಲಿ ಆದಾಯ ಸಂಪಾದಿಸುವ ಮಾರ್ಗಗಳನ್ನು ಅನುಸರಿಸುವುದು ವಾಡಿಕೆಗೆ ಬರುತ್ತಿದೆ.

ಕೇಂದ್ರ ಸರಕಾರವು ವಸೂಲ್ಮಾಡುವ ಹಣಕ್ಕೂ ಅದರಿಂದ ಜನಗಳಿಗೆ ಒದಗಿಸಿ ಕೊಡುವ ಸೌಲಭ್ಯಗಳಿಗೂ ಪ್ರತ್ಯಕ್ಷವಾದ ಒಂದು ಸಂಬಂಧವನ್ನು ಕಲ್ಪಿಸುವುದು ಬಹಳ ಕಷ್ಟವಾದೀತು. ಸ್ಥಳೀಯ ಸರಕಾರಗಳು ವೆಚ್ಚಮಾಡುವ ಹಣದ ಪ್ರಯೋಜನ ಕಣ್ಣಿಗೆ ಕಂಡಂತೆ ಇರುತ್ತದೆ. ಯಾವಯಾವ ತೆರಿಗೆಯಿಂದ ಯಾವಯಾವ ಸೌಕರ್ಯ ತಮಗೆ ಒದಗಿದೆಯೆಂಬುದನ್ನು ಸ್ಥಳೀಯ ಪ್ರಜೆಗಳು ಸುಲಭವಾಗಿ ಅರಿಯಲು ಸಾಧ್ಯ. ಇದು ಯಾವಾಗಲೂ ಸಾಧ್ಯವೆಂದು ಹೇಳಲಾಗದು. ಒಂದು ಪೌರಸಭೆಯೋ ಅಥವಾ ಜಿಲ್ಲಾ ಸಮಿತಿಯೋ, ವಿದ್ಯಾಭ್ಯಾಸಕ್ಕಾಗಿ ಅಥವಾ ರಸ್ತೆಯ ನಿರ್ಮಾಣಕ್ಕಾಗಿ ಹಣವನ್ನು ವೆಚ್ಚಮಾಡಬಹುದು. ಇಂತಹವುಗಳಿಂದ, ಈ ಬಾಬುಗಳಿಗಾಗಿ ತೆರಿಗೆ ಕೊಟ್ಟಿರುವವರಿಗೆ, ಅದಕ್ಕೆ ತಕ್ಕ ಪ್ರತಿಫಲ ಒದಗಿದೆಯೆಂದು ಹೇಳಲು ಸಾಧ್ಯವಿಲ್ಲ. ತೆರಿಗೆ ಕೊಟ್ಟಿರುವವರಲ್ಲಿ ಅನೇಕರಿಗೆ ಇದರ ಉಪಯೋಗವೇ ಇಲ್ಲದಿರಬಹುದು. ತೆರಿಗೆ ಕೊಡದಿರುವ ಅನೇಕಮಂದಿ ಈ ಸೌಕರ್ಯವನ್ನು ಉಪಯೋಗಿಸಿ

ಕೊಳ್ಳುತ್ತಿರಬಹುದು. ಆದುದರಿಂದ ಪ್ರಜೆಗಳು ಕೊಡುವ ಹಣವನ್ನು ಅದರಿಂದ ಬರುವ ಪ್ರತಿಫಲದ ಮೂಲಕ ಯಾವಾಗಲೂ ಅಳೆಯುಬಹುದೆಂದು ಹೇಳಲಾಗದು. ಇಷ್ಟಾದರೂ, ಆಯಾ ಸ್ಥಳದ ಪ್ರಜೆಗಳಿಂದ ವಸೂಲ್ಮಾಡಿ, ಸ್ಥಳೀಯ ಸರಕಾರ ವೆಚ್ಚ ಮಾಡಿದ ಹಣಕ್ಕೆ ಆ ಪ್ರದೇಶದಲ್ಲಿ ನಡೆದಿರುವ ಕೆಲಸಗಳು ಸಾಕ್ಷೀಭೂತವಾಗಿ ನಿಂತಿರುತ್ತವೆ ಎಂಬುದರಲ್ಲಿ ಸಂದೇಹವಿಲ್ಲ.

ಕೆಲವು ಸ್ಥಳೀಯ ಸರಕಾರಗಳು, ಟ್ರಾಂವೆ, ವಿದ್ಯುಚ್ಛಕ್ತಿಯ ದೀಪಗಳು ಮೊದಲಾದ ಸೌಕರ್ಯಗಳಿಗಾಗಿ ಹಣವನ್ನು ವೆಚ್ಚಮಾಡುತ್ತವೆ. ಇಂತಹ ಕೆಲಸಗಳು ಒಂದು ವ್ಯಾಪಾರೋದ್ಯಮವನ್ನು ಹೋಲುತ್ತದೆ. ಜನರು ಪಡೆಯುವ ಆ ವಿಶೇಷ ಸೌಕರ್ಯಗಳಿಗಾಗಿ ಅವರು ಹಣ ಕೊಡುತ್ತಾರೆ. ಇಂತಹ ಹಣದಿಂದ ಆ ಪೌರಸಭೆಯವರು ಇವುಗಳಿಗಾಗಿ ಮಾಡಿರುವ ವೆಚ್ಚದ ಮೊಬಲಗೆಲ್ಲಾ ಪಾವತಿಯಾಗಿ ಉಳಿಯುವ ನಿವ್ವಳ ಆದಾಯದಲ್ಲಿ ತೆರಿಗೆಯನ್ನು ಸ್ಥೂಲವಾಗಿ ಹೋಲುವ ಭಾಗ ಸೇರಿರುತ್ತದೆ ಎಂದು ಭಾವಿಸಬಹುದು.

ಪಾಶ್ಚಾತ್ಯ ದೇಶಗಳ ಕೆಲವು ಪೌರಸಭೆಗಳವರು, ಆಯಾ ಗ್ರಾಮಗಳಲ್ಲಿನ ಬಡಜನರಿಗೆ, ಹಾಲನ್ನು ಕಡಿಮೆ ಖರೀದಿಗೆ ಒದಗಿಸಿಕೊಡುತ್ತಿದ್ದಾರೆ. ಇದರಿಂದ ಆ ಕಾಲದಲ್ಲಿ ಮುನಿಸಿಪಾಲಿಟಿಗೆ ಸ್ವಲ್ಪ ನಷ್ಟವಾಗಬಹುದು. ಆದರೆ ಈ ಉದ್ಯಮ ದಿಂದ ಅಲ್ಲಿಯ ಜನಗಳ ಆರೋಗ್ಯವೂ, ಶರೀರಪಟುತ್ವವೂ ಚೆನ್ನಾಗಿ ವೃದ್ಧಿಯಾಗಿ ಮುಂದೆ ಹೆಚ್ಚು ಹಣವನ್ನು ಅವರು ಸಂಪಾದಿಸಲು ಶಕ್ತರಾಗುತ್ತಾರೆ.

ಸ್ಥಳೀಯ ಸರಕಾರಗಳು ತಾವು ಕಲ್ಪಿಸಿಕೊಡುವ ಕೆಲವು ಸೌಕರ್ಯಗಳಿಗಾಗಿ ಹೆಚ್ಚುದರದ ತೆರಿಗೆಯನ್ನು ಹಾಕಿ, ಅದರಿಂದ ಉಳಿತಾಯವಾದ ಹಣದಿಂದ, ಸಾಮಾನ್ಯ ಪ್ರಜಾವೃಂದಕ್ಕೆ ಬೇಕಾದ ಹೆಚ್ಚು ಸೌಕರ್ಯಗಳನ್ನು ಕಲ್ಪಿಸಿಕೊಡುತ್ತವೆ. ಈ ರೀತಿ ಮಾಡುವುದು ಸರಿಯಾದುದೇ, ಒಬ್ಬರಿಂದ ಹೆಚ್ಚು ತೆರಿಗೆಯನ್ನು ತೆಗೆದು ಅದನ್ನು ಇತರ ಕಾರ್ಯಗಳಿಗಾಗಿ ಉಪಯೋಗಿಸುವುದು ಧರ್ಮವೇ, ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಪೌರಸಭೆಗಳವರು, ಮಾರ್ಕೆಟ್, ಆಟದ ಮೈದಾನಗಳು, ಉದ್ಯಾನವನಗಳು ಇವನ್ನು ಅಲ್ಲಲ್ಲಿ ನಿರ್ಮಾಣಮಾಡಿರುವುದನ್ನು ನಾವು ನೋಡುತ್ತಿದ್ದೇವೆ. ಇವು ಮೇಲೆ ಹೇಳಿದ ಗುಂಪಿಗೆ ಸೇರತಕ್ಕವುಗಳು.

ಸ್ಥಳೀಯ ಸರಕಾರಗಳು ನಿರ್ವಹಿಸುವ ಕಾರ್ಯಗಳಿಗಾಗಿ ಬೇಕಾಗುವ ಹಣದಲ್ಲಿ ಹೆಚ್ಚಿನ ಭಾಗವು ಆಯಾ ಸ್ಥಳದಲ್ಲಿ ವಾಸಮಾಡುವ ಪ್ರಜೆಗಳಿಂದ ಬರತಕ್ಕುದು ನ್ಯಾಯ, ಅವರು ಅನುಭವಿಸುವ ಸೌಕರ್ಯಗಳಿಗಾಗಿ ಎಷ್ಟು ಹಣ ಬೇಕೋ ಅದಕ್ಕಿಂತ ಹೆಚ್ಚು ಹಣವನ್ನು ಅವರಿಂದ ವಸೂಲ್ಮಾಡುವುದು ಧರ್ಮವಲ್ಲ. ಆದರೆ ಸ್ಥಳೀಯ ಸರಕಾರಗಳಿಗೆ ತೆರಿಗೆಯಿಂದ ಬರುವ ಹಣದಲ್ಲಿ ಹೆಚ್ಚು ಉಳಿತಾಯವಾಗದಿದ್ದರೆ ಅದು ಆ ಸರಕಾರದ ಅಸಾಮರ್ಥ್ಯದ ಗುರುತೆಂದು ಯಾರೂ ಭಾವಿಸಬೇಕಾದುದಿಲ್ಲ. ಕೇಂದ್ರ ಸರಕಾರವು ಸ್ಥಳೀಯ ಸಂಸ್ಥೆಗಳಿಗೆ ಸಹಾಯ ದ್ರವ್ಯವನ್ನು ಒದಗಿಸಿ, ಈ ಸಂಸ್ಥೆಗಳ ಬೆಳವಣಿಗೆಗೆ ಸಹಾಯಮಾಡಬೇಕೆಂಬ ತತ್ವಕ್ಕೆ ಹೆಚ್ಚಿನ ಮನ್ನಣೆ ದೊರೆತಿದೆ.

---

# ಪ್ರಕರಣ ೧೪

## ಸಾರ್ವಜನಿಕ ಸಾಲ

ಸಾಮಾನ್ಯಜನರಿಗೆ ಸಾಲವಿರಬಹುದು, ಸರಕಾರಕ್ಕೆ ಸಾಲವೇ ಎಂದು ಕೆಲವರು ಆಶ್ಚರ್ಯ ಪಡಬಹುದು. ಸಾಮಾನ್ಯವಾಗಿ ಒಬ್ಬ ಸಂಸಾರಿ ತನ್ನ ಕುಟುಂಬ ರಕ್ಷಣೆಗಾಗಿ ತಾನು ಸಂಪಾದಿಸುವ ಹಣ ಸಾಲದೆಹೋದಾಗ ಸಾಲ ಮಾಡಬೇಕಾದ ಪ್ರಸಂಗ ಒದಗುತ್ತದೆ. ಹೀಗೆಯೇ ಸರಕಾರ ತನಗೆ ನಿಯಾಮಕ ವಾದ ದೇಶರಕ್ಷಣೆ ಮತ್ತು ದೇಶಾಭ್ಯುದಯ ಕಾರ್ಯಗಳನ್ನು ನಿರ್ವಹಿಸಲು ರಾಜಾದಾಯದ ಮೂಲಕ ಬರುವ ಹಣ ಸಾಲದಿದ್ದರೆ ಸಾಲಮಾಡಿ ಆ ಕಾರ್ಯಗಳನ್ನು ನಿರ್ವಾಹ ಮಾಡಬೇಕು. ಸಾಮಾನ್ಯವಾಗಿ, ಯುದ್ಧಬಂದೊದಗಿದಾಗ ಸಾಲ ಮಾಡುವುದು ನಮಗೆಲ್ಲರಿಗೂ ತಿಳಿದಿರುವ ವಿಷಯ. ಸಾರ್ವಜನಿಕ ಸಂಸ್ಥೆಗಳೆಲ್ಲ ತಮ್ಮ ಸ್ಥಾನಮಾನಗಳಿಗೆ ತಕ್ಕಂತೆ ಸಾಲಮಾಡಿರುತ್ತವೆ. ಸಾಲವಿಲ್ಲದ ಸರಕಾರವೇ ಇಲ್ಲವೆನ್ನುವ ಮಟ್ಟಿಗೆ, ಸಾರ್ವಜನಿಕ ಸಾಲದ ಪ್ರಾಧಾನ್ಯ ಬೆಳೆದು ಬಂದಿದೆ.

ಕೆಲವು ಶತಮಾನಗಳ ಹಿಂದೆ ಸರಕಾರಕ್ಕೆ ಅತ್ಯವಶ್ಯಕವಾಗಿ ಬೇಕಾದ ಹಣ ವನ್ನು ಧನಿಕರಿಂದ ತೆರಿಗೆಯ ಮೂಲಕ ಮತ್ತು ಒತ್ತಾಯದ ಸಾಲಗಳ ಮೂಲಕ ಶೇಖರಿಸುವುದು ವಾಡಿಕೆಯಲ್ಲಿತ್ತು. ಆಗ ಐಚ್ಛಿಕ ಸಾರ್ವಜನಿಕ ಸಾಲಕ್ಕೆ ಎಡೆ ಇರಲಿಲ್ಲ. ಈಗ ಸ್ಥಿತಿಗತಿಗಳು ಬದಲಾಯಿಸಿವೆ. ಬ್ಯಾಂಕುಗಳ ಪ್ರಾಬಲ್ಯ ಹೆಚ್ಚಿದೆ. ಸರಕಾರದ ರಚನೆ ರೀತಿ ನೀತಿಗಳು ಬದಲಾವಣೆ ಹೊಂದಿವೆ. ಸರಕಾರದ ಆಯವ್ಯಯದ ಹತೋಟಿಯಲ್ಲಿ ಪ್ರಜೆಗಳಿಗಿರುವ ಸಂಬಂಧಗಳು ಬದಲಾ ಯಿಸಿರುತ್ತವೆ. ಆಳರಸರ ಆಯವ್ಯಯ, ಸಾಲಸೋಲಗಳು ಮತ್ತು ಸರಕಾರದ ಸಾಲದ ವ್ಯವಹಾರವು ಹಣಪೇಟೆಯ ವ್ಯವಸ್ಥೆಗೊಳಪಟ್ಟು ನಡೆಯಬೇಕಾಗಿರು ತ್ತದೆ. ಇದರಿಂದ ಸಾರ್ವಜನಿಕ ಸಾಲ ರೂಪುಗೊಂಡಿತು. ಈ ಪ್ರಕರಣದಲ್ಲಿ ಸರಕಾರದ ಸಾಲ ಸೋಲಗಳ ಬೆಳವಣಿಗೆ, ಅದರ ಕಾರಣಗಳು, ಸಾಲಗಳ ವಿಂಗಡಣೆ. ಸಾಲ ತೀರಿಸುವ ಬಗೆ, ಸಾಲದ ಹೊರೆ, ಇವೇ ಮೊದಲಾದ ವಿಷಯಗಳನ್ನು ವಿವರಿಸಲಾಗುವುದು.

ಈ ಶತಮಾನದ ಆದಿಯಲ್ಲಿ ಪ್ರಪಂಚದ ನಾನಾಭಾಗಗಳ ಸುಮಾರು ಇಪ್ಪತ್ತೇಳು ರಾಜ್ಯಗಳಲ್ಲಿನ ಸಾರ್ವಜನಿಕ ಸಾಲದ ಮೊತ್ತ ೬೦೭ ಕೋಟಿ ಪೌಂಡು ಗಳಷ್ಟು ಇತ್ತು. ೧೯೧೪ರ ವೇಳೆಗೆ ಸಾಲದ ಮೊತ್ತ ೮೫೬ ಕೋಟಿಗೆ ಏರಿ ೧೯೩೩ರಲ್ಲಿ ೨೨೦೦ ಕೋಟಿ ಪೌಂಡುಗಳಾದವು. ಕೇವಲ ಮೂವತ್ತು ವರುಷಗಳಲ್ಲಿ

ಸಾರ್ವಜನಿಕ ಸಾಲದ ಮೊತ್ತ ಮೂರೂವರೆಯಷ್ಟು ಏರಿದೆ. ಇಂಗ್ಲೆಂಡಿನ ಸರಕಾರ ದವರೂ, ಕೇಂದ್ರಸರಕಾರಕ್ಕೆ ಅಧೀನವಾದ ಸ್ಥಳೀಯ ಸಂಸ್ಥೆಗಳೂ, ಮಾಡಿರುವ ಒಟ್ಟು ಸಾಲದ ಮೊತ್ತವನ್ನು ಅಲ್ಲಿನ ತೆರಿಗೆ ತೆರುವ ಪ್ರಜಾಸಂಖ್ಯೆಗೆ ಹಂಚಿಹಾಕಿದರೆ ತಲೆಯೊಂದಕ್ಕೆ ಸುಮಾರು ೫೦೦೦ ಪೌಂಡುಗಳಂತೆ ಲೆಕ್ಕಾಚಾರವಾಗುವುದೆಂದು ಹೇಳಲ್ಪಟ್ಟಿತ್ತು. ಅಮೆರಿಕದ ಸಂಯುಕ್ತಸಂಸ್ಥಾನದ ಸರಕಾರ ಶೇಖರಿಸಿರುವ "ನ್ಯಾಷನಲ್ ಡೆಟ್" ಎಂಬ ಒಟ್ಟು ಜನಾಂಗದ ಸಾಲವೊಂದೇ ಯುದ್ಧಕ್ಕೆ ಹಿಂದಿನ ಸಾಮಾನ್ಯ ಪರಿಸ್ಥಿತಿಯಲ್ಲಿ ಸುಮಾರು ೧೬೦೦ ಕೋಟಿ ಡಾಲರುಗಳಿಗೆ ಏರಿದ್ದಿತು. ಈಚಿನ ಮೂರು ವರುಷಗಳಲ್ಲಿ ಯುದ್ಧ ಸಾಮಗ್ರಿಗಳನ್ನು ಒದಗಿಸಿಕೊಳ್ಳಲು ಹಣ ವನ್ನು ಸುರಿಯುತ್ತಿರುವ ವೇಳೆಯಲ್ಲಿ ಕೂಡಿಸಿರುವ ಸಾಲದ ಮೊತ್ತವನ್ನು ಊಹಿಸು ವುದು ಕೂಡ ಅಸಾಧ್ಯವಾಗಿರುವುದು. ಸಾರ್ವಜನಿಕ ವೆಚ್ಚ ಏರಿರುವಂತೆ ಸರಕಾರದ ಸಾಲವೂ ಹೆಚ್ಚುತ್ತಿರುವುದು ಮೇಲೆ ತಿಳಿಸಿರುವ ಕೆಲವು ಅಂಕಿಗಳಿಂದ ಸ್ಪಷ್ಟ ವಾಗದಿರದು. ಸಾರ್ವಜನಿಕ ಸಾಲದ ಬೆಳವಣಿಗೆ ಬಹಳಮಟ್ಟಿಗೆ ಇಪ್ಪತ್ತನೆಯ ಶತ ಮಾನದ ನಿರ್ಮಾಣವೆನ್ನಬಹುದು. ಕಳೆದ ಮಹಾಯುದ್ಧದ ಪರಿಣಾಮವನ್ನು ಸಾರ್ವ ಜನಿಕ ಸಾಲದ ಬೆಳವಣಿಗೆಯಲ್ಲಿ ನಾವು ಸುಲಭವಾಗಿ ಕಾಣಬಹುದು.

ಈ ಶತಮಾನದಲ್ಲಿ ಸಾರ್ವಜನಿಕ ಸಾಲದ ಬೆಳವಣಿಗೆಗೆ ಕೆಲವು ಮುಖ್ಯಕಾರಣ ಗಳುಂಟು. ಸಾಮಾನ್ಯವಾಗಿ ಸರಕಾರಗಳು ಮೂರು ನಾಲ್ಕು ಪ್ರಸಂಗಗಳಲ್ಲಿ ಸಾಲಮಾಡಿದಂತೆ ಕಂಡುಬಂದಿದೆ. ಸರಕಾರದ ಕಾರ್ಯಕಲಾಪಗಳು ವಿಸ್ತಾರಗೊಳ್ಳು ವುದೇ ಇದಕ್ಕೆ ಕಾರಣ. ದೇಶದಲ್ಲಿ ಮಳೆಬೆಳೆಗಳಾಗದೆ ಕ್ಷಾಮ ಒದಗಿ ಪ್ರಜೆಗಳು ಕಷ್ಟಪಡುತ್ತಿರುವಾಗ ದೇಶದಲ್ಲಿ ಶಾಂತಿ ಮತ್ತು ಸುಭಿಕ್ಷ ತಲೆದೋರಲು ಹೆಚ್ಚಿನ ಸಾರ್ವಜನಿಕ ಕಾರ್ಯಗಳನ್ನು ಸರಕಾರ ಕೈಕೊಳ್ಳಬೇಕಾಗುವುದು. ವ್ಯಾಪಾರ ಮತ್ತು ಕೈಗಾರಿಕೆಗಳ ಬೆಳವಣಿಗೆಗೆ ನಷ್ಟ ಉಂಟಾಗಿ ಪ್ರಜೆಗಳು ಒಂದು ಮುಗ್ಗಟ್ಟಿಗೆ ಸಿಕ್ಕಿ ದಾಗ, ಸರಕಾರ ಕೈಕೊಳ್ಳಬೇಕಾದ ದೇಶಾಭ್ಯುದಯ ಕಾರ್ಯಗಳಿಗೆ ವರ್ಷಂಪ್ರತಿ ತೆರಿಗೆ ಮತ್ತು ಇತರ ಬಾಬುಗಳಿಂದ ಬರುವ ವರಮಾನ ಸಾಲದೆ ಹೋಗುತ್ತದೆ. ಬರತಕ್ಕ ಆದಾಯ ಕುಗ್ಗಿ ವೆಚ್ಚ ಹೆಚ್ಚುತ್ತದೆ. ಈ ಸಮಯದಲ್ಲಿ ಸಾರ್ವಜನಿಕ ಸಾಲ ಮಾಡದೆ ಬೇರೆ ಮಾರ್ಗವಿಲ್ಲ. ಪರದೇಶದವರು ಸ್ವದೇಶದ ಮೇಲೆ ದಂಡೆತ್ತಿ ಬಂದಾಗ, ದೇಶದ ಪ್ರಜೆಗಳನ್ನು ಪರದೇಶದವರ ಹೊಡೆತದಿಂದ ತಪ್ಪಿಸಬೇಕಾದಾಗ, ಅಥವ ಇತರ ರಾಷ್ಟ್ರಗಳ ಮೇಲೆ ಯುದ್ಧ ಹೂಡಿದಾಗ ಸರಕಾರದ ಸಾಮಾನ್ಯ ವರಮಾನ ಸಾಲದೆ ಹೋಗಿ ಸಾಲಮಾಡಬೇಕಾಗುತ್ತದೆ.

ದೇಶದ ಪ್ರಜೆಗಳ ಸಂಪದಭಿವೃದ್ಧಿಗೆ ಅವಕಾಶಗಳನ್ನು ಕಲ್ಪಿಸಿ ಜನಜೀವನಕ್ಕೆ ಸೌಕರ್ಯಗಳನ್ನು ಕಲ್ಪಿಸಿ ಸಮಾಜದ ಮಟ್ಟವನ್ನು ಏರಿಸಲು ಅನುಕೂಲಿಸುವಂತೆ ಕೃಷಿ, ಕೈಗಾರಿಕೆ ಮತ್ತು ವ್ಯಾಪಾರ ಇವೇ ಮೊದಲಾದ ಉದ್ಯಮಗಳನ್ನು ಕೈಕೊಳ್ಳಲು ಸರಕಾರ ಸಾಲಮಾಡುವುದು ಈಚೆಗೆ ವಾಡಿಕೆಗೆ ಬಂದಿದೆ. ಜನಜೀವ ನದ ಸಮಸ್ಯೆಗಳು ಬಹುಮುಖವಾಗಿ ಬೆಳೆದಂತೆ ಸರಕಾರ ಆಚರಿಸುವ ಕಾರ್ಯಕ್ರಮ ಗಳೂ ಬದಲಾವಣೆ ಹೊಂದಿರುತ್ತವೆ. ಸರಕಾರ ಸಾಲಮಾಡುವುದು ಅವಶ್ಯಕ

ಮಾತ್ರವೇ ಅಲ್ಲ ; ಅದು ಉಚಿತವಾದುದೂ ಹೌದು ಎಂದು ಈಚಿನ ಅರ್ಥಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಫಲಪ್ರದವಾದ ದೊಡ್ಡ ದೊಡ್ಡ ಕೈಗಾರಿಕೆ ಉದ್ಯಮಗಳನ್ನು ಆರಂಭಿಸಬೇಕಾದಾಗ, ಪ್ರಜಾಸಮುದಾಯಕ್ಕೆ ಉಪಯೋಗವಾಗುವಂತಹ ನೀರಾವರಿ ಕಾಮಗಾರಿಗಳನ್ನು ಕೈಕೊಳ್ಳಬೇಕಾದಾಗ, ದೇಶದ ಸಂಪತ್ತನ್ನು ಅಭಿವೃದ್ಧಿಪಡಿಸುವ ರೈಲ್ವೆ ಮತ್ತು ರಸ್ತೆಗಳನ್ನು ನಿರ್ಮಾಣ ಮಾಡಬೇಕಾದಾಗ ಹೆಚ್ಚಿನ ಹಣ ಬೇಕಾಗುವುದು. ಈ ಕಾರ್ಯಗಳಿಂದ ದೊರಕುವ ಅನುಕೂಲಗಳನ್ನು ಬಹಳ ಕಾಲದವರೆಗೆ ಅನುಭವಿಸುವುದು ಸಾಧ್ಯ. ಹೀಗಿರುವುದರಿಂದ ಬಂಡವಾಳದ ರೂಪದಲ್ಲಿ ವೆಚ್ಚವಾಗುವ ಹಣವನ್ನು ತೆರಿಗೆಯ ಮೂಲಕ ಎತ್ತುವುದು ಸಾಧ್ಯವೂ ಅಲ್ಲ ; ನ್ಯಾಯವೂ ಅಲ್ಲ. ಸಾಲಮಾಡದೆ ನಮ್ಮ ದೇಶದಲ್ಲಿ ರೈಲು, ಜಲಾಶಯಗಳು, ವಿದ್ಯುಚ್ಛಕ್ತಿ ಮತ್ತು ಹಲವು ಕೈಗಾರಿಕೆಗಳ ಸೌಕರ್ಯಗಳನ್ನು ಒದಗಿಸುವುದು ಹೇಗೆತಾನೆ ಸಾಧ್ಯ? ಈ ವಿಧದ ಸಾಲದಲ್ಲಿ ಸಾಲದ ಹೊರೆಗಿಂತಲೂ ಅದರ ಅನುಕೂಲವೇ ಪ್ರಜಾಸಮುದಾಯಕ್ಕೆ ಹೆಚ್ಚೆಂದು ಹೇಳಬಹುದು.

ಈ ರೀತಿ ಸರಕಾರಕ್ಕೆ ಹಣ ಬೇಕಾದಾಗ ತಮಗೆ ಸಾಲ ಬೇಕೆಂದು ಕೊಡುವ ಬಡ್ಡಿ ಮತ್ತು ಸಾಲದ ಷರತ್ತುಗಳನ್ನು ಸೂಚಿಸಿ ವೃತ್ತಪತ್ರಿಕೆಗಳಲ್ಲಿ ಮತ್ತು ಸರಕಾರದ ಪ್ರಕಟಣೆಗಳ ಮೂಲಕ ಜನರಿಗೆ ತಿಳಿಯಪಡಿಸುತ್ತಾರೆ. ಇತರ ಖಾಸಗಿ ಸಂಸ್ಥೆಗಳಿಗಿಂತ ಸಾರ್ವಜನಿಕ ಸಂಸ್ಥೆಯಲ್ಲಿ ಜನರಿಗೆ ಸಾಮಾನ್ಯವಾಗಿ ಹೆಚ್ಚು ನಂಬಿಕೆ ಇರುತ್ತದೆ. ದೇಶದ ರಕ್ಷಣೆಗಾಗಿ ನಿಂತಿರುವ ಸಂಸ್ಥೆಯಾದ ಸರಕಾರಕ್ಕೆ ಜನರು ಮತ್ತು ಖಾಸಗಿ ಸಂಸ್ಥೆಗಳು ತಮ್ಮಲ್ಲಿರುವ ದ್ರವ್ಯವನ್ನು ಸಾಲದ ರೂಪದಲ್ಲಿ ಒದಗಿಸಿಕೊಡುವರು.

ಒಬ್ಬ ವ್ಯಕ್ತಿಗೆ ಸಾಲ ಅವನ ಆಸ್ತಿ ಮಾನ ಘನತೆಗಳ ಮೇಲೆ ದೊರೆಯುತ್ತದೆ. ಅವನು ಅಳಿದ ಮೇಲೆ ಅವನು ತೆಗೆದುಕೊಂಡಿದ್ದ ಸಾಲದಷ್ಟು ಹಣವನ್ನು ಎಲ್ಲ ಸಮಯದಲ್ಲಿಯೂ ಅವನ ವಂಶದವರು ಪಡೆಯುವುದಕ್ಕೆ ಅರ್ಹರಾಗದಿರಬಹುದು. ಸಾಲಕೊಡುವವನಿಗೆ ಖಾಸಗಿ ಜನರ ವಿಷಯದಲ್ಲಿ ಒಂದೇಸಮನಾದ ನಂಬುಗೆ ಇರುವುದಿಲ್ಲ. ಸರಕಾರದ ವಿಷಯ ಬೇರೆ. ಸರಕಾರ ಆಗಾಗ ಬದಲಾಯಿಸದಿರುವ ಯಂತ್ರ. ಅದರ ಪ್ರತಿಷ್ಠೆ ಮತ್ತು ಘನತೆ, ಹೆಚ್ಚು ಏರಿಳಿತಗಳಿಗೆ ಒಳಗಾಗುವುದಿಲ್ಲ. ಸರಕಾರದ ಅಧಿಕಾರಸೂತ್ರ ಕೈಲಿಹಿಡಿದಿರುವ ಅಧಿಕಾರಿಗಳಲ್ಲಿ ಬದಲಾವಣೆಯಾದರೂ, ಸರಕಾರ ಅನಂತಕಾಲವಿರುವ ಸಂಸ್ಥೆ. ಕೊಟ್ಟಿರುವ ಸಾಲಕ್ಕೆ ಹೊಣೆಗಾರರು ಸರಕಾರದ ಅಧಿಕಾರಿಗಳಲ್ಲ ಸರಕಾರದ ಆಡಳಿತಕ್ಕೆ ಒಳಪಟ್ಟ ಸಮಾಜ. ಇದರಿಂದಲೇ ಕೊಟ್ಟಸಾಲಕ್ಕೆ ಚ್ಯುತಿಯಿಲ್ಲ. ಸರಕಾರದವರು ಸಾಲ ಬೇಕೆಂದಾಗ, ಎಷ್ಟೋಬಾರಿ ಅವರು ಸೂಚಿಸುವ ಅವಧಿಯೊಳಗಾಗಿಯೇ ಹಣವೆಲ್ಲ ಸಂದುಹೋಗುತ್ತದೆ.

ಸರಕಾರ ಸಾಮಾನ್ಯವಾಗಿ ಎರಡು ವಿಧವಾಗಿ ಸಾಲವೆತ್ತುತ್ತದೆ. ಹಣ ಒದಗಿಸಿದವರಿಗೆ ಬಡ್ಡಿ ಕೊಟ್ಟು ದೇಶದ ಜನರ ಅಭಿಮಾನ ಪ್ರೇಮಗಳನ್ನು ಉದ್ರೇಕಗೊಳಿಸಿ, ಮತ್ತು ಸಾಲಕೊಡುವುದರಿಂದ ಉಂಟಾಗುವ ಫಲಗಳನ್ನು

ಪ್ರಚಾರಮಾಡಿ ಜನರಿಂದ ಸಾಲತೆಗೆಯುವುದು ಒಂದು ಮಾರ್ಗ. ಇದು ಆಕರ್ಷಣೆಯ ಮಾರ್ಗ. ಜನರಲ್ಲಿರುವ ಹಣವನ್ನು ಬೇರೆ ವಿಧವಾಗಿ ಉಪಯೋಗ ಮಾಡದಂತಹ ಸನ್ನಿವೇಶಗಳನ್ನು ಕಲ್ಪಿಸಿ, ದೇಶದ ಆರ್ಥಿಕ ಸ್ಥಿತಿಯನ್ನು ಪೂರ್ತ ತಮ್ಮ ಹತೋಟಿಗೆ ತೆಗೆದುಕೊಂಡು, ಸಾಲಪಡೆಯುವುದು ಇನ್ನೊಂದು ಮಾರ್ಗ. ಇದು ನಿರೋಧಮಾರ್ಗವೆನ್ನಬಹುದು. ಇಂತಹ ಮಾರ್ಗವನ್ನು ಸಾಮಾನ್ಯವಾಗಿ ಯುದ್ಧ ಮೊದಲಾದ ವಿಶೇಷ ಪ್ರಸಂಗಗಳಲ್ಲಿ ಅನುಸರಿಸುತ್ತಾರೆ.

ಸಾರ್ವಜನಿಕ ಸಾಲಗಳನ್ನು

೧. ಸಾಲದ ಅವಧಿಯನ್ನು ಗಮನದಲ್ಲಿಟ್ಟುಕೊಂಡು
೨. ಸಾಲದ ಉದ್ದೇಶವನ್ನು ತಿಳಿದು
೩. ಸಾಲವನ್ನು ಪಡೆಯುವ ವಿಧಾನವನ್ನು ಅನುಸರಿಸಿ
೪. ಸಾಲವನ್ನು ಕೊಟ್ಟಿರುವವರು ಯಾರು ಎಂಬುದನ್ನು ವಿಮರ್ಶೆ ಮಾಡಿ ಮತ್ತು
೫. ಸಾಲ ತೀರಿಸುವ ಮಾರ್ಗವನ್ನು ಗಮನದಲ್ಲಿಟ್ಟು

ಬೇರೆ ಬೇರೆ ರೀತಿ ವಿಂಗಡಿಸಬಹುದು.

ಸಾಲದ ಅವಧಿಯನ್ನು ಗಮನದಲ್ಲಿಟ್ಟುಕೊಂಡು ಅಲ್ಪಕಾಲದ ಮತ್ತು ದೀರ್ಘ ಕಾಲದ ಸಾಲಗಳೆಂದು ವಿಂಗಡಿಸುವುದುಂಟು. ಖಾಸಗಿ ಜನರು ಮತ್ತು ಸಂಸ್ಥೆಗಳು ಕೊಡುವ ಹಣವನ್ನು ಬೇಕಾದಾಗ ಹಿಂದಕ್ಕೆ ಪಡೆಯುವ ಕೆಲವು ಷರತ್ತುಗಳಮೇಲೆ ಶೇಖರಿಸುವ ಹಣವನ್ನು ಅಲ್ಪಕಾಲಾವಧಿಯ ಸಾಲವೆಂದು ಭಾವಿಸಬೇಕು. ಖಜಾನೆಯ ಸೇವಿಂಗ್ಸ್ ಬ್ಯಾಂಕಿನಲ್ಲಿ ಡಿಪಾಸಿಟ್ ರೂಪದಲ್ಲಿ ಕೂಡಿಸುವ ಹಣವನ್ನು ಸರಕಾರ ತನ್ನ ಕಾರ್ಯಗಳಿಗಾಗಿ ಉಪಯೋಗಿಸುವುದುಂಟು. ಈ ಹಣವನ್ನು ಡಿಪಾಜಿಟ್‌ದಾರರು ಕೇಳಿದಾಗ ಹಿಂತಿರುಗಿ ಕೊಡಲು ಸರಕಾರ ತಕ್ಕ ವ್ಯವಸ್ಥೆ ಮಾಡಿರುತ್ತದೆ. ಹೀಗೆ ಠೇವಣಾತಿಗಳ ಮೂಲಕ ಶೇಖರಿಸುವ ಹಣ, ಖಜಾನೆ ಹುಂಡಿಗಳ ಮೂಲಕ ಸಂಗ್ರಹಿಸುವ ಧನ, ಈ ಅಲ್ಪಕಾಲದ ಸಾಲದ ಗುಂಪಿಗೆ ಸೇರಿದುವು. ಸಾಲದ ಪತ್ರಗಳನ್ನು ಕೊಟ್ಟು ಸಾಲತೀರಿಸುವುದಕ್ಕೆ ಒಂದು ಗಡುವನ್ನು ಗೊತ್ತುಮಾಡಿ ಹಣ ಸಂಗ್ರಹ ಮಾಡುವ ಬಗೆ ದೀರ್ಘಕಾಲದ ಸಾಲವೆನ್ನಬಹುದು. ಸಾಲದ ಪ್ರೋನೋಟು, ಬಾಂಡುಗಳ ಮೂಲಕ ನಿಯಮಿತ ವಾಯಿದೆ ಸೂಚಿಸಿ ಕೂಡಿಸುವ ಸಾಲವು ಈ ಗುಂಪಿಗೆ ಸೇರುತ್ತದೆ. ಜೀವವಿಮೆ ಇಲಾಖೆ, ಪ್ರಾವಿಡೆಂಟ್ ಫಂಡು ಇವುಗಳಿಂದ ಸಂಗ್ರಹಿಸುವ ಸಾಲದ ಹಣವನ್ನು ಮೊದಲಿನ ಗುಂಪಿನಲ್ಲಿ ಸೇರಿಸುವುದು ರೂಢಿಯಲ್ಲಿದೆ.

ಸರಕಾರ ಸಾಲವನ್ನು ಏತಕ್ಕಾಗಿ ಮಾಡುತ್ತದೆ ಎಂಬುದನ್ನು ಗಮನದಲ್ಲಿಟ್ಟುಕೊಂಡು, ಅದರ ಉದ್ದೇಶವನ್ನನುಸರಿಸಿ ವಿಭಾಗ ಮಾಡುವುದು ಎರಡನೆಯ ಬಗೆ. ಸರಕಾರ ತನ್ನ ದೇಶ ಇತರ ದೇಶಗಳ ಮೇಲೆ ಯುದ್ಧಹೂಡಿದಾಗ, ಅಥವಾ ಪರ ರಾಷ್ಟ್ರಗಳ ಧಾಳಿಯನ್ನು ತಡೆದು ದೇಶವನ್ನು ಸಂರಕ್ಷಿಸಬೇಕಾದಾಗ, ಸೈನಿಕರ

ಅನ್ನವಸ್ತ್ರಗಳು, ಔಷಧೋಪಚಾರಗಳು, ಮದ್ದುಗುಂಡು ಮೊದಲಾದ ಜೀವನಾಶಕ ಸಾಮಗ್ರಿಗಳು, ವಾಹನ ಸಲಕರಣೆಗಳು, ಇವುಗಳಿಗಾಗಿ ಹಣ ಸಾಲದೆ ಸಾಲ ಮಾಡುತ್ತದೆ. ಅಲ್ಲದೆ, ದೇಶದಲ್ಲಿ ಶಾಂತಿ ಇರುವಾಗ, ಕೈಗಾರಿಕೆ, ವ್ಯಾಪಾರ ಮುಂತಾದ ದೇಶಾಭ್ಯುದಯ ಕಾರ್ಯಗಳಿಗಾಗಿ ಸಾಲಮಾಡುತ್ತದೆ. ಇದರಿಂದ ಸರ ಕಾರಕ್ಕೆ ಹಣದ ರೂಪದಲ್ಲಿ ಆದಾಯಬರುತ್ತದೆ. ಮೊದಲನೆಯದು ವಿಫಲಋಣ, ಎರಡನೆಯದು ಸಫಲಋಣ. ಯುದ್ಧ ಕಳೆದ ಮೇಲೆ ಹಾಕುವ ರಾಜದಂಡಗಳೆಲ್ಲವೂ ವಿಫಲಋಣಗಳೇ. ಅವುಗಳನ್ನು ತೀರಿಸಲು ಮಾಡುವ ಸಾಲಗಳೂ ಹಾಗೆಯೇ. ಇಂಡಿಯಾ ದೇಶದಲ್ಲಿ ೧೮೫೭ರಲ್ಲಿ ಆದ ಕ್ರಾಂತಿಯ ಶಮನಕ್ಕಾಗಿ ಮಾಡಿದ ಸಾಲ ವಿಫಲಋಣ. ಕ್ಷಾಮನಿವಾರಣೆಗಾಗಿ, ಜನರ ಜೀವನಕ್ಕಾಧಾರವಾದ ಜಲಾಶಯ ನಿರ್ಮಾಣಕ್ಕಾಗಿಯೂ ಸರಕಾರ ಸಾಲಮಾಡುತ್ತದೆ. ಇಂತಹ ಸಾಲಗಳಿಂದ ಪ್ರತ್ಯಕ್ಷ ವಾಗಿ ಹೆಚ್ಚು ಆದಾಯ ಬರದಿದ್ದರೂ ದೇಶದ ಜನರಿಗೆ ಸೌಕರ್ಯಗಳು ಹೆಚ್ಚಿ, ಅವರ ಜೀವನ ಉತ್ತಮಗೊಳ್ಳುವುದರಿಂದ ಅದನ್ನು ಸಫಲ ಋಣವೆಂದೇ ಭಾವಿಸಬೇಕು.

ಸಾಲವನ್ನು ಪಡೆಯುವ ವಿಧಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾಲವನ್ನು ವಿಂಗಡಿಸಬಹುದು. ಸರಕಾರಕ್ಕೆ ಹಣಬೇಕಾದಾಗ ಸರಕಾರವು ಆಕರ್ಷಣೀಯ ವಾದ ರೀತಿಯಲ್ಲಿ ಬಡ್ಡಿಯ ದರವನ್ನು ಸೂಚಿಸಿ ಸಾಲವನ್ನು ಪಡೆಯುತ್ತದೆ. ಹಣ ವಿರುವ ಜನರು ತಮ್ಮಿಷ್ಟಕ್ಕೆತಾವೇ ಸರಕಾರಕ್ಕೆ ಬೇಕಾದ ಹಣಕ್ಕಿಂತ ಹೆಚ್ಚಾಗಿ ಹಣವನ್ನು ಒದಗಿಸುತ್ತಾರೆ. ಅಲ್ಲದೆ ಸರಕಾರ ಹಣವಂತರಿಂದ ಬಲಾತ್ಕಾರದಿಂದ ಸಾಲ ತೆಗೆದುಕೊಳ್ಳಬಹುದು. ಟ್ಯೂಡರ್ ಮತ್ತು ಸ್ಟ್ಯೂಯರ್ಟ್ ಮನೆತನದ ರಾಜರ ಕಾಲದಲ್ಲಿ ಇಂಗ್ಲೆಂಡಿನಲ್ಲಿ ರಾಜರು ಶ್ರೀಮಂತರಿಂದ ಬಲಾತ್ಕಾರವಾಗಿ ಹಣವನ್ನು ಸಾಲದ ರೂಪದಲ್ಲಿ ತೆಗೆದುಕೊಂಡುದು ಚರಿತ್ರೆಯಿಂದ ತಿಳಿದುಬರುತ್ತದೆ. ಘೋರ ಯುದ್ಧದ ಕಾಲದಲ್ಲಿ ಜನರ ಆಸ್ತಿಪಾಸ್ತಿಗಳೆಲ್ಲವೂ ಸರಕಾರಕ್ಕೆ ಸೇರಿದುದೆಂದು ತೀರ್ಮಾನಿಸಬಹುದು. ಇದನ್ನು ಬಲಾತ್ಕಾರ ಸಾಲವೆನ್ನಬಹುದು.

ಯಾರಿಂದ ಸಾಲ ತೆಗೆದುಕೊಂಡಿದ್ದೇವೆ ಎಂಬುದನ್ನು ನಿಶ್ಚಯಿಸಿ ಸಾಲವನ್ನು ವಿಂಗಡಿಸುವುದು ಇನ್ನೊಂದು ಮಾರ್ಗ. ಸಾಲಕೊಟ್ಟಿರುವವರು ನಮ್ಮ ದೇಶದವರೆ ಅಥವ ಇತರರೆ ? ನಮ್ಮ ದೇಶದ ಶ್ರೀಮಂತರಿಂದಲೇ ಸಾಲವನ್ನು ಎತ್ತಿದರೆ ಅದ ರಿಂದ ಎರಡು ಮೂರು ಗುಣಗಳುಂಟು. ಹಣಕೊಟ್ಟವರಿಗೆ ಬಡ್ಡಿ ಬಂದು, ಆ ಹಣವೂ ಕೂಡ ನಮ್ಮ ದೇಶದಲ್ಲಿಯೇ ನಿಂತು ಇಲ್ಲಿಯ ವಾಣಿಜ್ಯ ವ್ಯಾಪಾರಗಳಿಗಾಗಿ ಉಳಿ ಯುತ್ತದೆ. ಪರದೇಶದವರಿಂದ ಬಂದ ಸಾಲವಾದರೆ, ನಮ್ಮ ದೇಶದಿಂದ ಪ್ರತಿ ವರ್ಷವೂ ಬಡ್ಡಿ ರೂಪದಲ್ಲಿ ಹಣ ಹೊರಗೆ ಹೋಗುತ್ತದೆ. ಸಾಲದ ಹೊರೆ ನಮ್ಮ ಮೇಲೆ ನಿಲ್ಲುತ್ತದೆ. ದೇಶದ ಹಣವೂ ವರ್ಷಂಪ್ರತಿ ಹೊರಗೆ ಹೋಗು ತ್ತದೆ. ಈ ರೀತಿಯ ಸ್ವದೇಶಿ ಮತ್ತು ವಿದೇಶಿ ಸಾಲಗಳು ಜನಜೀವನದ ಮೇಲೆ ವಿಧ ವಿಧವಾದ ಪರಿಣಾಮವನ್ನುಂಟುಮಾಡುತ್ತವೆ.

ಸಾಲ ತೀರಿಸುವ ಮಾರ್ಗವನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾಲವನ್ನು ವಿಂಗಡಿಸ ಬಹುದು. ಸಾಲದ ಗಡುವಿನ ವೇಳೆಗೆ ಸಾಲತೀರಿಸುವುದಕ್ಕೆ ಬೇಕಾದ ಹಣವನ್ನು

ಪ್ರತ್ಯೇಕವಾಗಿ ಪ್ರತಿವರ್ಷದ ಹುಟ್ಟುವಳಿಯಲ್ಲಿಯೂ ತೆಗೆದಿಡುತ್ತ ಬಂದು, ಸಾಲ ತೀರ್ವೆಯ ನಿಧಿಯ ಮೂಲಕ ತೀರಿಸುವ ಸಾಲ ಒಂದು ಬಗೆಯದು. ಯಾವ ವಿಧದ ತೀರ್ವೆ ನಿಧಿಯನ್ನೂ ಸ್ಥಾಪಿಸದೆ, ತಾವು ಠೇವಣಾತಿಗಳು ಮೊದಲಾದುವನ್ನು ಉಪಯೋಗಿಸಿಕೊಳ್ಳುವುದರ ಮೂಲಕ ತೆಗೆದುಕೊಂಡಿರುವ ಸಾಲ ಎರಡನೆಯ ಬಗೆಯದು.

ಈ ವಿಂಗಡಣೆಗಳಲ್ಲಿ ಸಾಲ ಸ್ವದೇಶಿಯೆ, ವಿದೇಶಿಯೆ ? ಅದರಲ್ಲಿ ಸಫಲಋಣವೆಷ್ಟು? ವಿಫಲ ಋಣವೆಷ್ಟು ? ಎಂದು ಪರ್ಯಾಲೋಚಿಸುವುದು ಉತ್ತಮವಾದ ಮಾರ್ಗ.

## ಸಾಲ ತೆರಿಗೆಯೆ ?

ಸರಕಾರಕ್ಕೆ ಸಾಲದ ರೂಪದಲ್ಲಿ ಬರುವ ಹಣವೂ ತೆರಿಗೆಯಂತೆಯೇ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಸರಕಾರಕ್ಕೆ ಬರುವ ಹಣ ಅದಕ್ಕೆ ಯಾವ ಹೆಸರೇ ಕೊಡಲಿ, ಸಾಲವೆನ್ನಿ ಅಥವಾ ತೆರಿಗೆಯೆನ್ನಿ ಆ ದೇಶದ ಪ್ರಜೆಗಳಿಂದಲೇ ಬರುತ್ತದೆ. ಅದರಿಂದ ಆಗುವ ಪ್ರತಿಫಲ ಆ ದೇಶದ ಜನರಿಗೆ ಸೇರಿದ್ದು. ಆದುದರಿಂದ ಸಾಲಕ್ಕೂ ತೆರಿಗೆಗೂ ವ್ಯತ್ಯಾಸವೇನು ಎಂಬುದು ಅವರ ಪ್ರಶ್ನೆ. ಸಾಲಕ್ಕೂ ತೆರಿಗೆಗೂ ಕೆಲವು ವ್ಯತ್ಯಾಸಗಳಿವೆ. ತೆರಿಗೆ ಸರಕಾರಕ್ಕೆ ಕಡ್ಡಾಯವಾಗಿ ಕೊಡುವ ಹಣ. ಸಾಲ ಕಡ್ಡಾಯವಾಗಿ ಕೊಡುವ ಹಣವಲ್ಲ, ಹಣವುಳ್ಳವರು ಸರಕಾರಕ್ಕೆ ತಮ್ಮ ಪೂರ್ಣ ಒಪ್ಪಿಗೆಯಿಂದ ಕೊಡುವ ಹಣ. ಸಾಲ ಕೊಟ್ಟಮೇಲೆ ಆ ಹಣವಂತನ ಕೈಲಿ ಮೊದಲಿದ್ದ ಹಣ ಕೆಲವುಕಾಲ ಅವನಲ್ಲಿ ಇಲ್ಲದಿದ್ದರೂ ಪ್ರತಿವರ್ಷವೂ ಅವನಿಗೆ ಬಡ್ಡಿ ಬರುತ್ತದೆ. ಕೊಟ್ಟ ಹಣ ಕಾಲಕ್ರಮದಲ್ಲಿ ಹಿಂತಿರುಗಿ ಬರುತ್ತದೆ. ಸಾಲಕೊಟ್ಟಿರುವವನೂ ದೇಶದ ಪ್ರಜೆಯಾದುದರಿಂದ ಆ ಸಾಲದ ಬಡ್ಡಿಯನ್ನು ಪಾವತಿ ಮಾಡುವುದಕ್ಕೂ, ಸಾಲದ ಹಣ ತೀರಿಸುವುದಕ್ಕೂ, ತಾನೂ ಕೂಡ, ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಯಾದರೂ ಕಾಣಿಕೆಯನ್ನು ಕೊಡುತ್ತಿದ್ದೇನೆಂಬ ಭಾವನೆ ಇದರಿಂದ ಅವನಿಗೆ ಹುಟ್ಟುವುದಿಲ್ಲ. ಅಂತಹ ಭಾವನೆ ಬಂದರೂ ತೆರಿಗೆಗಿಂತ ಈ ಮಾರ್ಗ, ಎಂದರೆ ಸಾಲ ಕೊಡುವ ಮಾರ್ಗ, ಸುಲಭವಾದುದೆಂದು ಅವನಿಗೆ ಗೊತ್ತು.

ತೆರಿಗೆ ದೇಶದ ಪ್ರತಿಯೊಬ್ಬ ಪ್ರಜೆಯೂ ತೆರಬೇಕಾದ ಹಣ. ಸಾಲ ಹಾಗಲ್ಲ. ಹಣವುಳ್ಳವರು ಮಾತ್ರ ಇದನ್ನು ಕೊಡುತ್ತಾರೆ. ಶಕ್ತಿಯುಳ್ಳವರು ಮಾತ್ರ ಸಾಲ ಕೊಡುತ್ತಾರೆ. ಸಾಲವನ್ನೂ ಸಾಲದ ಬಡ್ಡಿಯನ್ನೂ ತೀರಿಸುವುದಕ್ಕಾಗಿ ತೆರಿಗೆಗಳಿಂದಲೇ ಹಣ ಬರಬೇಕು. ತೆರಿಗೆಯನ್ನು ಕೊಡುವವರು ಜನಸಾಮಾನ್ಯದವರು. ಆದುದರಿಂದ ಸಾಲ ಮಾಡಿ ಹಣಪಡೆಯುವುದರಿಂದ ದೇಶದ ಸಂಪತ್ತನ್ನು ಪ್ರಜೆಗಳಲ್ಲಿ ಹಂಚಲು ಸರಕಾರಕ್ಕೆ ಸ್ವಲ್ಪಮಟ್ಟಿಗೆ ಅವಕಾಶ ದೊರೆಯುತ್ತದೆ.

ತೆರಿಗೆಗಳನ್ನು ಕೊಡುವುದು ಜನರ ಆದಾಯದ ಮೇಲೆ. ತೆರಿಗೆ ಕೊಡುವುದರಿಂದ ಪ್ರಜೆ ತನ್ನ ಆದಾಯವನ್ನು ತಗ್ಗಿಸಿಕೊಂಡಂತಾಯಿತು. ಆದರೆ ಸಾಲದಿಂದ ಹೀಗಾಗುವುದಿಲ್ಲ. ಸಾಲಕೊಟ್ಟವನ ಆದಾಯ, ಪ್ರತಿವರ್ಷವೂ ಹೆಚ್ಚುತ್ತಿರುತ್ತದೆ. ಎಷ್ಟೋಬಾರಿ ಬ್ಯಾಂಕುಗಳಲ್ಲಿ ಹಾಕಿರುವ ಹಣವನ್ನು ತೆಗೆದು ಸರಕಾರಕ್ಕೆ ಸಾಲ

ಕೊಡುತ್ತಾರೆ. ಇದರಿಂದ ಸರಕಾರಕ್ಕೆ ಹೆಚ್ಚು ಕೊಳ್ಳುವಶಕ್ತಿ ಬಂದಂತಾಗುತ್ತದೆ. ಜನರ ಶಕ್ತಿ ಕುಗ್ಗುವುದಿಲ್ಲ. ಇದರ ಫಲವಾಗಿ ದರಗಳು ಹೆಚ್ಚುವುವು. ಕೊಳ್ಳುವ ಶಕ್ತಿಯೂ ಜನರಲ್ಲಿ ಹೆಚ್ಚುವುದೂ ಉಂಟು.

ಸಾಲ ಮತ್ತು ತೆರಿಗೆ ಇವುಗಳನ್ನು ಎತ್ತುವ ಬಗೆ, ಇವುಗಳಿಂದ ಮುಂದಾಗ ಬಹುದಾದ ಅನುಕೂಲ ಪ್ರತಿಕೂಲಗಳನ್ನು ವಿಮರ್ಶಿಸಿ ನೋಡಿದರೆ ಸಾಲ ತೆರಿಗೆ ಯಲ್ಲ; ಸಾಲ, ತೆರಿಗೆ, ಇವೆರಡೂ ಸರಕಾರಕ್ಕೆ ಹಣವನ್ನು ಬರಮಾಡುವ ಎರಡು ಸ್ವತಂತ್ರ ಮಾರ್ಗಗಳು ಎಂದು ವೇದ್ಯವಾಗುವುದು.

## ಸಾಲದ ನಿಯಮಗಳು

ಸರಕಾರ ತನಗೆ ಸಾಲ ದೊರೆಯುತ್ತದೆಯೆಂಬ ಭರದಲ್ಲಿ ಅವಶ್ಯಕವಾಗಿ ಬೇಕಾದ ಹಣಕ್ಕಿಂತ ಹೆಚ್ಚಾಗಿ ಸಾಲಮಾಡಬಾರದು. ತಾನು ಮಾಡುತ್ತಿರುವ ಸಾಲದ ವಿಷಯದಲ್ಲಿ ಪ್ರಜೆಗಳು ಎದುರಿಸುವುದಿಲ್ಲವೆ? ಆ ಸಾಲದಿಂದ ಪ್ರಜೋಪಕಾರ ಕಾರ್ಯಗಳು ಎಷ್ಟು ಮಾತ್ರ ನಡೆಯುತ್ತವೆ? ಎಂಬುದನ್ನು ಮೊದಲು ಯೋಚಿಸಬೇಕು. ಸಾಲ ಮಾಡುವಾಗ, ಸಾಲದಿಂದ ಮುಂದೆ ಸಂಭವಿಸಬಹುದಾದ ತೊಂದರೆಗೆ ಆ ಸರಕಾರವಾಗಲಿ, ದೇಶದ ಪ್ರಜೆಗಳಾಗಲಿ ಸಿಕ್ಕದಂತೆ ಸಾಲವೆತ್ತಬೇಕು. ಸಾಲದಿಂದ ಒದಗಿಸಿಕೊಂಡ ಹಣವನ್ನು ದುಂದುಗಾರಿಕೆಯಿಂದ ಅನುಪಯುಕ್ತ ಕಾರ್ಯಗಳಿಗೆ ವೆಚ್ಚಮಾಡಿದರೆ ಪ್ರಜೆಗಳು ತಮ್ಮ ಅಸಮ್ಮತಿಯನ್ನು ತೋರಿಸುವರು. ಇದು ನ್ಯಾಯ. ಒಟ್ಟಿನಲ್ಲಿ ಸರಕಾರ ಎರಡು ಮೂರು ಸಂದರ್ಭಗಳಲ್ಲಿ ಸಾಲ ಮಾಡುವುದು ಸಾಧುವಲ್ಲವೆಂದು ಶಾಸ್ತ್ರಜ್ಞರ ಅಭಿಪ್ರಾಯ.

ಸರಕಾರ ಸಾಲವೆತ್ತಿ ತನ್ನ ಆಯವ್ಯಯವನ್ನು ಸರಿತೂಗಿಸಿಕೊಳ್ಳುವುದರಿಂದ, ಪ್ರಜೆಗಳಿಗೆ ಸರಕಾರದ ವಾಸ್ತವಿಕ ಹಣಕಾಸಿನ ಪರಿಸ್ಥಿತಿ ಇಂತಹುದೆಂದು ತಿಳಿಯದೆ ಹೋಗುವುದು. ಹೀಗೆ ಸರಕಾರ ಸಾಲ ಮಾಡಿ, ತನ್ನ ಕುಂದನ್ನು ಮರೆಮಾಡಿ ಕೊಳ್ಳುವುದು ಯೋಗ್ಯವಾದುದಲ್ಲ. ಸರಕಾರಕ್ಕೆ ಬೇಕಾದ ಹಣವನ್ನು ತೆರಿಗೆ ದರವನ್ನು ಹೆಚ್ಚಿಸಿ ಪಡೆಯುವ ಸಂಭವವಿದ್ದರೆ ಆಗ ಸಾಲಮಾಡಲಾಗದು. ವಿದೇಶೀ ಯರಿಂದ ಹೆಚ್ಚಾಗಿ ಸಾಲ ತೆಗೆದುಕೊಳ್ಳುವುದರಿಂದ ಕೆಲವು ಸರಕಾರಗಳ ಪ್ರತಿಷ್ಠಾ ಗೌರವಗಳಿಗೆ ಲೋಪಬರುವ ಸಂಭವವುಂಟು. ಈ ಸಮಯದಲ್ಲಿ ಸರಕಾರ ಸಾಲ ಮಾಡುವುದು ಸರಿಯಲ್ಲ.

ಇನ್ನೊಂದು ಆರ್ಥಿಕ ದೃಷ್ಟಿ. ಸರಕಾರ ಸಾಲಮಾಡುತ್ತಾ ಹೋದರೆ ಸಾಮಾನ್ಯವಾಗಿ ಪ್ರಜೆಗಳಲ್ಲಿದ್ದ ಹಣ, ಫಲಪ್ರದವಾದ ಕೈಗಾರಿಕೆ ಮೊದಲಾದುವು ಗಳಿಗೆ ಉಪಯೋಗವಾಗುವುದು ತಪ್ಪಿ, ದೇಶದಲ್ಲಿನ ಅನೇಕ ಖಾಸಗಿ ಕೈಗಾರಿಕೆ ಗಳಿಗೆ ಮತ್ತು ವ್ಯಾಪಾರ ವಾಣಿಜ್ಯಗಳಿಗೆ ತೊಂದರೆಯಾಗುವ ಸಂಭವವುಂಟು. ಆದುದರಿಂದ ಸಾಲದ ರೂಪದಲ್ಲಿ ಬರುವ ಹಣ, ದೇಶದ ಕೈಗಾರಿಕೆ ಮತ್ತು ವ್ಯಾಪಾರ ಮೊದಲಾದುವುಗಳಿಗೆ ಉಪಯೋಗವಾಗುತ್ತಿದ್ದ ಹಣವಲ್ಲವೆಂದು ದೃಢವಾದ ಹೊರತು

ಸಾಲಮಾಡಬಾರದು. ಸರಕಾರವು ಕೈಗಾರಿಕೆ, ಕೃಷಿ, ವಾಣಿಜ್ಯ ಮೊದಲಾ
ಸಂಪದಭಿವೃದ್ಧಿ ಕಾರ್ಯಗಳನ್ನು ಕೈಕೊಂಡು ತನ್ನ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳ
ತ್ತಿರುವುದು ಈಚಿಗೆ ರೂಢಿಗೆ ಬರುತ್ತಿದೆ.

ತೆಗೆದ ಕೊಳ್ಳುವ ಸಾಲ ಯಾವ ಬಗೆಯದು, ಎಂಬುದನ್ನು ಸರಕಾರ ಗಮನ
ದಲ್ಲಿಟ್ಟಿರಬೇಕು. ಅಲ್ಪಾವಧಿಯ ಸಾಲಗಳು ಸರಕಾರಕ್ಕೂ ಹಣಪೇಟೆ ವ್ಯವ
ಸ್ಥೆಗೂ ಹೆಚ್ಚು ತೊಂದರೆಯನ್ನುಂಟುಮಾಡುತ್ತವೆ. ಇಂತಹ ಸಾಲಗಳ ಮೊತ್ತ
ವನ್ನು ಯಾವಾಗಲೂ ನಿಯಮಿತವಾಗಿಟ್ಟಿರಬೇಕು. ಹಣವನ್ನು ಕೊಡುವವರ
ಅಂತಸ್ತಿಗನುಸಾರವಾಗಿ ಸರಕಾದವರು ತಾವು ಎತ್ತುವ ಸಾಲವನ್ನು ವಿಂಗಡಿಸಿ
ದೇಶದ ಎಲ್ಲತರದ ಜನರೂ ಸಾಲಕೊಟ್ಟು ಅದರಿಂದ ಲಾಭ ಪಡೆಯುವಂತಹ ಅವ
ಕಾಶಗಳನ್ನು ಸಾಧ್ಯವಾದಷ್ಟು ಕಲ್ಪಿಸಬೇಕು.

## ಸಾಲದ ಹೊರೆ ಮತ್ತು ಪರಿಣಾಮ

ಸಾಲದ ಹೊರೆಯನ್ನು ಕಂಡುಹಿಡಿಯುವುದು ಹೇಗೆ ಎಂಬ ವಿಷಯದಲ್ಲಿ
ಭಿನ್ನಾಭಿಪ್ರಾಯಗಳಿವೆ. ಸರಕಾರ ಮಾಡುವ ಸಾಲಕ್ಕಾಗಿ ಹಾಕಿರುವ ತೆರಿಗೆ
ತಲೆಯೊಂದಕ್ಕೆ ಎಷ್ಟು ಬಿದ್ದಿದೆ ಎಂಬುದನ್ನಾಗಲಿ, ಒಟ್ಟು ದೇಶದ ತೆರಾಣಿಯ
ಭಾರವೇನು ಎಂಬುದನ್ನಾಗಲಿ, ಒಟ್ಟು ಸಾಲವನ್ನು ಸರಕಾರದ ಆಸ್ತಿಗಳಿಗೆ
ಹೋಲಿಸುವುದರಿಂದಾಗಲಿ, ತೆರಿಗೆ ಯಾರ ಮೇಲೆ ಯಾವ ಪ್ರಮಾಣದಲ್ಲಿ ಬಿದ್ದಿದೆ
ಸಂಪತ್ತು ಮತ್ತು ವರಮಾನಗಳನ್ನು, ಯಾರು ಎಷ್ಟುಮಾತ್ರ ಅನುಭವಿಸುತ್ತಿದ್ದಾರೆ
ಎಂಬುದನ್ನು ಕಂಡುಹಿಡಿಯುವುದರಿಂದಾಗಲಿ, ಆ ಸಾಲದ ಹಣದಿಂದ ಉಂಟಾಗುವ
ಆರ್ಥಿಕ ಪ್ರಯೋಜನಗಳ ಬೆಲೆಯೇನು ಎಂಬುದನ್ನು ತಿಳಿದುಕೊಳ್ಳುವುದರಿಂದಾಗಲಿ
ಸಾಲದ ಹೊರೆಯನ್ನು ಸ್ಥೂಲವಾಗಿ ಲೆಕ್ಕ ಮಾಡುವುದು ಸಾಧ್ಯ. ಒಟ್ಟಿನಲ್ಲಿ ಸಾಲ
ಮಾಡಿ ಸರಕಾರ ಕೈಗೊಂಡಿರುವ ಸಾರ್ವಜನಿಕ ಕೈಗಾರಿಕೆ, ಮತ್ತು ಸಂಪತ್ಸಾಧನ
ಕಾರ್ಯಗಳ ನೀತಿಯೇನು, ಇದರಿಂದ ತೆರಿಗೆಯ ಭಾರ ಜನರಮೇಲೆ ಹೇಗೆ ಇರುತ್ತದೆ
ಜನರ ಸಾಮಾಜಿಕ ಸ್ಥಿತಿಗಳು ಹೇಗಿವೆ, ಅವರ ಜೀವನದ ಅಂತಸ್ತು ಹೇಗಿದೆ
ಎಂಬುದನ್ನು ಪರಿಶೀಲಿಸಿದರೆ, ಸಾಲದ ಹೊರೆ, ಅದರಿಂದಾಗುವ ಪರಿಣಾಮಗಳನ್ನು
ತಿಳಿಯಬಹುದು.

ಸಾಲದ ಹೊರೆ ಹೆಚ್ಚೆ, ಅಥವಾ ಕಡಿಮೆಯೆ, ಎಂದು ಇತ್ಯರ್ಥ ಮಾಡುವಾಗ
ಆ ಸಾಲ, ಸಫಲಕಾರ್ಯಗಳಿಗಾಗಿ ವಿನಿಯೋಗವಾಗಿದೆಯೆ ಅಥವಾ ವಿಫಲಕಾರ್ಯ
ಗಳಿಗಾಗಿ ವೆಚ್ಚವಾಗಿದೆಯೆ, ಎಂಬುದನ್ನು ಆಲೋಚಿಸಬೇಕು. ಹಾಗೆಯೇ ಸಾಲ
ದೇಶದ ಜನರಿಂದ ಬಂದುದೇ ಅಥವಾ ವಿದೇಶಿಯರು ಒದಗಿಸಿದ್ದೇ ಎಂಬುದನ್ನು
ತಿಳಿದುಕೊಳ್ಳಬೇಕು. ನಮ್ಮ ದೇಶದ ಸಾಲವಾದರೆ, ಸಾಲದ ತೀರ್ವೆಗಾಗಿ, ಬಡ್ಡಿ
ಗಾಗಿ ಜನರು ತೆರಿಗೆ ಕೊಟ್ಟರೂ, ಆ ಹಣ, ಅವರಿಗೆ ಒಂದಲ್ಲ ಒಂದು ರೂಪದಲ್ಲಿ
ಹಿಂತಿರುಗಿ ಬರುತ್ತದೆ. ದೇಶದ ಹಣ ದೇಶದಲ್ಲೇ ಸಾರ್ವಜನಿಕ ಕಾರ್ಯಗಳಿಗಾಗಿ

ವಿನಿಯೋಗವಾಗುತ್ತದೆ. ಪರದೇಶದವರಿಂದ ತಂದ ಸಾಲವಾದರೆ ಕಷ್ಟವೆನ್ನದೆ, ಸುಖವೆನ್ನದೆ, ಸಾಲದ ಅಸಲನ್ನೂ ಬಡ್ಡಿಯನ್ನೂ ತೆರಬೇಕು. ದೇಶದ ಹಣ ಇತರರ ಬಂಡವಾಳವಾಗಿ ಇತರ ಕಡೆಗೆ ಸಾಗುತ್ತದೆ. ಸಾಲದ ಹೊರೆ ಬಲವಾಗುತ್ತದೆ.

ಸರಕಾರ ಸಾಲಮಾಡುವುದರಿಂದ ಸುಫಲ ದುಷ್ಫಲಗಳೆರಡೂ ಉಂಟು. ಕೈಗಾರಿಕೆ, ಮೊದಲಾದ ಸಂಪದಭಿವೃದ್ಧಿ ಕಾರ್ಯಗಳಿಗಾಗಿ ಉಪಯೋಗವಾಗುತ್ತಿದ್ದ ಹಣವನ್ನು ಸರಕಾರ ಸಾಲವಾಗಿ ತೆಗೆದುಕೊಂಡರೆ, ದೇಶದ ಸಂಪದಭಿವೃದ್ಧಿ ಕಾರ್ಯಗಳು ತೊಂದರೆಗೀಡಾಗುವುವು. ಸರಕಾರ ಕೊಡುವ ಬಡ್ಡಿಯ ದರದ ಮೇಲೆ ಇದರ ಲಾಭ ನಷ್ಟಗಳ ಪ್ರಮಾಣವನ್ನು ನಾವು ಗೊತ್ತು ಮಾಡಬಹುದು. ಸರಕಾರ ಸಾಲ ಮಾಡಿ ಕೈಗಾರಿಕೆಗಳಿಗೆ ಉಪಯೋಗಿಸುವುದಾದರೆ, ಆಗಲೇ ಆ ಕೈಗಾರಿಕೆಗಳಿಗೆ ಹಾಕಿರುವ ಹಣವನ್ನು ಯಾರೂ ವಾಪಸು ತೆಗೆದು ಸರಕಾರಕ್ಕೆ ಸಾಲಕೊಡುವುದಿಲ್ಲ. ಯಾವ ವಿಧದಲ್ಲೂ ಬಳಸದಿರುವ ಹಣ ಆಗ ಸರಕಾರಕ್ಕೆ ಬರುತ್ತದೆ. ಇದರಿಂದ ಸರಕಾರಕ್ಕೂ ಅನುಕೂಲ ; ಪ್ರಜೆಗಳ ಆರ್ಥಿಕ ಸಂಪತ್ತು ಹೆಚ್ಚಿ ಜನರ ಜೀವನವೂ ಉತ್ತಮಗೊಳ್ಳುತ್ತದೆ. ಹಾಗಾಗದೆ ವಿಫಲಕಾರ್ಯಗಳಿಗೆ ಅದನ್ನು ಉಪಯೋಗಿಸಿದರೆ ಜನರು ತೆರಬೇಕಾದ ತೆರಿಗೆಯ ಭಾರ ಹೆಚ್ಚಿ ಕಷ್ಟ ಸಂಭವಿಸುತ್ತದೆ. ಸರಕಾರದ ಸಾಲದ ಬಡ್ಡಿಯ ದರ ವಿಪರೀತವಾಗಿದ್ದರೆ, ಆ ಬಡ್ಡಿಯ ಆದಾಯವನ್ನು ಪಡೆಯ ಬೇಕೆಂಬ ಆಸೆಯಿಂದ ಕೆಲವರು ತಮ್ಮ ಜೀವನದಲ್ಲಿ ಇಕ್ಕಟ್ಟುಮಾಡಿಕೊಂಡು ಹಣ ವನ್ನು ಕೂಡಿಸಿ, ಸಾಲದ ರೂಪವಾಗಿ ಪ್ರಜೆಗಳು ಹಣವನ್ನು ಸರಕಾರಕ್ಕೆ ಕೊಡು ತ್ತಾರೆ. ಸರಕಾರ ಸಾಲ ತೆಗೆಯುವುದರಿಂದ ಜನರಲ್ಲಿ ಹಣವನ್ನು ಕೂಡಿಡುವ ಪದ್ಧತಿಗೆ ಉತ್ತೇಜನಕೊಟ್ಟಂತಾಗುತ್ತದೆ.

## ಸಾಲ ತೀರಿಸುವುದು

ಸರಕಾರ ಜನರಿಂದ ತೆಗೆದುಕೊಂಡ ಸಾಲವನ್ನು ತೀರಿಸಬೇಕೆ, ಎಂಬ ವಿಷಯದಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಸಾಲದ ಹಣವನ್ನು ಹಿಂತಿರುಗಿ ಕೊಡು ವುದಕ್ಕಿಂತ ಸರಕಾರದ ಉಪಪತ್ತಿಯನ್ನು ಹೆಚ್ಚಿಸಿ, ವರಮಾನವನ್ನೂ ಆಸ್ತಿಗಳನ್ನೂ ಬಲಮಾಡುವ ಸಂಪದಭಿವೃದ್ಧಿ ಕಾರ್ಯಗಳನ್ನು ಬೆಳಸುವುದು ಮೇಲೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಯುದ್ಧಕ್ಕಾಗಿ ತಂದ ಹಣ, ವಿಫಲ ಋಣಗಳು, ವಿದೇ ಶೀಯರಿಂದ ತಂದ ಸಾಲಗಳು, ಇವುಗಳನ್ನು ಹಿಂತಿರುಗಿ ಕೊಡುವುದರಿಂದ ಬಾಧ ಕವೇ ಹೆಚ್ಚೆಂದು ಅಭಿಪ್ರಾಯಪಡುವವರೂ ಇದ್ದಾರೆ. ಸರಕಾರ ಮಾಡಿದ ಸಾಲ ವನ್ನು ವಾಪಸು ಮಾಡಿದರೆ ಬಡ್ಡಿಯ ರುಚಿಯನ್ನು ಕಂಡ ಧನಿಕರು, ಪುನಃ ಸರ ಕಾರಕ್ಕೆ ಸಾಲ ಬೇಕಾದಾಗ ಹಣವೊದಗಿಸುತ್ತಾರೆ. ಆದುದರಿಂದ ಸಂಪದಭಿ ವೃದ್ಧಿ ಕಾರ್ಯಗಳಿಗಾಗಿ ದೇಶದಲ್ಲಿರುವ ಹಣ ಯಾವಾಗಲೂ ಸಿದ್ಧವಾಗಿರುತ್ತದೆ. ಸಾಲಕೊಟ್ಟು ಸಹಾಯಮಾಡಿದವರಿಗೆ ಅವರ ಹಣವನ್ನು ಹಿಂತಿರುಗಿ ಕೊಡುವುದು

ಧರ್ಮ. ಅಷ್ಟೇ ಅಲ್ಲದೆ, ಸಾಲದ ಅಸಲು ಹಣವನ್ನು ಕೊಟ್ಟು ಹೊರತು ಸರಕಾರದ ನಂಬಿಕೆ ಮತ್ತು ಕೀರ್ತಿ ಉಳಿಯಲಾರವು. ಮುಂದೆ ಸಾಲ ದೊರೆಯಬೇಕಾದರೆ ಈ ನಂಬಿಕೆಯನ್ನು ಉಳಿಸಿಕೊಳ್ಳಬೇಕು. ಇದರ ಜತೆಗೆ ಸಾಲ ತಂದಿರುವುದು ಪರ ದೇಶೀಯರಿಂದಾದರೆ ತೀರಿಸದಿರುವ ಮಾತಿಗೆ ಮಾರ್ಗವೇ ಇಲ್ಲ. ಈ ಕಾರಣ ಗಳಿಂದ ಸಾಲವನ್ನು ತೀರಿಸಬೇಕಾದುದು ಉಚಿತವಾದುದು.

## ಸಾಲ ತೀರಿಸುವ ಬಗೆ

ಸಾಮಾನ್ಯವಾಗಿ ತೆರಿಗೆಯಿಂದ ಬೇಕಾದ ಹಣವನ್ನು ಕೂಡಿಸಲು ಅವಕಾಶ ವಿಲ್ಲದಿರುವ ವಿಶೇಷ ಪ್ರಸಂಗಗಳಲ್ಲಿ ಸರಕಾರ ಸಾಲಮಾಡುತ್ತದೆ. ಆದುದರಿಂದ ಈ ಸಾಲವನ್ನು ಶಾಶ್ವತವಾಗಿರದಂತೆ ಮಾಡುವುದೂ ಆದಷ್ಟು ಜಾಗ್ರತೆ ಅದನ್ನು ತೀರಿಸುವುದೂ ಯೋಗ್ಯವಾದುದು.

ಸಾಲ ತೀರಿಸಲು ಇರುವ ಮಾರ್ಗಗಳು ಎರಡೇ :—

೧. ಹಿಂದಿನ ಸಾಲ ತೀರಿಸುವುದಕ್ಕಾಗಿ ಹೊಸ ಸಾಲವೆತ್ತಿ ಹಳೆಯ ಪತ್ರಗಳ ಬದಲು ಹೊಸ ಪತ್ರಗಳನ್ನು ಬರೆದುಕೊಡುವುದು.

೨. ಸಾಲದ ಮೊಬಲಗನ್ನು ಪಾವತಿಮಾಡಿ ಸಾಲದ ಪತ್ರವನ್ನು ರದ್ದು ಮಾಡುವುದು.

ಮೊದಲನೆಯ ಮಾರ್ಗದಿಂದ ಸಾಲ ಹರಿಯುವ ಮಾರ್ಗವೇ ಇಲ್ಲ. ಸಾಲ ತೆಗೆದುಕೊಳ್ಳುವಾಗ ಹಣ ಕೊಟ್ಟವರಿಗೆ ಹಣ ಪಾವತಿ ಮಾಡಿಬಿಡುವೆವೆಂದು ಪ್ರಕಟಿ ಸುವರಾದರೂ, ಪರಿಸ್ಥಿತಿಗಳಿಗೆ ತಕ್ಕಂತೆ, ಜನರಿಗೆ ಆಕರ್ಷಣೀಯವಾದ ಮಾರ್ಗ ಗಳಲ್ಲಿ ಹೊಸ ಸಾಲದ ಪತ್ರಗಳನ್ನು ಹೊರಡಿಸಬಹುದು. ಈರೀತಿ ವ್ಯತ್ಯಾಸ ಮಾಡಲು ಸರಕಾರಕ್ಕೆ ಅಧಿಕಾರವಿದೆ. ಸರಕಾರಕ್ಕೆ ಕೊಟ್ಟಿರುವ ಹಣವನ್ನು ಪೇಟೆ ಯಲ್ಲಿ ಬೇರೆ ಕಡೆ ಹೂಡಿದರೂ ಹೆಚ್ಚಿನ ಅನುಕೂಲಗಳು ದೊರೆಯದೆ ಹೋಗುವುದ ರಿಂದ, ಸಾಲ ಕೊಟ್ಟಿರುವವರೂ, ಹಳೆಯ ಸಾಲದ ಪತ್ರಗಳ ಬದಲಾಗಿ ಹೊಸ ಸಾಲದ ಪತ್ರಗಳನ್ನು ತೆಗೆದುಕೊಳ್ಳಲು ಹಿಂತೆಗೆಯುವುದಿಲ್ಲ. ಈ ರೀತಿ ಸರಕಾರ ಸಾಲದ ಅವಧಿಯನ್ನು ಪರಿವರ್ತನೆಮಾಡುವುದರ ಉದ್ದೇಶ, ಬಡ್ಡಿಯ ದರವನ್ನು ಕಡಮೆ ಮಾಡಿಕೊಂಡು ತನ್ಮೂಲಕ ಸಾಲದ ಭಾರವನ್ನು ತಗ್ಗಿಸಿಕೊಳ್ಳುವುದು. ಪೇಟೆಯಲ್ಲಿ ಬಡ್ಡಿಯ ದರ ತಗ್ಗುತ್ತಿರುವ ಕಾಲದಲ್ಲಿ ಸರಕಾರವೂ ಕಡಮೆ ದರದ ಬಡ್ಡಿಯ ದೀರ್ಘಕಾಲದ ಸಾಲದ ಪತ್ರಗಳನ್ನು ಚಲಾವಣೆಗೆ ತರುತ್ತದೆ. ಇದ ರಿಂದ ಹೆಚ್ಚು ಹಣ ದೊರೆತು ಹೆಚ್ಚು ದರದ ಬಡ್ಡಿಯ ಹಿಂದಣ ಸಾಲವನ್ನು ತೀರಿಸಲು ಅನುಕೂಲವಾಗುವುದು. ಅಲ್ಲದೆ ಮುಂದಣ ಸಾಲದ ಭಾರ ಮೊದಲಿಗಿಂತಲೂ ಕಡಮೆಯಾಗಿ ತೆರಿಗೆಯ ಭಾರವೂ ಇಳಿಯುವ ಸಂಭವವುಂಟು. ಈ ತರದ ಪರಿ ವರ್ತನೆಯ ಸಾಲಗಳು ಜನಪ್ರಿಯವಾಗಿವೆ. ಇದರಿಂದ ಸರಕಾರದ ಹಣಕಾಸಿನ

ಪರಿಸ್ಥಿತಿ ಉತ್ತಮಗೊಳ್ಳಲು ಅವಕಾಶ ದೊರೆಯುತ್ತದೆ. ಹೀಗೆ ಕಾಲದ ಸ್ಥಿತಿಗೆ ತಕ್ಕಂತೆ ಕಮ್ಮಿ ದರದಲ್ಲಿ ಹೊಸ ಸಾಲವೆತ್ತಿ, ಮಹಾಯುದ್ಧವಾದನಂತರ ಯುದ್ಧಕಾಲದಲ್ಲಿ ಹೇರಳವಾದ ಸಾಲಮಾಡಿ ಬಳಲಿದ್ದ ರಾಷ್ಟ್ರಗಳು ಸಾಲದ ಅವಧಿಯನ್ನು ಬದಲಾಯಿಸುತ್ತ ಸಾಲವನ್ನು ಪರಿವರ್ತನೆಮಾಡುವ ಮಾರ್ಗವನ್ನು ಅವಲಂಬಿಸಿ, ತಮ್ಮ ಸಾಲದ ಹೊರೆಯ ಬಹು ಭಾಗವನ್ನು ಕಡಿಮೆ ಮಾಡಿರುತ್ತವೆ. ಇದು ಜನಪ್ರಿಯವಾದ ಮಾರ್ಗವೂ ಹೌದು.

ಈ ರೀತಿ ಪರಿವರ್ತನೆ ಮಾರ್ಗದ ಸಾಲದಲ್ಲಿ ಕೊಟ್ಟ ಹಣವನ್ನು ವಾಪಸು ಪಡೆಯುವುದಕ್ಕಾಗಲಿ, ಬೇರೆ ರೀತಿಯ ಬಡ್ಡಿಯ ದರದ ಹೊಸ ಸಾಲದ ಪತ್ರಗಳನ್ನು ತೆಗೆದುಕೊಳ್ಳುವುದಕ್ಕಾಗಲಿ, ಸಾಲ ಕೊಟ್ಟವರಿಗೆ ಅವಕಾಶವಿದೆ. ಇದರಿಂದ ಬಡ್ಡಿಯ ದರ ಇಳಿದು, ಜನರು ಕೊಡಬೇಕಾದ ತೆರಿಗೆಯ ಭಾರ ಇಳಿಯುತ್ತದೆ. ತೆರಿಗೆದಾರರ ಸಂರಕ್ಷಣೆಯನ್ನು ನೋಡಿಕೊಳ್ಳಬೇಕಾದ ಕರ್ತವ್ಯವೂ ಸರಕಾರದ್ದು. ಆದುದರಿಂದ ಸರಕಾರದ ಸಾಲವನ್ನು ಯಾವಾಗ, ಯಾವ ರೀತಿ ಬದಲಾಯಿಸಿದರೆ ತೆರಿಗೆ ಕೊಡುವವರ ಭಾರ ಇಳಿದೀತು ಎಂಬುದನ್ನು ಹಣಕಾಸಿನ ವ್ಯವಸ್ಥೆ ಮಾಡುವವರು ಮನಸ್ಸಿನಲ್ಲಿಟ್ಟಿರಬೇಕು. ದೇಶದಲ್ಲಿ ಸುಭಿಕ್ಷ ತಲೆದೋರುತ್ತಿರುವಾಗ ಹೀಗೆ ಸಾಲದ ಪರಿವರ್ತನೆಮಾಡಿ, ಕಡಮೆ ದರದ ಸಾಲಪತ್ರಗಳನ್ನು ಚಲಾವಣೆಗೆ ತರುವುದು ಸರಿಯಾದ ಮಾರ್ಗ.

ಸಾಲವನ್ನು ಒಟ್ಟಾಗಿ ಒಂದೇಬಾರಿ ಪಾವತಿಮಾಡಿ ತೀರಿಸಿಬಿಡುವುದು ಎರಡನೆಯ ಮಾರ್ಗ. ಸಾಲ ತೀರಿಸಬೇಕೆಂಬ ಉದ್ದೇಶದಿಂದ ಪ್ರತಿವರ್ಷವೂ ಸರಕಾರದ ಒಟ್ಟು ಹುಟ್ಟುವಳಿಯಲ್ಲಿ ಒಂದು ಭಾಗವನ್ನು ಮುಡುಪಾಗಿ ಶೇಖರಿಸಿಡುವುದು. ಈ ರೀತಿ ಸಾಲದ ಇಳಿತಾಯಕ್ಕಾಗಿ ಒಂದು ತೀರ್ವೆಯ ನಿಧಿಯನ್ನು, "ಋಣ ವಿಮೋಚಕ ನಿಧಿ" ಯನ್ನು ಏರ್ಪಡಿಸುವುದು. ಇದಕ್ಕೆ ಎರಡು ಮೂರು ವಿಧವಾಗಿ ಹಣ ಶೇಖರಿಸುವುದುಂಟು.

(i) ಸರಕಾರ ತಾನು ಮಾಡಿರುವ ಸಾಲದ ಅಸಲು, ಬಡ್ಡಿಗಳನ್ನು ತೀರಿಸುವುದಕ್ಕಾಗಿ, ಕೆಲವು ವಿಶೇಷ ತೆರಿಗೆಗಳನ್ನು ಹಾಕಿಯೋ ಅಥವಾ ಇರುವ ತೆರಿಗೆಗಳ ದರವನ್ನು ಹೆಚ್ಚಿಸಿಯೋ ಅದರಿಂದ ಬಂದ ಹಣವನ್ನು "ಋಣ ವಿಮೋಚಕ ನಿಧಿ" ಗೆ ಸೇರಿಸುವುದು.

(ii) ಸಾಲ ತೆಗೆದು ಉಪಯೋಗಿಸಿರುವ ಕೈಗಾರಿಕೆ ಮತ್ತು ವ್ಯಾಪಾರದ ಉದ್ಯಮಗಳಿಂದ ಬರುವ ಆದಾಯದಲ್ಲಿ ಅವುಗಳ ಆಡಳಿತದ ಖರ್ಚು, ಸಾಲದ ಬಡ್ಡಿಯ ಹಣ, ಕಳೆದು ಉಳಿದ ಹಣದಲ್ಲಿ ಒಂದು ಭಾಗವನ್ನು ಸಾಲ ತೀರ್ವೆಯ ನಿಧಿಗೆ ಸೇರಿಸುತ್ತ ಹೋಗುವುದು.

ಹೀಗೆ ಶೇಖರವಾದ ಹಣದಿಂದ ಅವಧಿಯ ಸಾಲಗಳನ್ನು ತೀರಿಸಿ ಬಿಡುವುದು ಒಂದು ಮಾರ್ಗ. ಹಣ ಶೇಖರವಾದಂತೆಲ್ಲ ತಾವು ಸಾಲ ಮಾಡಿದಾಗ ಕೊಟ್ಟಿರುವ ಸಾಲದ ಪತ್ರಗಳು ಕೆಲವನ್ನು ಪ್ರತಿವರ್ಷವೂ ಪಾವತಿಮಾಡಿ ಸಾಲದಿಂದ ಮುಕ್ತ

ರಾಗುತ್ತ ಹೋಗುವುದು ಇನ್ನೊಂದು ಮಾರ್ಗ. ಹೀಗೆ ಕೊಟ್ಟಿರುವ ಸಾಲವನ್ನು ಹಣ ಶೇಖರವಾದಂತೆಲ್ಲ ಹಿಂತಿರುಗಿ ಕೊಟ್ಟು ಸಾಲದ ಪತ್ರಗಳನ್ನು ರದ್ದು ಮಾಡುವ ಮಾರ್ಗ ಅಷ್ಟು ಲಾಭದಾಯಕವಾದುದಲ್ಲವೆಂದು ಕಂಡುಬಂದಿದೆ. ಅದಕ್ಕಿಂತ ಒಂದು ದೀರ್ಘಾವಧಿಯಲ್ಲಿ ಸಾಲವನ್ನು ತೀರಿಸುವುದಕ್ಕಾಗಿ ನಿಧಿಯನ್ನು ಶೇಖರಿಸುತ್ತ ಹೋಗುವುದು ಸರಿಯಾದ ಮಾರ್ಗ.

ಕೆಲವು ಸಾಲಗಳನ್ನು ಹೆಚ್ಚು ತೊಂದರೆಯಿಲ್ಲದೆ ಋಣವಿಮೋಚಕನಿಧಿಯಿಂದಲೇ ತೀರಿಸುವುದು ಸಾಧ್ಯ. ಒಂದು ನಗರದ ನೀರಿನ ವಸತಿಗಾಗಿಯೋ, ವಾಹನ ಸೌಕರ್ಯಕ್ಕಾಗಿಯೋ ತೆಗೆದುಕೊಂಡಿರುವ ಸಾಲಗಳಿವೆಯೆನ್ನೋಣ. ಇವುಗಳಿಗೆ ಒಂದು ಕಾಲಾವಧಿಯಿರುತ್ತದೆ. ಆ ಅವಧಿಯ ಕಾಲದಲ್ಲಿ ಆ ಸಾಲದ ಹಣದಿಂದ ಉಪಯೋಗಪಡೆದು ಲಾಭ ಪಡೆಯುತ್ತಿರುವವರಿಂದ ಹಣವನ್ನು ತೆರಿಗೆಯ ರೂಪದಲ್ಲಿ ಪಡೆದು ಅದನ್ನು ಶೇಖರಿಸಿಟ್ಟು ಸಾಲವನ್ನು ತೀರಿಸಬಹುದು. ಹೀಗೆ ತೀರಿಸದೆ, ಈಗಿನ ಪ್ರಜೆಗಳು ಅನುಭವಿಸುವ ಸುಖಸಂತೋಷಗಳಿಗಾಗಿ ಮುಂದಿನ ಜನಾಂಗದವರಮೇಲೆ ಹೊರೆ ಹೊರಿಸುವುದು ಧರ್ಮವಲ್ಲ. ಸಾಲ ತೀರ್ವೆಯ ನಿಧಿಯೊಂದನ್ನು ಸ್ಥಾಪಿಸಿ ಅದಕ್ಕೆ ಹಣವನ್ನು ಶೇಖರಿಸುತ್ತ ಹೋಗುವುದರಿಂದ ವಿಫಲಕಾರ್ಯಗಳಿಗಾಗಿ ಉಪಯೋಗಿಸಿರುವ ಸಾಲವನ್ನು ಕೂಡ ತೀರಿಸಬಹುದು. ಪ್ರತಿವರ್ಷವೂ ರಾಜಾದಾಯದಲ್ಲಿ ಒಂದು ಭಾಗವನ್ನು ತೆಗೆದಿಟ್ಟು ಪೂರ್ತಿ ಹಣ ಕೂಡಿದಾಗ ಸಾಲವನ್ನು ಪಾವತಿಮಾಡುವುದು ಸಾಧುವಾದ ಸಂಪ್ರದಾಯ.

ಸಾಲ ತೀರಿಸುವುದಕ್ಕೆ ಋಣವಿಮೋಚಕನಿಧಿಯೊಂದನ್ನು ಏರ್ಪಡಿಸದಿದ್ದರೆ ಕಾಲಾನುಕಾಲದಲ್ಲಿ ಸಾಲದ ಮಿತಿ ಮೀರಿ ಅದರ ಹೊರೆಯನ್ನು ಮುಂದಿನ ಜನಾಂಗದವರು ಹೊರಬೇಕಾಗುವುದು. ಸಾಲವನ್ನು ತೀರಿಸುತ್ತ ಹೋದರೆ ಬಡ್ಡಿಯ ಭಾರ ಇಳಿದು, ಇನ್ನೊಮ್ಮೆ ಸಾಲಬೇಕಾದಾಗ ಕಮ್ಮಿ ದರದ ಬಡ್ಡಿಯಲ್ಲಿ ಸಾಲ ದೊರೆಯಲು ಅನುಕೂಲವಾಗುವುದು. ಸಾಲದ ಭಾರ ತಗ್ಗಿ ಮುಂದೆ ತೆರಿಗೆಯೂ ಕ್ರಮವಾಗಿ ಕಡಿಮೆಬೀಳುವುದು.

ಆದರೆ ''ಸಾಲ ತೀರ್ವೆಯ ನಿಧಿ''ಯಿಂದ ಕಡೆಯಲ್ಲಿ ಸಾಲ ತೀರುವುದಾದರೂ, ತೆರಿಗೆಯ ಭಾರ ತಾತ್ಕಾಲಿಕವಾಗಿ ಜನರಿಗೆ ಹೆಚ್ಚಿ ಅವರಿಗೆ ಕಷ್ಟವೂ ಅಸಮಾಧಾನವೂ ಆಗುವ ಸಂಭವಗಳುಂಟು.

''ಋಣ ವಿಮೋಚಕ ನಿಧಿ'' ಯನ್ನು ಶೇಖರಿಸಿ ಸಾಲವನ್ನು ತೀರಿಸುವಂತೆಯೇ ಸರಕಾರದವರು ಇನ್ನೊಂದು ರೀತಿ ಸಾಲ ತೀರಿಸಲು ಪ್ರಯತ್ನ ಪಡೆಯಬಹುದು ದೀರ್ಘಕಾಲದ ಸಾಲದ ಪತ್ರಗಳು ಯಾರ ಬಳಿ ಎಷ್ಟಿವೆ, ಎಂಬುದನ್ನು ಆಗಾಗ ಸರಕಾರದವರು ಪರಿಶೀಲಿಸುತ್ತಾರೆ. ದೀರ್ಘಕಾಲದ ಸಾಲದ ಪತ್ರಗಳಿಗೆ ತಗಲುವ ಬಡ್ಡಿಯನ್ನು ಎಷ್ಟೋ ಬಾರಿ ವಂಶಪಾರಂಪರ್ಯವಾಗಿ ಕೊಡುತ್ತಿರಬೇಕಾದ ಸಂಭವವುಂಟಾಗಬಹುದು. ಆದುದರಿಂದ ಅಂತಹ ದೀರ್ಘಕಾಲದ ಸಾಲದ ಪತ್ರಗಳನ್ನು ಪಡೆದಿರುವವರಲ್ಲಿ ಕೇವಲ ವೃದ್ಧರಾದವರನ್ನು ಕರೆಯಿಸಿ ಅವರು ಕೊಟ್ಟಿರುವ ಸಾಲ ಮತ್ತು ಬಡ್ಡಿ, ಅವರ ಜೀವಮಾನದಲ್ಲಿಯೇ ತೀರಿ

ಹೋಗುವಂತಹ ಆಕರ್ಷಣೀಯವಾದ ರೀತಿಯಲ್ಲಿ ಅವರಿಗೆ ವಾರ್ಷಿಕವೇತನದಂತೆ ಹಣವನ್ನು ಸಲ್ಲಿಸುತ್ತ ಹೋಗುವೆವೆಂದು ಕರಾರು ಮಾಡಿಕೊಳ್ಳುವರು. ಈ ಪದ್ಧತಿಗೆ, ಎಂದರೆ ಹಣ ಕೊಟ್ಟಿರುವವರು ಜೀವಂತನಾಗಿರುವವರಿಗೂ ಕೊಡುವ ವಾರ್ಷಿಕ ವೇತನ ಪತ್ರಗಳಿಗೆ (ಆನ್ಯೂಯಿಟಿ ಬಾಂಡ್ಸ್) (Annuity bonds) ಎಂದು ಕರೆಯುತ್ತಾರೆ. ಸರಕಾರದವರೇ ಅವರನ್ನು ಸ್ವತಃ ಕರೆಯಿಸಿ ಕರಾರು ಮಾಡಿಕೊಳ್ಳುವ ಬದಲು ಆಕರ್ಷಣೀಯವಾದ ದರಗಳನ್ನು ಸೂಚಿಸಿ ಪ್ರಕಟಿಸುವುದರ ಮೂಲಕ ಸಾಲಗಾರರೇ ಈ ತರದ ಪತ್ರಗಳನ್ನು ಕೊಂಡುಕೊಳ್ಳುವಂತೆ ಮಾಡುತ್ತಾರೆ. ಇದರಿಂದ ಸಾಲ ಕೊಟ್ಟವರಿಗೆ ನಷ್ಟವಿಲ್ಲ; ಸರಕಾರಕ್ಕೆ ಆದಾಯ. ಅನೇಕ ವರುಷಗಳು ಬಡ್ಡಿ ತೆರುವುದು ತಪ್ಪಿ, ಸಾಲದ ಹೊರೆ ವರ್ಷಂಪ್ರತಿ ಹೆಚ್ಚುವ ತೊಂದರೆಯಿಲ್ಲದೆ ಕಡಮೆಯಾಗುತ್ತ ಹೋಗುವುದು.

ಸಾಲವನ್ನು ತೀರಿಸಲು ಮಾರ್ಗವಿನ್ನೊಂದುಂಟು. ಸಾಲದಿಂದ ಸರಕಾರಕ್ಕೆ ಹೆಚ್ಚು ತೊಂದರೆಯಾಗುವುದು ಸಹಜ. ಸಾಲವನ್ನು ತೀರಿಸುವುದಕ್ಕಾಗಿ ದೇಶದ ಪ್ರಜೆಗಳ ಮೇಲೆ ತೆರಿಗೆಗಳನ್ನು ಬಹಳಕಾಲ ಹೇರಿ ಅಲ್ಲಿನ ಆರ್ಥಿಕ ಜೀವನವನ್ನು ತೊಡಕುಮಾಡುವುದು ಅನರ್ಥಕಾರಿಯೆಂದು ತಿಳಿದು, ಆದಾಯದ ತೆರಿಗೆಗಳನ್ನು ಎತ್ತುವಂತೆ ಬಂಡವಾಳಗಾರರಿಂದ ಬಂಡವಾಳದ ತೆರಿಗೆಯನ್ನು (Capital levy) ತೆಗೆದುಕೊಂಡು ಸಾಲದ ಭಾರವನ್ನು ಕಡಮೆಮಾಡುವುದು ಈ ಮಾರ್ಗ. ಈರೀತಿ ಮಾಡುವುದು ಯೋಗ್ಯವೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಮಹಾಯುದ್ಧ ಕೊನೆಗಂಡಮೇಲೆ ಅದರ ಪರಿಣಾಮವಾಗಿ ಇಂಗ್ಲೆಂಡಿನಲ್ಲಿ ಏರಿದ್ದ ಅಪರಿಮಿತವಾದ ಸಾಲವನ್ನು ತೀರಿಸುವ ಪ್ರಶ್ನೆ ಬಂದಾಗ, ೧೯೨೨ ರಲ್ಲಿ ಅಲ್ಲಿಯ ಪ್ರಜೆಗಳ ಆಸ್ತಿಯಲ್ಲಿಯೇ ಒಂದು ಭಾಗವನ್ನು ತೆಗೆದುಕೊಳ್ಳುವುದು ಲೇಸೆಂದು ಕೆಲವರು ಅಭಿಪ್ರಾಯಪಟ್ಟರು. ಆದರೆ ಇದು ಕಾರ್ಯರೂಪಕ್ಕೆ ಬರಲಿಲ್ಲ. ಈ ತರದ ಬಂಡವಾಳದ ತೆರಿಗೆಯನ್ನು ಹಾಕಬೇಕೆನ್ನುವರು, ಈ ರೀತಿ ವಾದಮಾಡುತ್ತಾರೆ.—ಸಾಲ ತೀರಿಸಲು ತೆರಿಗೆಯೊಂದರಿಂದಲೇ ಸಾಧ್ಯವಿಲ್ಲ; ಸಾಮಾನ್ಯ ತೆರಿಗೆಯ ದರವನ್ನು ಹೆಚ್ಚುಮಾಡಿದರೆ ಜನರ ಜೀವನದಲ್ಲಿ ವ್ಯತ್ಯಾಸವಾಗುವ ಸಂಭವವಿದೆ; ಅಲ್ಲದೆ ಇಂತಹ ದೊಡ್ಡ ಸಾಲಗಳು ರಾಷ್ಟ್ರರಕ್ಷಣೆಗಾಗಿ ಆವಶ್ಯಕವಾಗಿ ಮಾಡಬೇಕಾದ ಯುದ್ಧ ಪ್ರಸಂಗಗಳಿಂದ ಒದಗಿದುದು; ದೇಶದ ಯುವಕರು ಯುದ್ಧರಂಗಕ್ಕೆ ಹೋಗಿ ದೇಶರಕ್ಷಣೆಗಾಗಿ ತಮ್ಮ ನೆತ್ತರನ್ನು ಚೆಲ್ಲಿ ಮಾತೃಭೂಮಿಯ ಸೇವೆಯನ್ನು ಸಲ್ಲಿಸಿದರು. ಆ ಕೆಲಸ ಮಾಡದೆ ಮನೆಯಲ್ಲಿ ಕುಳಿತು ಆಸ್ತಿ ಮಾಡಿರುವ, ವೃದ್ಧ ಧನಿಕರು ಇದಕ್ಕಾಗಿ ತಮ್ಮ ಆಸ್ತಿಯಲ್ಲಿ ಒಂದು ಭಾಗವನ್ನು ಕೊಡುವುದು ಧರ್ಮ. ಈ ರೀತಿ ಬಂಡವಾಳದ ತೆರಿಗೆ ವಿಧಿಸಲು ಒಪ್ಪದಿರುವವರು ಅನ್ನುವ ಮಾತೇ ಬೇರೆ. ಇದು ಅಧರ್ಮವಾದ ತೆರಿಗೆ; ಜನಸಮುದಾಯದಲ್ಲಿನ ಆಸ್ತಿಯ ಒಂದು ಭಾಗವನ್ನು ಬಲಾತ್ಕಾರದಿಂದ ಸರಕಾರ ತೆಗೆದುಕೊಳ್ಳುವುದು ಒಂದು ದರೋಡೆಯಂತೆ. ಇದರಿಂದ ಪ್ರಜೆಯ ಸ್ವಾತಂತ್ರ್ಯಕ್ಕೇ ಸಂಚಕಾರ ತಂದಂತಾಗುತ್ತದೆ. ದೇಶದ ಸಂಪತ್ತು ಕ್ಷೀಣವಾಗುವ ಸಂಭವ ಇದರಿಂದುಂಟು. ಇದರ

ಜತೆಗೆ ಆಸ್ತಿಯ ಬೆಲೆಯೇನು, ಅದರಲ್ಲಿ ಎಷ್ಟು ಭಾಗವನ್ನು ತೆಗೆದುಕೊಳ್ಳಬೇಕು ಎಂಬ ವಿಷಯದಲ್ಲಿಯೂ ಅನೇಕ ತೊಡರುಗಳುಂಟಾಗುವುವು. ಇದರಿಂದ ದೇಶದಲ್ಲಿ ಬಹುಕಾಲ ನಿರುದ್ಯೋಗವೂ ಮುಗ್ಗಟ್ಟೂ ಬಂದೊದಗುವುವು. ಇದು ಸಾಲವನ್ನು ತೀರಿಸಲು ಸರಿಯಾದ ಮಾರ್ಗವಲ್ಲ ಎನ್ನುತ್ತಾರೆ.

ಯುದ್ಧ ಮೊದಲಾದ ವಿಶೇಷ ಪ್ರಸಂಗಗಳಲ್ಲಿ ಮಾಡಿದ ಸಾಲ ಬಹು ಹೆಚ್ಚಾಗಿದ್ದರೆ, ಅದನ್ನು ತೀರಿಸುವುದು ದುಸ್ತರವಾಗಿ ತೋರಿದರೆ, ಸಾಲವನ್ನೇ ರದ್ದು ಮಾಡಿ, ಸಾಲದಿಂದ ಮುಕ್ತರಾಗುವ ಮಾರ್ಗವೂ ಸರಕಾರಕ್ಕಿದೆ. ಹೀಗೆ ಆಪತ್ಸಮಯದಲ್ಲಿ ಕೊಟ್ಟ ಸಾಲವನ್ನು ಕೊಡುವುದಿಲ್ಲವೆಂಬ ಈ ಮಾರ್ಗಕ್ಕೆ ಬಹು ಜನರ ಸಮ್ಮತಿ ದೊರೆಯುವುದಿಲ್ಲ. ಹೀಗೆ ಸಾಲವನ್ನು ರದ್ದುಮಾಡುವುದರಿಂದ ಎಲ್ಲಾ ಪ್ರಜೆಗಳಿಗೂ ನಷ್ಟ ತೊಂದರೆಗಳುಂಟಾಗದು. ಜಮೀನಿನಿಂದಲೋ ವ್ಯಾಪಾರದಿಂದಲೋ ಆಸ್ತಿ ಮಾಡಿರುವವರಿಗೆ ಯಾವ ವಿಧವಾದ ತೊಂದರೆಯೂ ಇದರಿಂದುಂಟಾಗದೆ, ತನ್ನಲ್ಲಿದ್ದ ಹಣವನ್ನು ಅವಶ್ಯ ಕಂಡುಬಂದ ಸಮಯದಲ್ಲಿ ಸರಕಾರಕ್ಕೆ ಕೊಟ್ಟು ಸಾಲದ ಪತ್ರಗಳನ್ನು ಪಡೆದವನಿಗೆ ಮಾತ್ರ ಸ್ವಲ್ಪ ನಷ್ಟವಾಗುವುದು. ಇದರಿಂದ ದೇಶದ ಒಂದು ಭಾಗದಲ್ಲಿ ಕ್ಷೋಭೆಯೂ, ಸರಕಾರದ ವಿಷಯದಲ್ಲಿ ವೈಮನಸ್ಯವೂ ಉಂಟಾಗುವುದು. ಇದರೊಂದಿಗೆ ಸರಕಾರದ ನಂಬಿಕೆ ಮತ್ತು ಕೀರ್ತಿ ನಾಶವಾಗಿ ಇನ್ನೊಂದು ಬಾರಿ ಹಣ ಬೇಕಾದಾಗ ಹಣ ಹುಟ್ಟದೆ ಹೋಗುವುದು. ಅಂತರರಾಷ್ಟ್ರೀಯ ಸಂಬಂಧದಲ್ಲಿ ಕೂಡ ವೈಷಮ್ಯ ಒದಗುವುದು.

---

# ಪ್ರಕರಣ ೧೫

## ಬಡ್ಜೆಟ್

ಸಾಮಾನ್ಯವಾಗಿ ಪ್ರತಿ ಸರಕಾರವೂ ಆ ದೇಶದ ಪ್ರಜಾಪ್ರತಿನಿಧಿ ಸಭೆಯ ಅಥವಾ ನ್ಯಾಯವಿಧಾಯಕ ಸಭೆಯ ಅಧಿವೇಶನದಲ್ಲಿ ಆ ಸಭೆಗಳ ಸದಸ್ಯರ ಅವಗಾಹನೆಗಾಗಿ ಆ ವರ್ಷದ ಆಯವ್ಯಯ ಪಟ್ಟಿಯೊಂದನ್ನು ತಯಾರ್ಮಾಡುವುದನ್ನು ನಾವು ನೋಡಿದ್ದೇವೆ. ಈ ಪಟ್ಟಿಯನ್ನು "ಬಡ್ಜೆಟ್" ಎಂದು ಕರೆಯುತ್ತಾರೆ. ದೇಶದ ಹಿತದ ದೃಷ್ಟಿಯಿಂದ ಸರಕಾರ ನಿರ್ವಾಹಮಾಡುವ ಎಲ್ಲ ಕೆಲಸಗಳಿಗೂ ಹಣವನ್ನು ಆ ದೇಶದ ಜನಗಳು ಒದಗಿಸಬೇಕು. ಹೀಗೆ ತಾವು ಕೊಟ್ಟ ಹಣ ಯಾವ ಬಾಬಿಗೆ ಹೇಗೆ ಖರ್ಚಾಗುತ್ತದೆ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಅವರಿಗೆ ಹಕ್ಕುಂಟು. ಅಷ್ಟೇ ಅಲ್ಲ; ಯಾವ ಯಾವ ಬಾಬಿಗೆ ಎಷ್ಟೆಷ್ಟು ಖರ್ಚುಮಾಡಬೇಕೆಂದು ಹೇಳುವ ಅಧಿಕಾರವು ಇದೆ. ಆದುದರಿಂದಲೇ ಸರಕಾರದ ಅಧಿಕಾರವರ್ಗದವರು ಆಯಾ ವರ್ಷದ ಆಯವ್ಯಯ ಪಟ್ಟಿಯನ್ನು ಪ್ರತಿನಿಧಿಗಳ ಸಭೆಯ ಮುಂದಿಟ್ಟು ಅವರ ಅಪ್ಪಣೆಯನ್ನು ತೆಗೆದುಕೊಳ್ಳುತ್ತಾರೆ. ಇತ್ತೀಚೆಗಂತೂ ಸರಕಾರ ಮಾಡಬೇಕಾದ ಕೆಲಸಗಳು ಬಹುಮುಖವಾಗಿ ಬೆಳೆಯುತ್ತಿವೆ. ಹೀಗೆ ಬೆಳೆಯುತ್ತಿರುವ ಸರಕಾರದ ಕೆಲಸಗಳಿಗೆ ಅವುಗಳ ಆವಶ್ಯಕತೆಗೆ ತಕ್ಕಂತೆ ಎಷ್ಟು ಹಣ ಖರ್ಚುಮಾಡಬೇಕು ಎಂದು ಮೊದಲೇ ನಿಷ್ಕರ್ಷೆ ಮಾಡಿಕೊಳ್ಳಬೇಕಾದುದು ಅಧಿಕಾರ ವರ್ಗದವರಿಗೆ ಆವಶ್ಯಕವಾಗಿಯೇ ಕಂಡುಬರುತ್ತದೆ. ಆದುದರಿಂದ ಈ "ಬಡ್ಜೆಟ್"ನ (ಆಯವ್ಯಯ ಪಟ್ಟಿಯ) ಪ್ರಾಮುಖ್ಯ ದಿನೇದಿನೇ ಬೆಳೆಯುತ್ತಿದೆ. ಅದನ್ನು ಶಾಸ್ತ್ರೀಯವಾಗಿ ತಯಾರ್ಮಾಡಿ ಪ್ರಜೆಗಳು ಒಪ್ಪುವಂತೆ ಮಾಡಲು ಸರಕಾರದವರು ಪ್ರಯತ್ನಿಸುತ್ತಿದ್ದಾರೆ. ಹಾಗೆಯೇ ಈಚೆಗೆ ಪ್ರಜಾವರ್ಗವೂ ಸರಕಾರದ ಆಯವ್ಯಯದ ವಿಷಯದಲ್ಲಿ ಹೆಚ್ಚು ಆಸಕ್ತಿಯನ್ನು ತೋರಿಸುತ್ತಿದೆ.

ಒಂದು ಸರಕಾರಕ್ಕೆ ಪ್ರತಿ ವರ್ಷದಲ್ಲೂ ಬರಬಹುದಾದ ಆದಾಯವನ್ನೂ ಅದು ಆ ವರ್ಷದಲ್ಲಿ ಮಾಡಬಹುದಾದ ಖರ್ಚನ್ನೂ ಅಂದಾಜುಮಾಡುವ ಪದ್ಧತಿಯಿಂದ ಹುಟ್ಟಿದುದು "ಬಡ್ಜೆಟ್". ಒಂದು ಮನೆಯು ಸಂಸಾರಕ್ಕೆ ಬೇಕಾದ ಪದಾರ್ಥಗಳು, ಸಲಕರಣೆಗಳು, ಆ ಕುಟುಂಬದ ಅಭ್ಯುದಯಕ್ಕೆ ಮಾಡಬೇಕಾದ ಸಾಧನಗಳು, ಇವನ್ನು ನಿರ್ವಾಹಮಾಡುವುದಕ್ಕೆ ಆಗಬೇಕಾದ ಖರ್ಚು, ಆ ಕುಟುಂಬಕ್ಕೆ ಇರುವ ಹುಟ್ಟುವಳಿ, ಅದು ಖರ್ಚುಮಾಡಬಹುದಾದ ಮಾರ್ಗ, ಇವುಗಳನ್ನು ಮೊದಲೇ ಗುರುತಿಸಿ ಆ ಪ್ರಕಾರ ನಡೆಯುವಂತೆಯೇ ಸರಕಾರವೂ ದೇಶದ ಕ್ಷೇಮಕ್ಕಾಗಿ ಮಾಡಬೇಕಾದ ವೆಚ್ಚಕ್ಕೆ ಬೇಕಾಗುವ ಆದಾಯ ಇವುಗಳನ್ನು ಅಂದಾಜುಮಾಡಿ ಒಂದು

ನಿರ್ಣಯಕ್ಕೆ ಬರುತ್ತದೆ. ಸ್ಥೂಲವಾಗಿ ನೋಡಿದರೆ "ಬಜೆಟ್" ಆಯುವ್ಯಯಗಳ ನಗದು ಮೊತ್ತಗಳ ಒಂದು ಪಟ್ಟಿಯೆನ್ನಬಹುದು.

ಸರಕಾರವು ತನ್ನ ಕರ್ತವ್ಯಗಳು ಚಾಚು ತಪ್ಪದೆ ನೆರವೇರಿ, ದೇಶದ ಸಂಪತ್ತು ಹೆಚ್ಚಿ, ದೇಶದಲ್ಲಿ ಸುಖಶಾಂತಿಗಳು ಹೆಚ್ಚುವಂತೆ ಮಾಡಬಲ್ಲ ಆಯುವ್ಯಯ ಪಟ್ಟಿಯನ್ನು ಸಿದ್ಧಪಡಿಸಬೇಕು. ಹೀಗೆ ಮಾಡಲು ಆಡಳಿತ ಸೂತ್ರ ನಡಸುವವರಿಗೆ ದೇಶಾಭಿಮಾನ, ಅರ್ಥಶಾಸ್ತ್ರದಲ್ಲಿ ಜ್ಞಾನ, ದೂರದೃಷ್ಟಿ ಇವು ಇರಬೇಕು. ಇಂಗ್ಲೆಂಡ್ ದೇಶದಲ್ಲಿ ಒಮ್ಮೆ ಕೋಶಾಧಿಕಾರಿಯಾಗಿದ್ದ ವಾಲ್‌ಪೋಲ್ ಎಂಬಾತನು ಆಯುವ್ಯಯ ಪಟ್ಟಿಯನ್ನು ಇಂದ್ರಜಾಲ ಮಹೇಂದ್ರ ಜಾಲಗಳನ್ನು ಮಾಡಬಲ್ಲ ಯಕ್ಷಿಣಿಯವನ ಬುಟ್ಟಿಗೆ ಹೋಲಿಸಿದ್ದಾನೆ.

ಇಪ್ಪತ್ತನೆಯ ಶತಮಾನದಿಂದೀಚೆಗಂತೂ ಸರಕಾರದ ಕಾರ್ಯ ಕ್ಷೇತ್ರ ವಿಸ್ತಾರವಾದಂತೆಲ್ಲಾ ಸರಕಾರದ ಬಜೆಟ್ಟಿನ ಪ್ರಾಮುಖ್ಯ ಬಹುಮಟ್ಟಿಗೆ ಹೆಚ್ಚುತ್ತಿದೆ. ಸರಕಾರದ ಖರ್ಚಿಗೆ ಬೇಕಾದ ಹಣವನ್ನು ಉತ್ಪತ್ತಿಮಾಡುವುದು; ಬಂದ ಹಣವನ್ನು ನಷ್ಟವಿಲ್ಲದೆ ಮೋಸವಿಲ್ಲದೆ, ಸರಿಯಾದ ಕೆಲಸಗಳಿಗೆ ನ್ಯಾಯರೀತಿಯಲ್ಲಿ ಉಪಯೋಗಿಸುವುದು; ಬೇಕಾದ ಹಣವನ್ನು ನಾನಾ ರೀತಿಯಲ್ಲಿ ಸಾಲ ಮತ್ತು ಎರವಲಾಗಿ ತರುವುದು, ಇವೆಲ್ಲವೂ ಬಜೆಟ್ಟಿನಲ್ಲಿ ಕಂಡುಬರುವುವು.

ಬಜೆಟ್ಟನ್ನು ತಯಾರ್ಮಾಡುವ ಮೊದಲು ಸರಕಾರದ ಬೇರೆಬೇರೆ ಇಲಾಖೆಗಳಿಗೆ ಆಯಾವರ್ಷ ಯಾವಯಾವ ಬಾಬಿಗಾಗಿ ಎಷ್ಟೆಷ್ಟು ಹಣ ಬೇಕಾಗುತ್ತದೆ ಎಂಬುದನ್ನು ತಿಳಿದುಕೊಳ್ಳುತ್ತಾರೆ. ಹಾಗೆಯೇ ಯಾವ ಯಾವ ಬಾಬಿನಿಂದ ಎಷ್ಟೆಷ್ಟು ಹುಟ್ಟುವಳಿ ಬರಬಲ್ಲದು ಎಂಬುದನ್ನು ಆಯಾ ಇಲಾಖೆಗಳ ಅಧಿಕಾರಿಗಳಿಂದ ತಿಳಿದುಕೊಳ್ಳುತ್ತಾರೆ. ಕೊನೆಗೆ ಸರಕಾರಕ್ಕೆ ಯಾವ ಬಾಬಿನಿಂದ ಎಷ್ಟು ಹುಟ್ಟುವಳಿ ಬರುತ್ತದೆ, ಯಾವ ಬಾಬಿಗೆ ಎಷ್ಟು ಹಣ ಖರ್ಚುಮಾಡಬೇಕು ಎಂಬ ಇಲಾಖಾವಾರು ವಿಶದವಾಗಿ ಆಯುವ್ಯಯಗಳನ್ನು ತಿಳಿಸುವ ಪಟ್ಟಿಯನ್ನು ತಯಾರ್ಮಾಡುತ್ತಾರೆ. ಹೀಗೆ ಆಯಾ ಇಲಾಖೆಗಳಿಗೆ ಹಣವನ್ನು ನಿರಕುಮಾಡುವಾಗ ಹಿಂದಿನ ವರ್ಷಗಳಲ್ಲಿ ಆ ಬಾಬಿಗೆ ಎಷ್ಟು ವೆಚ್ಚವಾಗುತ್ತಿತ್ತು, ಯಾವ ಯಾವ ಬಾಬುಗಳಿಂದ ಸರಕಾರದ, ವರಮಾನ ಬರುತ್ತಿತ್ತು, ವರಮಾನದ ಹಿಂದಿನ ಅಂಕಿ ಅಂಶಗಳನ್ನು ನೋಡಿ ಪರ್ಯಾಲೋಚಿಸಿ ಆ ವರ್ಷದ ವರಮಾನದ ಪರಿಮಿತಗಳೇನು, ವೆಚ್ಚಕ್ಕೆ ತಕ್ಕ ಹಣ ಸಾಲದೆಹೋದರೆ ಅದನ್ನು ಪಡೆವ ಮಾರ್ಗಗಳಾವುವು ಇವೇ ಮೊದಲಾದ ಅಂಶಗಳನ್ನು ಮೊದಲು ಪರ್ಯಾಲೋಚಿಸಿ ಬಜೆಟ್ಟನ್ನು ತಯಾರ್ಮಾಡುತ್ತಾರೆ. ಹೀಗೆ ತಯಾರಾದ ಬಜೆಟ್ಟನ್ನು ಪ್ರಜೆಗಳ ಪ್ರತಿನಿಧಿಗಳ ಮುಂದಿಟ್ಟು ಬೇರೆಬೇರೆ ಬಾಬುಗಳಿಗೆ, ಕಾನೂನಿಗೆ ಅನುಗುಣವಾಗಿ, ಅವರ ಅನುಮತಿಯನ್ನು ತೆಗೆದುಕೊಳ್ಳುತ್ತಾರೆ. ಇದರಿಂದ ಸರಕಾರಕ್ಕೆ ಬರುವ ವರಮಾನವೆಷ್ಟು, ವೆಚ್ಚಮಾಡಲು ಇರುವ ಹಣವೇನು ಎಂಬ ವಿಷಯದಲ್ಲಿ ಒಂದು ನಿಷ್ಕೃಷ್ಟವಾದ ಜ್ಞಾನವಿರುವುದು ಮಾತ್ರವಲ್ಲದೆ ಪ್ರತಿಯೊಂದು ಇಲಾಖೆಯವರೂ ತಾವು ಮಾಡಬೇಕಾದ ವೆಚ್ಚವಿಷ್ಟೇ ಎಂಬುದನ್ನು ಸಹ ಇವರಿಗೆ ಮುಂದಿಟ್ಟು ಮಾಡಿದಂತಾಗುವುದು. ಇದರಿಂದ ಸರಕಾರದ ಬೇರೆ ಬೇರೆ ಇಲಾಖೆಗಳ ಕೆಲಸಗಳು

ಒಂದು ಯೋಜನೆಗನುಸಾರವಾಗಿ ನಡೆಯುತ್ತ ಹೋಗುವುವು. ಅಷ್ಟೇ ಅಲ್ಲ, ಶಾಸನ ಸಭೆ ತಾನು ಅನುಮತಿ ಕೊಟ್ಟಷ್ಟು ಹಣಕ್ಕಿಂತ ಹೆಚ್ಚಾಗಿ ಸರಕಾರ ವೆಚ್ಚ ಮಾಡಿದೆಯೋ ಇಲ್ಲವೇ ಎಂಬ ಅಂಶವನ್ನು ಪರಿಶೀಲಿಸುವುದಕ್ಕೂ ಅವಕಾಶವೊದಗುವುದು. ಇದರಿಂದ ಸಾರ್ವಜನಿಕ ಹಣಕಾಸಿನಮೇಲೆ ಒಂದು ವಿಧವಾದ ಹತೋಟಿಯಿದ್ದಂತಾಗುವುದು.

ಹೀಗೆ ಒಂದು ವರ್ಷದಲ್ಲಿ ಸಾಧನಸಂಪತ್ತುಗಳಿಂದ ಬರುವ ವರಮಾನ, ಸರಕಾರದ ಬೇರೆ ಬೇರೆ ಇಲಾಖೆಗಳಿಗೆ ಬೇಕಾದ ಹಣ, ಇವುಗಳನ್ನು ಪರ್ಯಾಲೋಚಿಸಿ ಆದಾಯ ವೆಚ್ಚದ ಅಂದಾಜು ಪಟ್ಟಿಯನ್ನು ತಯಾರ್ಮಾಡುವುದು ಮೊದಲನೆಯ ಕೆಲಸ. ಹೀಗೆ ತಯಾರಾದ ಅಂದಾಜು ಪಟ್ಟಿಯನ್ನು ಆ ಹಣಕಾಸಿನ ವರ್ಷ ಆರಂಭವಾಗುವುದಕ್ಕೆ ಮೊದಲೇ ಶಾಸನ ಸಭೆಯ ಮುಂದಿಡುವರು. ಶಾಸನ ಸಭೆಯ ಸದಸ್ಯರು, ದೇಶದ ಹಿತದೃಷ್ಟಿಯಿಂದ ಬಡ್ಜೆಟ್ಟಿನಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಬಹುದು, ಸರಕಾರದವರು ಸೂಚಿಸುವ ಹೊಸ ತೆರಿಗೆಗಳನ್ನು ಖಂಡಿಸಬಹುದು, ಕೆಲವು ಇಲಾಖೆಗಳಿಗೆ ಕೊಟ್ಟಿರುವ ಹಣವನ್ನು ತಗ್ಗಿಸಬಹುದು ಅಥವಾ ಹೆಚ್ಚಿಸಬಹುದು, ಬೇರೆ ಇತರ ಕಾರ್ಯಗಳಿಗಾಗಿ ಹಣವನ್ನು ಮೀಸಲಾಗಿಡಬೇಕೆಂದು ಸೂಚಿಸಬಹುದು. ಹೀಗೆ ಅನೇಕ ವಿಧವಾದ ವ್ಯತ್ಯಾಸಗಳನ್ನು ಮಾಡಬಹುದು. ಶಾಸನ ಸಭೆಯ ಪರ್ಯಾಲೋಚನೆಗೆ ಒಳಪಟ್ಟ ಬಡ್ಜೆಟ್ಟಿನ ಪ್ರಕಾರ ಸರಕಾರದವರು ತೆರಿಗೆಗಳನ್ನು ವಸೂಲ್ಮಾಡಿ ತಮ್ಮ ಕರ್ತವ್ಯನಿರ್ವಹಣ ಮಾಡುತ್ತಾರೆ. ಹೀಗೆ ಬಡ್ಜೆಟ್ಟನ್ನು ಶಾಸನ ಸಭೆಯ ಅನುಮತಿಗಾಗಿ ಅದರ ಮುಂದಿಟ್ಟಾಗ, ಅದರ ಸದಸ್ಯರಿಗೆ ಸರಕಾರದ ನೀತಿಯನ್ನು ಟೀಕಿಸಲು ಸಹ ಹಕ್ಕುಂಟು. ಬಡ್ಜೆಟ್ಟನ್ನು ತಯಾರ್ಮಾಡಿ ಅದನ್ನು ಸಭೆಯ ಮುಂದಿಟ್ಟು ಆಮೇಲೆ ಶಾಸನ ಸಭೆಯ ಸೂಚನೆಗಳೊಂದಿಗೆ ಅನುಮತಿಯನ್ನು ಪಡೆಯುವುದು ಎರಡನೆಯ ಕೆಲಸ. ಈ ರೀತಿ ತಿದ್ದುಪಾಟಾಗಿ, ಅನುಮತಿಪಡೆದ ಬಡ್ಜೆಟ್ಟಿನ ಪ್ರಕಾರ ಆದಾಯ ವೆಚ್ಚವನ್ನು ನಡಸಿಕೊಂಡು, ಬಡ್ಜೆಟ್ಟನ್ನು ಕಾರ್ಯರೂಪಕ್ಕೆ ತರುವುದು ಸರಕಾರದ ಮೂರನೆಯ ಕೆಲಸ.

ಈ ಬಡ್ಜೆಟ್ಟನ್ನು ಎಲ್ಲ ದೇಶಗಳಲ್ಲೂ ಒಂದೇ ಕಾಲದಲ್ಲಿ ಒಂದೇರೀತಿ ತಯಾರ್ಮಾಡುವುದಿಲ್ಲ. ದೇಶಹಿತವನ್ನು ಲಕ್ಷ್ಯದಲ್ಲಿಟ್ಟು ವರ್ಷಕ್ಕೊಮ್ಮೆ, ಮೂರು ವರ್ಷಗಳಿಗೊಂದು ಬಾರಿ, ಐದು ವರ್ಷಗಳಿಗೊಂದು ಸಲ ಅಥವಾ ಹತ್ತು ವರುಷಗಳಿಗೊಂದು ಬಾರಿ ಸಾರ್ವಜನಿಕ ಆಯವ್ಯಯದ ಅಂದಾಜನ್ನು ನಿಶ್ಚಯ ಮಾಡುತ್ತಾರೆ. ಒಂದೊಂದು ದೇಶದವರು ಒಂದೊಂದು ಕಾಲದಲ್ಲಿ ಬಡ್ಜೆಟ್ಟನ್ನು ತಯಾರ್ಮಾಡುತ್ತಾರೆ. ವರುಷಕ್ಕೆರಡು ಬಾರಿ ಬಡ್ಜೆಟ್ಟನ್ನು ತಯಾರ್ಮಾಡುವ ದೇಶಗಳೂ ಇವೆ. ಅಮೆರಿಕಾ ದೇಶದಲ್ಲಿ ವರ್ಷಕ್ಕೆರಡು ಬಾರಿ ಆಯವ್ಯಯ ಪಟ್ಟಿಯನ್ನು ತಯಾರ್ಮಾಡುತ್ತಾರೆ. ಸಾಮಾನ್ಯವಾಗಿ ಹನ್ನೆರಡು ತಿಂಗಳಿಗೊಮ್ಮೆ ಬಡ್ಜೆಟ್ಟನ್ನು ತಯಾರಿಸುವ ಕ್ರಮವೇ ಅನೇಕ ದೇಶಗಳಲ್ಲಿ ರೂಢಿಗೆ ಬಂದಿದೆ. ಹಣಕಾಸಿನ ವರ್ಷ ಯಾವಾಗ ಪ್ರಾರಂಭವಾಗುವುದು ಎಂಬುದರಲ್ಲಿಯೂ ವೈವಿಧ್ಯವಿದೆ. ಗ್ರೇಟ್‌ಬ್ರಿಟನ್, ಬ್ರಿಟಿಷ್ ಇಂಡಿಯಾ, ಜರ್ಮನಿ ಮತ್ತು ಜಪಾನ್ ದೇಶಗಳಲ್ಲಿ ಹಣಕಾಸಿನ ವರ್ಷ ಏಪ್ರಿಲ್

೧ ರಿಂದ ಪ್ರಾರಂಭವಾಗಿ ಮಾರ್ಚಿ ೩೧ಕ್ಕೆ ಮುಗಿಯುತ್ತದೆ. ಅಮೆರಿಕದ ಸಂಯುಕ್ತ ಸಂಸ್ಥಾನಗಳು, ಇಟಲಿ ಮತ್ತು ಚೀನಾ ದೇಶಗಳಲ್ಲಿ ಬಡ್ಜೆಟ್ ವರ್ಷ ಜೂನ್ ೩೦ಕ್ಕೆ ಮುಗಿಯುತ್ತದೆ. ಫ್ರಾನ್ಸ್, ಬೆಲ್ಜಿಯಂ, ಸ್ವಿಟ್ಸರ್ಲೆಂಡ್ ಮತ್ತು ರಷ್ಯಾ ಈ ದೇಶಗಳಲ್ಲಿ ಆಯಾ ದೇಶದ ಪಂಚಾಂಗದ ಸಂವತ್ಸರವೇ ಸರಕಾರದ (ಹಣ ಕಾಸಿನ) ವರ್ಷವೆಂಬುದಾಗಿ ಭಾವಿಸಿದ್ದಾರೆ. ಹೀಗೆ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹಣಕಾಸಿನ ವರ್ಷ ವ್ಯತ್ಯಾಸವಾಗಿರುವುದಕ್ಕೆ ಕಾರಣಗಳೂ ಉಂಟು. ಮುಂದಿನ ವರ್ಷದ ಆದಾಯ ಮತ್ತು ವೆಚ್ಚವನ್ನು ಯಾವ ಕಾಲದಲ್ಲಿ ಸರಿಯಾಗಿ ಊಹಿಸಲು ಅವಕಾಶವಿದೆಯೋ ಅಂತಹ ಕಾಲವನ್ನು ಸರಕಾರದ ವರ್ಷ ಪ್ರಾರಂಭ ವಾಗುವ ಕಾಲವಾಗಿ ಪರಿಗಣಿಸುವುದು ಸಾಧುವಾದುದು. ನ್ಯಾಯವಾಗಿ ನೋಡಿದರೆ ಇಂಡಿಯಾ ದೇಶದ ಹಣಕಾಸಿನ ವರ್ಷ, ವರ್ಷಾಕಾಲ ಮುಗಿದ ಮೇಲೆ ಎಂದರೆ ಜನವರಿ ತಿಂಗಳಿಂದ ಪ್ರಾರಂಭವಾಗಬೇಕು. ಆಕಾಲದಲ್ಲಿ ಮುಂದಿನ ವರುಷದ ಆದಾಯ ಮತ್ತು ವೆಚ್ಚಗಳನ್ನು ಅಂದಾಜು ಮಾಡಲು ಹೆಚ್ಚು ಅನುಕೂಲ ಗಳಿವೆ—ಹೀಗೆ ಹಣಕಾಸಿನ ವರ್ಷದಲ್ಲಿಯೂ ದೇಶದೇಶಕ್ಕೆ ವೈವಿಧ್ಯವಿದೆ. ಬಡ್ಜೆಟ್ಟನ್ನು ತಯಾರ್ಮಾಡುವ ಕಾಲದಲ್ಲಿ ವ್ಯತ್ಯಾಸವಿದ್ದಂತೆಯೇ ತಯಾರಿಸುವ ವಿಧಾನ ದಲ್ಲಿಯೂ ವ್ಯತ್ಯಾಸವಿದೆ. ಆಯಾ ದೇಶದಲ್ಲಿನ ವಾರ್ಷಿಕ ವರಮಾನಕ್ಕೆ ಸರಿಯಾಗಿ ವೆಚ್ಚವನ್ನು ನಿಯಮಿಸಿಕೊಳ್ಳುವುದಲ್ಲದೆ, ವೆಚ್ಚಕ್ಕೆ ತಕ್ಕ ಆದಾಯವನ್ನು ಬರಮಾಡಿಸಿ ಕೊಳ್ಳುವ ವಿಧಾನವೂ ಇದೆ.

ಹೀಗೆ ತಯಾರಾದ ಬಡ್ಜೆಟ್ಟನ್ನು ನಾವು ನೋಡಿದರೆ ನಮಗೆ ತಟ್ಟನೆ ನಾಲ್ಕು ವಿಧವಾದ ಅಂಕಿಗಳು ಕಣ್ಣಿಗೆ ಕಾಣುತ್ತವೆ. ನಾವು ೧೯೪೦–೪೧ನೆ ಇಸ್ವಿಯ ಆಯವ್ಯಯದ ಪಟ್ಟಿಯನ್ನು ಪರಿಶೀಲಿಸುತ್ತಿದ್ದೇವೆಂದು ಭಾವಿಸೋಣ. ೧೯೩೯–೪೦ನೆ ಸಾಲಾಖೈರಿಗೆ ಮುಂಚಿತವಾಗಿ, ೧೯೪೦–೪೧ನೆ ಸಾಲಿನ ಬಡ್ಜೆಟ್ಟಿನ ಆಯವ್ಯಯ ವಿಮರ್ಶೆ ನಡೆದು ಶಾಸನ ಸಭೆಗಳ ಒಪ್ಪಿಗೆಯನ್ನು ಪಡೆಯಬೇಕು. ಹೀಗೆ ರಚಿತವಾಗುವ ಬಡ್ಜೆಟ್ಟಿನಲ್ಲಿ ಒಂದರ ಪಕ್ಕದಲ್ಲಿ ಮತ್ತೊಂದರಂತೆ ಮುಖ್ಯ ವಾಗಿ ಮೂರು ತಂಡದ ಅಂಕಿಗಳು ನಮೂದಿಸಲ್ಪಟ್ಟಿರುತ್ತವೆ.

ಅವುಗಳಲ್ಲಿ ಮೊದಲನೆಯದು: ಕಳೆದ ಸರ್ಕಾರಿ ವರ್ಷದ ಎಂದರೆ ೧೯೩೮–೩೯ನೆ ಇಸ್ವಿಯಲ್ಲಿ ಬಂದ ಆದಾಯ, ಆದ ವೆಚ್ಚ ಇವುಗಳ ವಾಸ್ತವಿಕ ಅಂಕಿಗಳು ನಮೂದಿಸಲ್ಪಟ್ಟಿರುತ್ತವೆ. ಆ ಅಂಕಿಗಳು ಪರಿಶೋಧಿತವಾಗಿ, ವಾಸ್ತ ವಿಕವಾಗಿ ಆ ವರ್ಷದಲ್ಲಿ ಆದ ಆದಾಯ ವೆಚ್ಚಗಳನ್ನು ಸೂಚಿಸತಕ್ಕುವುಗಳು.

ಎರಡನೆಯದು: ಮುಂದಕ್ಕೆ ಬರುವ ವರುಷದ ಎಂದರೆ ೧೯೪೦–೪೧ನೆ ಇಸ್ವಿಯ ಬಡ್ಜೆಟ್ ಅಂದಾಜುಗಳು.

ಮೂರನೆಯದು: ಮುಂದಕ್ಕೆ ಬರುವ, ಸರಕಾರದ ಆಡಳಿತ ಕ್ರಮದಲ್ಲಿ ತಿದ್ದುಪಾಟಾಗಿ ನಿಂತ ಅಂದಾಜಿನ ಅಂಕಿಗಳು, ಎಂದರೆ ೧೯೩೯–೪೦ನೆ ಇಸ್ವಿಯ ತಿದ್ದುಪಾಟಾದ ಅಂದಾಜುಗಳು.

ಹಿಂದಿನ ವರುಷದಲ್ಲಿ ವಾಸ್ತವಿಕವಾಗಿ ಬಂದ ಆದಾಯ, ಆದ ವೆಚ್ಚ, ಪ್ರಸಕ್ತ ವರುಷಕ್ಕಾಗಿ ಅಂದಾಜು ಮಾಡಿದ ಪಟ್ಟಿ, ಆಮೇಲೆ ಆಡಳಿತದ ಕ್ರಮದಲ್ಲಿ ಬದಲಾವಣೆಯಾದ ತಿದ್ದುಪಾಡು ಮಾಡಿದ ಪಟ್ಟಿ, ಇವುಗಳ ಪರ್ಯಾಲೋಚನೆಯ ಮೇಲೆ ಮುಂದಣ ವರುಷದ ಆದಾಯ ವೆಚ್ಚಗಳನ್ನು ಅಂದಾಜು ಮಾಡಿರುವ ಅಂಕಿಗಳ ಲೆಕ್ಕಾಚಾರ ಮಾಡಿರುತ್ತದೆ. ಆದರೆ ಕಾಲಾನುಗುಣವಾಗಿ ಸರಕಾರ ಕೈಗೊಳ್ಳಬೇಕಾದ ಕಾರ್ಯ ವಿಸ್ತರಣೆ ಮತ್ತು ದೇಶದಲ್ಲಿನ ಸನ್ನಿವೇಶಗಳನ್ನು ಅನುಸರಿಸಿ ಈ ಅಂಕಿಗಳಲ್ಲಿನ ಬದಲಾವಣೆಯೂ ಅವಶ್ಯಕವಾಗುತ್ತದೆ.

ಈ ರೀತಿ ಬಡ್ಜೆಟ್ಟಿನ ಅಂಕಿಗಳಿಂದ ಒಂದು ದೇಶದಲ್ಲಿ ಹಿಂದಿನ ವರುಷದ ಸಾರ್ವಜನಿಕ ಹಣಕಾಸಿನ ಪರಿಸ್ಥಿತಿ ಹೇಗಿತ್ತು, ಪ್ರಸಕ್ತ ವರುಷದ ಅನುಭವವೇನು, ಮುಂದೆ ಯಾವ ರೀತಿ ಹಣಕಾಸಿನ ಸ್ಥಿತಿಯಿರುತ್ತದೆ, ಎಂಬ ಅಂಶಗಳು ಸ್ಪಷ್ಟವಾಗುತ್ತವೆ.

ಬಜೆಟ್ ಅಂದಾಜುಗಳಲ್ಲಿ ತೋರಿಸಿರುವ ಮೊಬಲಗುಗಳು, ಆಯವ್ಯಯ ವರ್ಷದ, ಎಂದರೆ ಜುಲೈ ೧ನೆಯ ತಾರೀಖಿನಿಂದ ಜೂನ್ ೩೦ನೆಯ ತಾರೀಖಿನ ವರೆಗೆ, ಬರಬಹುದಾದ ನಗದು ಹುಟ್ಟುವಳಿಯನ್ನೂ, ನಡೆಯಬಹುದಾದ ವೆಚ್ಚಗಳನ್ನೂ ಸೂಚಿಸುತ್ತವೆ. ಮೊದಲನೆಯ ತಂಡದ ಲೆಕ್ಕಗಳಲ್ಲಿ, ಎಂದರೆ ಪರಿಶೋಧಿತವಾಗಿ ನಮೂದಾಗಿರುವ ಹಿಂದಿನ ವರ್ಷದ ಲೆಕ್ಕಗಳು ವಾಸ್ತವಿಕವಾಗಿ ಸರಕಾರಕ್ಕೆ ಬಂದ ನಗದು ಹುಟ್ಟುವಳಿಯನ್ನೂ ವಾಸ್ತವಿಕವಾಗಿ ಆದ ನಗದು ವೆಚ್ಚವನ್ನೂ ಸೂಚಿಸುತ್ತವೆ. ಇದರಿಂದ ಬಡ್ಜೆಟ್ಟನ್ನು ಪರಿಶೀಲಿಸಿದರೆ, ಆ ದೇಶದಲ್ಲಿ ಆ ಸರಕಾರ ಪಡೆವ ನಗದು ಜಮಾ, ಮಾಡುವ ನಗದು ಖರ್ಚುಗಳನ್ನು ತಿಳಿಯಬಹುದೇ ಹೊರತು ಆ ವರುಷದಲ್ಲಿ ಸರಕಾರಕ್ಕೆ ಸಾಲ ರೂಪದಲ್ಲಿ ಬರಬೇಕಾದ ಹಣವೆಷ್ಟು ಅಥವಾ ಸರಕಾರವು ಕೊಡಬೇಕಾದ ಹಣವೆಷ್ಟು, ಎಂಬ ಲೇಣೆ ದೇಣೆಗಳ ವಿಷಯ ಅರಿವಾಗದು. ಇದರಿಂದ ವಾಸ್ತವವಾದ ನಗದು ಜಮಾ ಖರ್ಚುಗಳ ವಿಷಯಮಾತ್ರ ಗೊತ್ತಾಗುವುದು. ಅದರ ಆಧಾರದ ಮೇಲೆ ಆಯಾ ವರುಷದ ಆಯವ್ಯಯ ಪರಿಸ್ಥಿತಿಯನ್ನು ಮಾತ್ರ ತಿಳಿಯಬಹುದು. ಆದರೆ ಸರಕಾರದ ಒಟ್ಟು ಆಸ್ತಿಯೇನು, ಅದರ ಸಾಲ ಸೋಲಗಳು, ಮಾಡಬಹುದಾದ ವೆಚ್ಚ, ಉಳಿಸಬಹುದಾದ ಹಣ, ಮೊದಲಾದ ಅಂಶಗಳನ್ನು ಸೂಚಿಸಿ ಆ ಸರಕಾರದ ಹಣಕಾಸಿನ ಸ್ಥಿತಿಯನ್ನು ಸೂಚಿಸುವುದಕ್ಕಾಗಿ ಬಡ್ಜೆಟ್ಟಿನ ಜತೆಗೆ ಹಣಕಾಸಿನ ಸಚಿವರು ಅಥವಾ ಕಾರ್ಯದರ್ಶಿಗಳು ವಿವರಣಾರೂಪದ ಒಂದು ಸೂಚೀಪತ್ರವನ್ನು ತಯಾರ್ಮಾಡಿ ಹಂಚುತ್ತಾರೆ. ಇದರಿಂದ "ವಾಸ್ತವವಾದ ನಗದು ಜಮಾ ಖರ್ಚುಗಳ ಆಧಾರದ ಮೇಲೆ ಆಯಾ ವರುಷದ ಆಯವ್ಯಯಗಳ ಸ್ಥಿತಿಯನ್ನು ದಾಖಲ್ಮಾಡಿ ತೋರಿಸಲು" ಸಾಧ್ಯವಾಗುತ್ತದೆ.

ಆಯಾ ವರುಷದ ಬಡ್ಜೆಟ್ಟಿನೊಂದಿಗೆ ಹಂಚಿದ ಹಣಕಾಸಿನ ಕಾರ್ಯದರ್ಶಿಗಳ ಸೂಚೀಪತ್ರವನ್ನು ಪರಿಶೀಲಿಸಿದರೆ ಅಲ್ಲಿ ಆಯವ್ಯಯವನ್ನು ನಾಲ್ಕು ಮುಖ್ಯ ಭಾಗಗಳನ್ನಾಗಿ ವಿಂಗಡಿಸಿರುವುದನ್ನು ಕಾಣುತ್ತೇವೆ.

## ೧. ಮೊದಲನೆಯ ಬಾಬು : ಹುಟ್ಟುವಳಿಯ ಬಾಬು

ಈ ಭಾಗದಲ್ಲಿ ತೆರಿಗೆಗಳಿಂದ ಬರುವ ಹುಟ್ಟುವಳಿಯನ್ನೂ, ತೆರಿಗೆಗೆ ಸಂಬಂಧ ಪಡದ ಬಾಬುಗಳಿಂದ ಬರುವ ಹುಟ್ಟುವಳಿಯನ್ನೂ ಅವುಗಳಿಗಾಗಿ ಬೀಳತಕ್ಕ ವೆಚ್ಚಗಳನ್ನೂ ನಮೂದಿಸಿರುತ್ತಾರೆ. ಇದರಲ್ಲಿ ಸೂಚಿಸಿರುವ ನಿವ್ವಳ ಫಲಿತಾಂಶ ಆಯಾ ವರುಷದ ಹುಟ್ಟುವಳಿಯಲ್ಲಿ ವೆಚ್ಚ ಕಳೆದು ನಿಂತ ಮಿಗುತಾಯವನ್ನಾಗಲಿ, ಹುಟ್ಟುವಳಿಗಿಂತ ವೆಚ್ಚ ಅಧಿಕವಾಗಿ ಹಣ ಸಾಲದೆ ಬಂದ ಕೊರತೆಯನ್ನಾಗಲಿ ಸೂಚಿಸುತ್ತದೆ.

## ೨. ಎರಡನೆಯದು : ಮೂಲಧನದ ಬಾಬು

ಈ ಭಾಗದಲ್ಲಿ ಲಾಭದಾಯಕವಾದ ರೀತಿಯಲ್ಲಿ ನೀರಾವರಿ ಕೆಲಸಗಳನ್ನಾಗಲಿ ಕೈಗಾರಿಕೆಗಳನ್ನಾಗಲಿ, ರಸ್ತೆ, ಸೇತುವೆ, ರೈಲು ಮೊದಲಾದುವುಗಳನ್ನಾಗಲಿ ನಡೆಯಿಸಿ ದೇಶಕ್ಕೆ ಹುಟ್ಟುವಳಿ ಬರುವಂತಹ ಆಸ್ತಿಯ ರೂಪದ ಸಾಧನಗಳನ್ನು ಏರ್ಪಡಿಸಲು ಮಾಡಿದ ವೆಚ್ಚವನ್ನು ಸೂಚಿಸಿರುತ್ತದೆ. ಈ ಮೂಲಧನ ಬಾಬುಗಳಿಗಾಗಿ ಆಗ ಬೇಕಾದ ವೆಚ್ಚಕ್ಕೆ ಸಾಮಾನ್ಯವಾಗಿ ಹಣವನ್ನು (೧) ಸಾಲವಾಗಿ ತಂದೋ, (೨) ಇಂತಹ ಬಾಬುಗಳ ವೆಚ್ಚಕ್ಕಾಗಿಯೋ ವಿನಿಯೋಗಿಸಲು ಉದ್ದೇಶಿಸಲ್ಪಟ್ಟಿರುವ ಕಂಟ್ರಿಬ್ಯೂಷನ್ ಮೊಬಲಗು ಅಥವಾ ಮೂಲಧನದ ಸ್ವಭಾವದ ಹುಟ್ಟುವಳಿಗಳಿಂದಲೋ, (೩) ಅಥವಾ ಹುಟ್ಟುವಳಿಯ ಬಾಬಿನಲ್ಲಿ ವೆಚ್ಚಕಳೆದು ಉಳಿಯುವ ಮೊಬಲಗಿನಿಂದಲೋ ಒದಗಿಸಲಾಗುವುದು.

## ೩. ಮೂರನೆಯ ಬಾಬು : ಸಾಲದ ಬಾಬು

ಈ ಭಾಗದಲ್ಲಿ ಸಾಮಾನ್ಯವಾಗಿ ಠೇವಣಿ, ಸಾಲ ಮುಂಗಡ, ಅಥವಾ ಸಾಲದ ರೀತಿಯ ಜಮಾ ಮತ್ತು ಖರ್ಚು, ಇವುಗಳಿಗೆ ಸಂಬಂಧಪಟ್ಟ ಅಂಕಿಗಳನ್ನು ಸೂಚಿಸಿರುತ್ತದೆ. ಈ ಭಾಗದಲ್ಲಿ ನಮೂದಿಸಿರುವ ಜಮಾ ಬಾಬ್ತು ಮೊಬಲಗು ಸಾಲದ ರೂಪದ ಮೊಬಲಗಾಗಿಯೂ, ಖರ್ಚು, ಸಾಲ ಕಡಮೆಯಾಗಿ, ಯಾವುದಾದರೂ ಒಂದು ಸ್ವತ್ತಿನ ರೂಪದಲ್ಲಿ ಬಂಡವಾಳವನ್ನು ಹೆಚ್ಚಿಸಲು ಸಾಧಕವಾದ ಮೊಬಲಗಾಗಿಯೂ ಇರುತ್ತವೆ. ಈ ವಿಷಯದಲ್ಲಿ ಸರಕಾರದವರೂ ಕಾರ್ಯತಃ ಹಣಕಾಸಿನ ಭದ್ರತೆಯನ್ನು ಹೆಚ್ಚಿಸಿಕೊಂಡು ಆಸ್ತಿಪಾಸ್ತಿಗಳನ್ನು ಅಭಿವೃದ್ಧಿಗೊಳಿಸಿಕೊಳ್ಳಬೇಕೆಂದು ಪ್ರಯತ್ನಿಸುವ ಲೇವಾದೇವಿ ನಡಸತಕ್ಕವರನ್ನೋ, ಸಾಲಸೋಲಗಳನ್ನು ಕೊಟ್ಟು, ಆಸ್ತಿಯನ್ನು ಬೆಳಸುವ, ಬ್ಯಾಂಕುಗಳನ್ನೋ ಹೋಲತಕ್ಕವರಾಗಿದ್ದಾರೆ. ಈ ಭಾಗದ ಅಂಕಿಗಳನ್ನು ಪರಿಶೀಲಿಸಿದರೆ ಒಂದು ದೇಶದ ಸರಕಾರದ ಒಟ್ಟು ಆಸ್ತಿಗಳೇನು, ಅದಕ್ಕಿರುವ ಸಾಲವೇನು ಎಂಬ ಅಂಶಗಳು ಸ್ಪಷ್ಟವಾಗುತ್ತವೆ.

## ೪. ನಾಲ್ಕನೆಯ ಬಾಬು ; ರೆಮಿಟೆನ್ಸ್ ಬಾಬು (ಎಂದರೆ ಇರಸಾಲು ವರ್ಗಾವರ್ಗಿಗೆ ಸಂಬಂಧಿಸಿದ ಬಾಬು ಎನ್ನಬಹುದು)

ಸರಕಾರದ ಲೆಕ್ಕದ ಸಮಜಾಯಿಷಿ ದೊರೆಯುವುದು ಈ ಭಾಗದ ಅಂಕಿಗಳಿಂದಲೇ. ಒಂದು ಖಜಾನೆಯಿಂದಾಗಲಿ ಬ್ಯಾಂಕಿನಿಂದಾಗಲಿ ಇನ್ನೊಂದು ಖಜಾನೆಗೆ ಅಥವಾ ಬ್ಯಾಂಕಿಗೆ ಕಳುಹಿಸಲ್ಪಡುವ ಎಲ್ಲ ನಗದು ಬಾಬತು ಹಣವನ್ನೂ ಎಂದರೆ ಇರಸಾಲು ವರ್ಗಾವರ್ಗಿಯ ಮೊಬಲಗನ್ನೂ ಇಲ್ಲಿ ತೋರಿಸಲಾಗುವುದು. ಅಷ್ಟೇ ಅಲ್ಲ. ಸರಕಾರದ ಒಂದು ಇಲಾಖೆಯಿಂದ ಮತ್ತೊಂದು ಇಲಾಖೆಗೆ, ಅಥವಾ ಒಂದು ಸರಕಾರದಿಂದ ಇನ್ನೊಂದು ಸರಕಾರಕ್ಕೆ ನಡೆಯುವ ಲೇವಾದೇವಿಗಳನ್ನು ಲೆಕ್ಕ ಸಮಜಾಯಿಷಿ ಪದ್ಧತಿಯಂತೆ ಉತ್ತಾರ ಹಾಕಿದ ತರುವಾಯ ಅವಶ್ಯಕವಾಗಿ ನಡೆಯಬೇಕಾದ ನಗದು ಖರ್ಚುಗಳು ಈ ಭಾಗದಲ್ಲಿ ನಮೂದಾಗಿರುತ್ತವೆ.

ಈ ನಾಲ್ಕು ಭಾಗಗಳಲ್ಲಿ ಒಂದೊಂದರಲ್ಲಿಯೂ ನಡೆಯುವ ಜಮಾ ಖರ್ಚುಗಳನ್ನು ವಿಶದವಾಗಿ ತಿಳಿಸುವುದಕ್ಕಾಗಿ, ಅವುಗಳನ್ನು ನಾನಾ ಶಾಖೆಗಳನ್ನಾಗಿ ಮಾಡಿ, ಆ ಒಂದೊಂದು ಶಾಖೆಯಲ್ಲಿನ ಮೊಬಲಗನ್ನೂ ಮೇಜರ್ ಬಾಬು, ಮೈನರ್ ಬಾಬು ಮತ್ತು ತಪಶೀಲ್ವಾರು ಬಾಬು ಎಂದು ಪುನಃ ವಿಭಾಗಮಾಡಿ ಅಂಕಿಗಳನ್ನು ನಮೂದಿಸಿರುತ್ತಾರೆ. ಇದರಲ್ಲಿ ಸೂಚಿಸಿರುವ ಜಮಾ ಅಥವಾ ಖರ್ಚಿನ ಬಗೆಯ ಯಾವುದೇ ಲೆಕ್ಕವಾಗಲಿ ಪ್ರಾರಂಭದಲ್ಲಿ ಉಳಿದ ಶಿಲ್ಕಿನಿಂದ ಮೊದಲುಗೊಂಡು ವರ್ಷದ ಕೊನೆಯಲ್ಲಿ ತೇಲುವ ಶಿಲ್ಕಿನವರೆಗೂ ಅಂಕಿಗಳನ್ನು ಕೊಟ್ಟಿರುತ್ತಾರೆ. ಕೊನೆಯಲ್ಲಿ ಈ ರೀತಿ ನಾನಾಶಾಖೆಗಳಲ್ಲಿ, ನಾನಾಭಾಗಗಳಲ್ಲಿ ತೇಲಿದ, ಶಿಲ್ಕು ಮೊಬಲಗುಗಳನ್ನು ಒಟ್ಟುಗೂಡಿಸಿ ದೇಶದ ಸಾಮಾನ್ಯ ನಗದು ಶಿಲ್ಕಿನಲ್ಲಿ ಸೇರಿಸಿರುತ್ತಾರೆ. ಕೊನೆಯಲ್ಲಿ ತೇಲಿದ ಶಿಲ್ಕು ಹಣವೆಲ್ಲವೂ, ಆ ದೇಶದ ಖಜಾನೆಯಲ್ಲಿಯೇ ಇರಬೇಕಾದುದಿಲ್ಲ. ಹಾಗಿರುವುದೂ ಇಲ್ಲ. ಶಿಲ್ಕಿನ ಒಂದು ಭಾಗ ಖಜಾನೆಯಲ್ಲಿರುತ್ತದೆ. ಮಿಕ್ಕ ಹಣ, ಇತರ ಸರಕಾರಗಳಲ್ಲಿಯೂ, ಗೊತ್ತಾದ ಬ್ಯಾಂಕುಗಳಲ್ಲಿಯೂ ಠೇವಣಿಯಾಗಿರುತ್ತದೆ.

ಹೀಗೆ ಬಡ್ಜೆಟ್ಟಿನಲ್ಲಿ ಆ ವರುಷದ ಆದಾಯ ವೆಚ್ಚಗಳ ಅಂದಾಜು ವಿಚಾರ ಮಾತ್ರವೇ ಚರ್ಚಿಸಬೇಕಾದ ಮುಖ್ಯ ವಿಷಯವಾದರೂ ಅವುಗಳನ್ನು ವಿಚಾರ ಮಾಡುವ ಮೊದಲು ಹಿಂದಣ ವರುಷದ ಆಖೈರು ಲೆಕ್ಕಗಳನ್ನೂ, ಪ್ರಸಕ್ತ ವರುಷದ ಆಯವ್ಯಯದ ಸಂಬಂಧದಲ್ಲಿ ಅದುವರೆಗೆ ದೊರೆತಿರುವ ವಾಸ್ತವಿಕ ಲೆಕ್ಕಗಳನ್ನೂ, ಈ ಲೆಕ್ಕಗಳ ಮತ್ತು ಇತರ ಆಧಾರಗಳ ರೀತ್ಯಾ ನಿರೀಕ್ಷಿಸಲ್ಪಡುವ ಫಲಿತಾಂಶಗಳನ್ನೂ, ಸೂಚಿಸುವುದು ಸಂಪ್ರದಾಯವಾಗಿ ಬಂದಿದೆ. ಇಂತಹ ಬಡ್ಜೆಟ್ಟನ್ನು ಪರಿಶೀಲಿಸಿದರೆ ಆ ದೇಶದ ಸರಕಾರದ ಹಣಕಾಸಿನ ಸ್ಥಿತಿಯನ್ನು ಸೂಚಿಸುವ ಈ ನಾಲ್ಕು ಅಂಶಗಳು ಎದ್ದು ಕಾಣುತ್ತವೆಯೆನ್ನಬಹುದು :

೧. ಆ ಸರಕಾರದ ಒಟ್ಟು ಜಮಾ ಮತ್ತು ಖರ್ಚು.
೨. ,, ,, ಆದಾಯ ಮತ್ತು ವೆಚ್ಚ.
೩. ,, ,, ಆಸ್ತಿ ಮತ್ತು ಸಾಲ.
೪. ,, ,, ನಗದು ಹಣ ಮತ್ತು ಅದು ಇರುವ ಬಗೆ.

ಬಡ್ಜೆಟ್ ಅಂದಾಜುಗಳನ್ನು ಮಾತ್ರವೇ ಪರಿಶೀಲಿಸುವುದರಿಂದ ಸರಕಾರದ ಒಟ್ಟು ಆಯವ್ಯಯದ ವಿಷಯದಲ್ಲಿ ಸ್ಪಷ್ಟವಾದ ಅಥವಾ ಕರ್ತಾರ್ಥ್ಯಕಾದ ಅಭಿಪ್ರಾಯ ಉಂಟಾಗಲಾರದು. ಹಣಕಾಸಿನ ಸ್ಥಿತಿಯ ವಿಷಯದಲ್ಲಿ ನಿಷ್ಕೃಷ್ಟವಾದ ಒಂದು ಅಭಿಪ್ರಾಯ ಬರಬೇಕಾದರೆ ಬಡ್ಜೆಟ್ಟಿನ ವಿವರಗಳ ಜತೆಗೆ ಆಸ್ತಿಯ ರೂಪದ ಸ್ವತ್ತುಗಳೂ ಮತ್ತು ದೇಣಿಗಳೂ ನಾನಾವರುಷಗಳಲ್ಲಿ ಸಾಮಾನ್ಯವಾಗಿ ಯಾವಸ್ಥಿತಿಯಲ್ಲಿದ್ದುವೆಂಬುದನ್ನು ತೋರಿಸುವ ತಃಖ್ತೆಗಳನ್ನೂ, ಬಡ್ಜೆಟ್ಟಿನ ಹಿಂದಣ ವರ್ಷದ ವಾಸ್ತವಿಕವಾದ ಲೆಕ್ಕಗಳಿಗೂ ಬಡ್ಜೆಟ್ ತಯಾರಾಗುವ ವರ್ಷದ ಬಡ್ಜೆಟ್ ಅಂದಾಜುಗಳಿಗೂ ಮತ್ತು ತಿದ್ದುಪಾಟಾದ ಅಂದಾಜುಗಳಿಗೂ ಇರುವ ತಾರತಮ್ಯವನ್ನೂ ಇತರ ವಿಶೇಷ ಸಂದರ್ಭಗಳನ್ನೂ ಪರ್ಯಾಲೋಚಿಸಬೇಕು. ಅಲ್ಲಿನ ಸಮಾಜದ ಆರ್ಥಿಕ ಜೀವನಕ್ಕೆ ಸಂಬಂಧಪಟ್ಟ ಅಂಕಿ ಅಂಶಗಳ ಪರಿಚಯವೂ ಅವಶ್ಯಕ. ಸರಕಾರದ ವ್ಯಾಪ್ತಿ ಹೆಚ್ಚುತ್ತಿರುವ ಈ ಕಾಲದಲ್ಲಿ ದೇಶದ ಆಯವ್ಯಯ ನೀತಿಯು ಜನಜೀವನದಲ್ಲಿ ಪರಿಣಾಮಕಾರಿಯಾದ ಬದಲಾವಣೆಯನ್ನು ಮಾಡುವ ಶಕ್ತಿ ಹೊಂದಿದೆ.

ಸರಕಾರ ಮಾಡುವ ವೆಚ್ಚವೂ, ಅದಕ್ಕಾಗಿ ಪ್ರಜೆಗಳಿಂದ ತೆರಿಗೆ ಮತ್ತು ಇತರ ವಿಧವಾಗಿ ವಸೂಲ್ಮಾಡುವ ಆದಾಯವೂ, ಆ ದೇಶದ ಪ್ರಜೆಗಳ ಜೀವನಮಟ್ಟವನ್ನು ಕೆಳಗಿಳಿಸುವಂತಹುದಾಗಬಾರದು. ಬಡ್ಜೆಟ್ಟನ್ನು ವಿಮರ್ಶಿಸುವಾಗ, ಸಾಮಾನ್ಯವಾಗಿ ಆಯಾ ವರುಷದಲ್ಲಿ ಬರುವ ಆದಾಯಕ್ಕೆ ಅನುಗುಣವಾಗಿ ವೆಚ್ಚವನ್ನು ಏರ್ಪಡಿಸಿಕೊಂಡು ಬಡ್ಜೆಟ್ಟನ್ನು ತಯಾರಿಸಿದ್ದಾರೆಯೋ ಎಂಬುದನ್ನು ಮಾತ್ರವಲ್ಲ ನೋಡಬೇಕಾದುದು ; ಇನ್ನೂ ಕೆಲವು ಅಂಶಗಳಿವೆ. ಆ ವರುಷದ ಹುಟ್ಟುವಳಿಯಿಂದಲೇ ವರುಷದ ವೆಚ್ಚಕ್ಕೆ ಪೂರ್ತಿಯಾಗಿ ಹಣವನ್ನು ಒದಗಿಸುವುದೇ ಸಾಧುವಾದ ಸಂಪ್ರದಾಯವಾದರೂ, ಹಾಗಿಲ್ಲದೆ ಒಂದು ವರುಷ ಆದಾಯಕ್ಕಿಂತ ವೆಚ್ಚ ಹೆಚ್ಚಾಗಿದ್ದ ಪಕ್ಷದಲ್ಲಿ ಆ ಬಡ್ಜೆಟ್ಟಿನಲ್ಲಿ ಲೋಪವಿದೆಯೆಂದು ಭಾವಿಸಬಾರದು. ಮುಗ್ಗಟ್ಟು ಬಂದೊದಗಿದ ಸಮಯದಲ್ಲಾಗಲಿ, ದೇಶದ ಹಿತದೃಷ್ಟಿಯಲ್ಲಿ ಕೆಲವು ಹಿರಿದಾದ ಸಮಾಜೋನ್ನತಿ ಕಾರ್ಯಗಳನ್ನು ನಿರ್ವಹಿಸಬೇಕಾದ ಸಮಯಗಳಲ್ಲಾಗಲಿ ಆದಾಯಕ್ಕಿಂತ ವೆಚ್ಚ ಹೆಚ್ಚಾಗಿರುವುದು ಸಹಜ ; ಅಷ್ಟೇ ಅಲ್ಲ. ದೇಶದಲ್ಲಿ ಉತ್ಪತ್ತಿ ಶಕ್ತಿಯನ್ನು ಹೆಚ್ಚಿಸುವುದಕ್ಕಾಗಿ ಕೈಗಾರಿಕೆಗಳನ್ನು ಪ್ರಾರಂಭಿಸುವುದಕ್ಕಾಗಿಯೂ ಸರಕಾರ ಆದಾಯಕ್ಕೆ ಮೀರಿ, ವೆಚ್ಚಮಾಡಬಹುದು. ಈ ಒಂದು ದೃಷ್ಟಿಯಿಂದ ಆ ಸರಕಾರದ ಹಣಕಾಸಿನ ಪರಿಸ್ಥಿತಿ ಕೆಟ್ಟುಹೋಗಿದೆಯೆಂದು ಮಾತ್ರ ತಿಳಿಯಬಾರದು. ಸಾಮಾನ್ಯವಾಗಿ ಬಡ್ಜೆಟ್ಟನ್ನು ವಿಮರ್ಶೆ ಮಾಡುವಾಗ ತೆರಿಗೆಯಿಂದ ಬರುವ

ಹಣವೆಷ್ಟು, ಅದು ಯಾವ ಬಗೆಯ ತೆರಿಗೆ, ಈ ತೆರಿಗೆಯಿಂದ ವಸೂಲಾದ ಹಣ ಪ್ರಜೆಗಳ ಸಾಮಾಜಿಕ, ಆರ್ಥಿಕ ಸ್ಥಿತಿಗಳನ್ನು ಎಷ್ಟು ಮಾತ್ರ ಉತ್ತಮಗೊಳಿಸುತ್ತದೆ. ಆ ತೆರಿಗೆಯ ಹೊರೆ ಜನರ ಮೇಲೆ ಹೇಗೆ ಬಿದ್ದಿದೆ ಎಂಬುದನ್ನು ಪರಿಶೀಲಿಸಬೇಕು. ಇತ್ತೀಚಿನ ವರುಷಗಳಲ್ಲಿ ಸರಕಾರವೇ ಎಲ್ಲ ಕಾರ್ಯಗಳನ್ನೂ ನಿರ್ವಹಿಸಬೇಕಾಗಿ ಬಂದಿರುವುದರಿಂದ ಹೆಚ್ಚು ಹಣ ಬೇಕಾದುದೇನೋ ನ್ಯಾಯ. ಆ ಹಣ ಯಾರಿಂದ ಬರುತ್ತಿದೆ, ಅದನ್ನು ಸರಕಾರ ಹೇಗೆ ವಸೂಲ್ಮಾಡುತ್ತದೆ ಎಂಬುದನ್ನು ಗಮನಿಸಬೇಕು. ಒಂದು ತೆರಿಗೆಯಿಂದ ದೇಶದ ಬಡಜನರ ಜೀವನ ಇನ್ನೂ ಕುಗ್ಗುವುದಾಗಿ ಶ್ರೀಮಂತರ ಹಣ ಹಾಗೆಯೇ ಉಳಿದಿರುವುದಾದರೆ ಅಂತಹ ತೆರಿಗೆಯಿಂದ ಸರಕಾರ ತನ್ನ ಹುಟ್ಟು ವಳಿಯನ್ನು ಉತ್ಪನ್ನಮಾಡಿಕೊಳ್ಳಕೂಡದು. ಜನರ ಜೀವನದ ಅಂತಸ್ತನ್ನು ಕುಗ್ಗಿಸದ ರೀತಿ ತೆರಿಗೆಗಳನ್ನು ಹಾಕಿದೆಯೇ ಎಂಬುದನ್ನು ಮೊದಲು ಪರೀಕ್ಷಿಸಬೇಕು. ಅದರ ಜತೆಗೆ ತೆರಿಗೆಯಲ್ಲದ ಬಾಬುಗಳಿಂದ ಸಾಧ್ಯವಾದಷ್ಟು ಆದಾಯವನ್ನು ಪಡೆಯಲು ಪ್ರಯತ್ನಿಸಿದೆಯೇ ಎಂಬುದನ್ನೂ ಕಾಣಬೇಕು. ಹೀಗೆ ಆದಾಯ ಮಾತ್ರವಲ್ಲ ; ವೆಚ್ಚದ ವಿಷಯದಲ್ಲಿಯೂ ಸಹ ಹಣ ದುಂದುಗಾರಿಕೆಯಿಲ್ಲದೆ, ಆವಶ್ಯಕ ವಾದ ಬಾಬುಗಳಿಗಾಗಿ ವೆಚ್ಚವಾಗುತ್ತಿದೆಯೇ, ಎಂಬುದನ್ನು ನೋಡಬೇಕು. ಸರಕಾರ ಮಾಡುವ ವೆಚ್ಚದಿಂದ, ದೇಶದ ರಕ್ಷಣೆಯಾಗಬೇಕು. ಅದರ ಜತೆಗೆ ಪ್ರಜೆಗಳ ಆರ್ಥಿಕಸ್ಥಿತಿ ಬಲಗೊಳ್ಳಬೇಕು. ಹೀಗೆ ಸಮಾಜದ ಭದ್ರತೆಯನ್ನು ಕಾಪಾಡಬಲ್ಲ ಅಂಶಗಳಿಗಾಗಿ ವೆಚ್ಚವನ್ನು ತೋರಿಸಿದೆಯೇ ಇಲ್ಲವೇ ಎಂಬುದನ್ನು ಪರಿಸೀಲಿಸಬೇಕು. ಇದರ ಜತೆಗೆ ಸರಕಾರದ ಹಣಕಾಸಿನ ನೀತಿ ಸರಿಯಾಗಿದೆಯೇ ? ಸರಕಾರದ ಸಾಲಸೋಲಗಳಿಗಿಂತ ಆಸ್ತಿಪಾಸ್ತಿಗಳು ಬಲವಾಗಿವೆಯೇ ? ಸರಕಾರ ಸಾಲತಂದು ಮಾಡಿರುವ ವೆಚ್ಚ ಜನರ ಅಭ್ಯುದಯಕಾರ್ಯಗಳಿಗಾಗಿಯೇ ವಿನಿಯೋಗ ವಾಗುವುದೇ ? ಆ ಕೆಲಸಗಳ ಮೂಲಧನದ ಮೊಬಲಗಿನಿಂದ, ನಗದುಹಣದ ರೂಪ ದಲ್ಲಿ ಮತ್ತು ಇತರ ವಿಧವಾಗಿ ಬರುವ ಪ್ರತಿಫಲವೇನು ? ಅದರಿಂದ ದೇಶಕ್ಕಾಗುವ ಪ್ರಯೋಜನವೇನು? ಎಂಬುದನ್ನು ಗಮನಿಸಬೇಕು. ಹೀಗೆ ಬಜೆಟ್ಟನ್ನು ನಾಲ್ಕಾರು ದೃಷ್ಟಿಗಳಿಂದ ವಿಮರ್ಶಿಸಬೇಕು. ಒಟ್ಟಿನಲ್ಲಿ ಸರಕಾರ ತನ್ನ ಆದಾಯ ಮತ್ತು ವೆಚ್ಚವನ್ನು ಸರಿಯಾದ ಮಾರ್ಗದಲ್ಲಿ ಸಮತೂಗಿಸಿರಬೇಕು. ತನ್ನ ಆಸ್ತಿಪಾಸ್ತಿ ಗಳನ್ನು ಬಲಪಡಿಸಬೇಕು. ಸಾಲದ ಹೊರೆಯನ್ನು ಕಡಿಮೆಮಾಡಲು ಪ್ರಯತ್ನಿಸ ಬೇಕು. ತನ್ನ ಹಣ ಕಾಸಿನ ನೀತಿಯಿಂದ ಜನಜೀವನವನ್ನು ಉತ್ತಮಗೊಳಿಸಲು ಪ್ರಯತ್ನಿಸಬೇಕು. ಈ ಗುಣಗಳು ಬಜೆಟ್ಟಿನಲ್ಲಿದ್ದರೆ, ಅದನ್ನು ಸರಿಯಾದ ಬಜೆಟ್ ಎಂದು ಕರೆಯಬಹುದು.

# ಪ್ರಕರಣ ೧೬

## ಇಂಡಿಯಾ ಸರಕಾರದ ಆಯವ್ಯಯ

### ಸನ್ನಿವೇಶ ಪರಿಚಯ

ಇಂಡಿಯಾ ದೇಶದ ರಾಜಕೀಯ ನಕ್ಷೆಯನ್ನು ನೋಡಿದರೆ ನಮಗೆ ಅಲ್ಲಿ ಎರಡು ಭಾಗಗಳು ಕಂಡುಬರುವುವು. ಒಂದು ಪ್ರಾಂತಭಾಗಗಳು, ಮತ್ತೊಂದು ದೇಶೀಯ ಸಂಸ್ಥಾನಗಳು. ಈ ಪ್ರಾಂತಗಳ ಮತ್ತು ದೇಶೀಯ ಸಂಸ್ಥಾನಗಳ ಇತಿಹಾಸ ಮತ್ತು ಅವುಗಳ ರಾಜಕೀಯ ರಚನೆ ಇವನ್ನು ಇಲ್ಲಿ ವಿಮರ್ಶಿಸ ಬೇಕಾದ್ದಿಲ್ಲ. ನಮ್ಮ ದೇಶದ ಸಾರ್ವಜನಿಕ ಸಂಸ್ಥೆಗಳ ಆಯವ್ಯಯ ದೃಷ್ಟಿಯಿಂದ ಇಂಡಿಯಾ ಸರಕಾರದ ಹಣಕಾಸಿನ ವ್ಯವಸ್ಥೆಯನ್ನು ಈ ಕೆಳಗೆ ಕಂಡಂತೆ ನಾವು ವಿಭಾಗಮಾಡಬೇಕು:—

೧. ಕೇಂದ್ರ ಸರಕಾರದ ಆಯವ್ಯಯ
೨. ಪ್ರಾಂತ ಸರಕಾರಗಳ ಆಯವ್ಯಯ
೩. ದೇಶೀಯ ಸಂಸ್ಥಾನಗಳ ಆಯವ್ಯಯ
೪. ಸ್ಥಳೀಯ ಸಂಸ್ಥೆಗಳ ಆಯವ್ಯಯ

ಹೀಗೆ ಇಂಡಿಯಾ ಸರಕಾರದ ಆಯವ್ಯಯ ವ್ಯವಸ್ಥೆಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದರೂ, ಇಂಡಿಯಾ ಒಂದು ರಾಷ್ಟ್ರ, ಇಲ್ಲಿಯ ಜನರ ಸಂಸ್ಕೃತಿ ನಾಗರಿಕತೆಗಳು ಒಂದು ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಪ್ರತಿಯೊಂದು ದೇಶದ ಸರಕಾರದ ಆಯವ್ಯಯ ವ್ಯವಸ್ಥೆಯೂ ಅಲ್ಲಿಯ ಸಮಾಜ, ಇತಿಹಾಸ, ರಾಜಕೀಯ ಮತ್ತು ಸ್ವಾಭಾವಿಕ ಪರಿಸ್ಥಿತಿಗಳನ್ನು ಅವಲಂಬಿಸಿಕೊಂಡಿರುತ್ತದೆ. ಇಂಡಿಯಾದೇಶದ ಬೇರೆಬೇರೆ ಸಾರ್ವಜನಿಕ ಸಂಸ್ಥೆಗಳ ಆಯವ್ಯಯ ವ್ಯವಸ್ಥೆಯು ಇಲ್ಲಿಯ ಇತಿಹಾಸ ಮತ್ತು ರಾಜಕೀಯ ಸನ್ನಿವೇಶಗಳಿಂದಲೇ ಬಹುಮಟ್ಟಿಗೆ ರೂಪುಗೊಂಡಿದೆ. ಹೀಗೆ ಸರಕಾರದ ಹಣಕಾಸಿನ ರಚನೆಯನ್ನು ನಿರ್ಧರಿಸಿರುವ ಸನ್ನಿವೇಶಗಳ ಪರಿಚಯ ಅತ್ಯಾವಶ್ಯಕ.

ನಮ್ಮ ದೇಶ ವ್ಯವಸಾಯದ ದೇಶ. ಇಂಡಿಯಾ ದೇಶದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು ಶೇ. ೭೦ ಮಂದಿಗೆ ಮೀರಿದ ಮಂದಿ ಬೇಸಾಯದಿಂದ ಜೀವನ ಮಾಡುತ್ತಾರೆ. ಇಲ್ಲಿಂದ ಹೊರಕ್ಕೆ ರಫ್ತುಮಾಡುವ ಪದಾರ್ಥಗಳಲ್ಲಿ ಬಹುಭಾಗ ಭೂಮಿಯಿಂದ ಬೆಳೆದ ಪದಾರ್ಥಗಳು ಮತ್ತು ಕಚ್ಚಾ ಮಾಲುಗಳು. ಈಚೀಚೆಗೆ ಕೈಗಾರಿಕೆ ಮತ್ತು ವ್ಯಾಪಾರದಿಂದ ಜೀವನ ಮಾಡುವವರ ಸಂಖ್ಯೆಯೇನೋ ಏರುತ್ತಿದೆ.

ಆದರೂ ಜನರ ಜೀವನದಲ್ಲಿ ವ್ಯವಸಾಯವೇ ಪ್ರಧಾನವಾದುದರಿಂದ ನಮ್ಮ ದೇಶದಲ್ಲಿ ಸರಕಾರಕ್ಕೆ ಬೇಕಾದ ಹಣದಲ್ಲಿ ಬಹು ಭಾಗವನ್ನು ಭೂಕಂದಾಯ ದಿಂದ ಕೂಡಿಸುವ ಪ್ರಯತ್ನ ಅನೂಚಾನವಾಗಿ ಬಂದಿರುತ್ತದೆ.

ದೇಶದಲ್ಲಿ ಪ್ರಕೃತಿ ಸಮೃದ್ಧಿಯಾಗಿದ್ದರೂ, ಇಲ್ಲಿಯ ಜನರು ಕಡು ಬಡವರು. ದೇಶದಲ್ಲಿನ ಸರಾಸರಿ ಆದಾಯ ತೀರ ಕಡಿಮೆ. ಇಲ್ಲಿಯ ಜನರ ಆಶೆಗಳೂ ಅಲ್ಪ ವಾದುವು. ಅವರು ತಿನ್ನುವ ತಿಂಡಿ, ಹೊದೆಯುವ ಬಟ್ಟೆ ಇವೆಲ್ಲವೂ ಬಹಳ ಸರಳತೆ ಯಿಂದ ಕೂಡಿದವು. ನಮ್ಮ ಜನರ ಸರಾಸರಿ ಆದಾಯ ಇಂಗ್ಲೆಂಡ್ ದೇಶದವರ ಆದಾಯದಲ್ಲಿ ೧/೧೩ರ ಭಾಗ. ಪಾಶ್ಚಾತ್ಯದೇಶಗಳ ಜನರು ಉಪಯೋಗಿಸುವಂತೆ ಇಲ್ಲಿಯ ಜನರು ಹೆಚ್ಚು ಭೋಗ್ಯವಸ್ತುಗಳನ್ನು ಉಪಯೋಗಿಸುವುದಿಲ್ಲ. ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್ ದೇಶಗಳಲ್ಲಿ ಹೊಗೆಸೊಪ್ಪು ಒಂದರಿಂದಲೇ ಸರಕಾರಕ್ಕೆ ಕಣ್ಣಿಗೆ ಕಾಣುವಷ್ಟು ಆದಾಯ ಹುಟ್ಟುವಳಿಯಾಗುತ್ತದೆ. ಇಂಡಿಯಾದೇಶದಲ್ಲಿಯೂ ಹೊಗೆ ಸೊಪ್ಪನ್ನು ಬೆಳೆಯುತ್ತಾರೆ; ಉಪಯೋಗಿಸುತ್ತಾರೆ. ಆದರೆ ಇತರ ದೇಶಗಳಂತೆ ಹದಗೊಳಿಸಿ ಅದಕ್ಕೊಂದು ಸೊಗಸಾದ ರೂಪವನ್ನು ಕೊಟ್ಟು ಉಪಯೋಗಿಸುವುದು ತೀರ ಕಡಿಮೆ. ಆದರಿಂದ ಹೊಗೆಸೊಪ್ಪಿನ ಮೇಲೆ ತೆರಿಗೆ ಹಾಕಿ ಹೆಚ್ಚಿನ ಆದಾಯ ವನ್ನು ಸರಕಾರದವರು ಪಡೆಯಲು ಇಲ್ಲಿ ಅವಕಾಶವಿಲ್ಲ. ಇಂಡಿಯಾ ಸರಕಾರದವರು ಜನಸಾಮಾನ್ಯವು ಸಾಮಾನ್ಯವಾಗಿ ಉಪಯೋಗಿಸುವ ಉಪ್ಪು, ಸೀಮೆಯೆಣ್ಣೆ, ಮಾದಕ ದ್ರವ್ಯಗಳು ಇವುಗಳ ಮೇಲೆ ತೆರಿಗೆಹಾಕಿ ಹೆಚ್ಚಿನ ಆದಾಯವನ್ನು ಪಡೆಯ ಬೇಕಾಗಿದೆ. ಜನರ ದಾರಿದ್ರ್ಯದಿಂದ ಆದಾಯ ತೆರಿಗೆ ರೂಪದಲ್ಲಿ ಹೆಚ್ಚಿನ ಹುಟ್ಟುವಳಿ ಯನ್ನು ಪಡೆಯುವ ಆಶೆಯೂ ಕಡಮೆಯೆಂದೇ ಹೇಳಬೇಕು. ಇತರ ದೇಶದಲ್ಲಿದ್ದಂತೆ ಆದಾಯದ ಮೇಲಿನ ತೆರಿಗೆ ಈಗ ನಾಲ್ಕಾರು ವರುಷಗಳಿಗೆ ಹಿಂದೆ ನಮ್ಮಲ್ಲಿ ಬಹು ಪ್ರಾಮುಖ್ಯವಾದ ಆದಾಯ ಸಾಧನವಾಗಿರಲಿಲ್ಲ. ಇಲ್ಲಿಯ ಜನರ ಆದಾಯ ಬಹು ಕಡಿಮೆ ಅಂತಸ್ತಿನಲ್ಲಿರುವುದರಿಂದ ಈ ವಿಧದ ತೆರಿಗೆ ಕೊಡುವ ಶಕ್ತಿಯೂ ಜನರಿಗೆ ಅಲ್ಪವಾಗಿರುತ್ತದೆ.

ನಮ್ಮ ದೇಶದಲ್ಲಿ ಸಾರ್ವಜನಿಕ ಸಂಸ್ಥೆಗಳ ಬಡ್ಜೆಟ್‌ಗಳ ನಿರ್ಮಾಣಕ್ಕೂ ಹಿಂಗಾರು ಮುಂಗಾರು ಮಳೆಗಳ ನಡವಳಿಕೆಗೂ ಪರಸ್ಪರ ಸಂಬಂಧವಿದೆ. ಈ ಸಂಬಂಧ ಸರಕಾರದ ಆಯವ್ಯಯವನ್ನು ಬಹುಮಟ್ಟಿಗೆ ರೂಪುಗೊಳಿಸುತ್ತದೆ. ದೇಶ ದಲ್ಲಿ ಸಮೃದ್ಧಿಯಾಗಿ ದವಸಧಾನ್ಯಗಳು ಬೆಳೆಯಬೇಕಾದರೆ ಸಕಾಲದಲ್ಲಿ ಮಳೆ ಗಳಾಗಬೇಕು. ಕಾಲಕ್ಕೆ ಸರಿಯಾಗಿ ಮಳೆಯಾಗಿ ಬೆಳೆ ಬೆಳೆದರೆ ರೈತನು ಯಾವ ವಿಧವಾಗಿಯಾದರೂ ಏನಾದರೂ ಸರಕಾರದ ಆದಾಯಕ್ಕೆ ತನ್ನ ಕಾಣಿಕೆಯನ್ನು ಕೊಡಲು ಸಮರ್ಥನಾಗುತ್ತಾನೆ. ಮಳೆಯಾಗದೆಹೋದರೆ ದೇಶದಲ್ಲಿ ಕ್ಷಾಮ ಅನಿವಾರ್ಯ. ಹೀಗೆ ದೇಶದಲ್ಲಿ ಬಂದೊದಗುವ ಕ್ಷಾಮಗಳನ್ನು ನಿವಾರಿಸಿ ಜನರು ಇತರ ತೊಂದರೆಗಳಿಗೆ ಸಿಕ್ಕದ ಹಾಗೆ ಮಾಡಲು ಸಾರ್ವಜನಿಕ ಸಂಸ್ಥೆಗಳು ಬೇಕಾದ ನಿವಾರಣೋಪಾಯಗಳನ್ನು ಕೈಗೊಳ್ಳುತ್ತಿವೆ. ಇದರಲ್ಲಿ ಕ್ಷಾಮನಿವಾರಣಾನಿಧಿಗಳನ್ನು ಏರ್ಪಡಿಸುವುದೂ ಒಂದು ಮಾರ್ಗ. ಒಂದುಕಡೆ ಕ್ಷಾಮ ಒದಗಿದರೆ ದೇಶದ

ಮತ್ತೊಂದು ಭಾಗದ ಸಹಾಯಸಂಪತ್ತುಗಳನ್ನು ಉಪಯೋಗಿಸಿಕೊಳ್ಳಲು ನೆರವಾಗುವಂತೆ ರಸ್ತೆಗಳನ್ನು ಬಲಪಡಿಸಿ ರೈಲ್ವೆಗಳನ್ನು ವಿಸ್ತರಿಸುವ ಪ್ರಯತ್ನವನ್ನು ಮಾಡಿದ್ದಾರೆ. ನೀರಾವರಿ ಕಾಮಗಾರಿಗಳನ್ನು ನಡೆಸಿದ್ದಾರೆ. ಜನರ ಜೀವನ ಲಾಭಕ್ಕೆ ಅವಕಾಶ ದೊರೆಯುವಂತೆ ಅಲ್ಲಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಿದ್ದಾರೆ. ಇಷ್ಟಾದರೂ ಭೂಮಿಯನ್ನು ನಂಬಿ ಅದರಿಂದ ಉತ್ಪನ್ನವಾದ ಪದಾರ್ಥಗಳಿಂದಲೇ ಜೀವನಯಾತ್ರೆಯನ್ನು ನಡೆಸುವವರ ಸಂಖ್ಯೆ ಇಂಡಿಯಾದೇಶದಲ್ಲಿ ಐದರಲ್ಲಿ ನಾಲ್ಕರಷ್ಟು ಇದೆ. ಇವರ ಜೀವನದ ಸೌಖ್ಯ ಹಿಂಗಾರು ಮುಂಗಾರು ಮಳೆಗಳನ್ನೇ ಬಲು ಮಟ್ಟಿಗೆ ಅವಲಂಬಿಸಿರುತ್ತದೆ. ಇದರಿಂದ ಸಕಾಲದಲ್ಲಿ ಮಳೆಯಾಗದಿದ್ದರೆ ವರ್ಷದ ಹುಟ್ಟುವಳಿಯನ್ನು ನಿರಕಾಗಿ ನಿರ್ಧರಿಸುವುದೇ ಸರಕಾರಕ್ಕೆ ಕಷ್ಟವಾಗುವುದು. 'ಇಂಡಿಯಾ ಸರಕಾರದ ಬಡ್ಜೆಟ್ ಮಳೆಯೊಂದಿಗೆ ನಡೆಸುವ ಅದೃಷ್ಟಪರೀಕ್ಷೆ ಅಥವಾ ಜೂಜಾಟ' ವೆಂದು ಹಿಂದೊಬ್ಬ ಸರಕಾರದ ಹಣಕಾಸಿನ ಮಂತ್ರಿಗಳು ಅಂದಿದ್ದರು. ಇದು ನಿಜ. ಈಚೆಗೆ ಸ್ಥಾಪಿತವಾಗುತ್ತಿರುವ ಕೈಗಾರಿಕೆಗಳೂ, ನಡೆಯುತ್ತಿರುವ ನೀರಾವರಿ ಕಾಮಗಾರಿಗಳೂ ಆಯವ್ಯಯ ವ್ಯವಸ್ಥೆಯಲ್ಲಿ ಹೆಚ್ಚಿನ ಬದಲಾವಣೆಗಳನ್ನೇನೋ ಉಂಟುಮಾಡಿವೆ. ಹೀಗಿದ್ದರೂ ನಮ್ಮ ದೇಶದಲ್ಲಿ ಸರಕಾರದ ಆಯವ್ಯಯದ ನಿಷ್ಕರ್ಷೆಯಲ್ಲಿ ಹಿಂಗಾರು ಮುಂಗಾರು ಮಳೆಗಳ ಪ್ರಭಾವ ಇನ್ನೂ ಅದೃಶ್ಯವಾಗಿ ಹಣಕಾಸಿನ ಆಡಳಿತವನ್ನು ನಿರ್ವಹಿಸುವವರ ಕಾತುರತೆ ತಪ್ಪಿಲ್ಲ.

ಅಕಾಲವೃಷ್ಟಿ, ಮತ್ತು ಅನಾವೃಷ್ಟಿಯಿಂದ ಕೇಂದ್ರ ಸರ್ಕಾರ, ಪ್ರಾಂತ ಸರ್ಕಾರ, ದೇಶೀಯ ಸಂಸ್ಥಾನಗಳ ಸರ್ಕಾರ, ಮತ್ತು ಕೇಂದ್ರಸರ್ಕಾರದ ಆದಾಯವನ್ನೇ ಅವಲಂಬಿಸಿದ ಜೀವಿಸುವ ಸ್ಥಳೀಯ ಸಂಸ್ಥೆಗಳು ಈ ಸಾರ್ವಜನಿಕ ಸಂಸ್ಥೆಗಳಿಗೆ ತಮ್ಮ ಆದಾಯ ವೆಚ್ಚವನ್ನು ಸರಿತೂಗಿಸಲು ಅನೇಕ ವೇಳೆ ಬಲು ತೊಂದರೆಯಾಗುತ್ತದೆ. ಮಳೆಯಾಗದಿದ್ದರೆ ಪ್ರಾಂತಸರ್ಕಾರಗಳು ಕಂದಾಯ ಮಾಫಿಮಾಡಬೇಕಾಗುವುದು. ಕ್ಷಾಮನಿವಾರಣೋಪಾಯಗಳಿಗೆ ಹಣವೆಚ್ಚಮಾಡಬೇಕಾಗುವುದು. ವರ್ಷಂಪ್ರತಿ ಮಾಡದಿದ್ದ ಕೆಲಸಗಳಿಗಾಗಿ ಹೆಚ್ಚಿನ ಹಣ ಖರ್ಚುಮಾಡಬೇಕಾಗುವುದು. ಜನರ ಜೀವನಕ್ಕೆ ಕಷ್ಟವಾದ ಈ ಕಾಲದಲ್ಲಿ ಮಾದಕದ್ರವ್ಯಗಳ ಮಾರಾಟದಿಂದ ಬರುವ ಆದಾಯವೂ ದೊರೆಯುವುದು ಕಷ್ಟವಾಗುತ್ತದೆ. ಹೀಗೆ ಪ್ರಾಂತಸರ್ಕಾರಗಳ ಹುಟ್ಟುವಳಿ ಕಡಿಮೆಯಾಗುತ್ತದೆ. ಕೇಂದ್ರ ಸರ್ಕಾರದ ಹಣಕಾಸಿನ ಸ್ಥಿತಿಯಲ್ಲಿಯೂ ಹೀಗೆಯೇ ಮುಗ್ಗಟ್ಟು ಬಂದೊದಗುವುದು. ಕ್ಷಾಮತಲೆದೋರಿತೆಂದರೆ ಜನಸಾಮಾನ್ಯದಲ್ಲಿ ಪದಾರ್ಥಗಳನ್ನು ಕೊಳ್ಳುವ ಶಕ್ತಿ ಕುಗ್ಗುತ್ತದೆ. ದೇಶದೊಳಕ್ಕೆ ಆಮದಾಗುವ ಪದಾರ್ಥಗಳ ಮೊತ್ತ ತಗ್ಗುವುದು. ಇದರಿಂದ ಕ್ರಮೇಣ ರೈಲ್ವೆಗಳಿಂದಲೂ, ವ್ಯಾಪಾರದಿಂದಲೂ ಬರುವ ಆದಾಯ ಕುಗ್ಗುತ್ತದೆ. ಸುಂಕ, ರೈಲ್ವೆ ಆದಾಯ ಮತ್ತು ಆದಾಯದ ತೆರಿಗೆಗಳಿಂದ ಕೇಂದ್ರ ಸರ್ಕಾರಕ್ಕೆ ಬಹುಮಟ್ಟಿನ ಆದಾಯ ಬರುತ್ತದೆ. ಹೀಗೆ ಕಾಲಕಾಲಕ್ಕೆ ಮಳೆಯಾಗದೆ ಕ್ಷಾಮ ತಲೆದೋರಿದಾಗ ಸರಕಾರದ ಆದಾಯ ತಲೆಕೆಳಗಾಗುವ ಸಂಭವ ಸಾಮಾನ್ಯ.

ಇಂಡಿಯಾ ದೇಶದಲ್ಲಿ ಸಾರ್ವಜನಿಕ ಆದಾಯ ವೆಚ್ಚಗಳನ್ನು ಬದಲಾಯಿಸುವ ಮತ್ತೊಂದು ಸನ್ನಿವೇಶದ ಪ್ರಭಾವವೂ ಉಂಟು. ಕಳೆದ ಶತಮಾನದಲ್ಲಿ ನಮ್ಮ ದೇಶದಲ್ಲಿ ಸರಕಾರದ ಅಧಿಕಾರವು ಕೇಂದ್ರೀಕೃತವಾಗಿತ್ತು. ಈ ಸಂಪ್ರದಾಯ ಈಚೆಗೆ ಬದಲಾವಣೆಯನ್ನು ಹೊಂದುತ್ತಿದೆ. ಹಿಂದಿನ ಕಾಲದಲ್ಲಿದ್ದ ಒಮ್ಮುಖದ ಗ್ರಾಮಜೀವನವು ಈಗ ಮಾಯವಾಗಿದೆ. ಆತ್ಮಾವಲಂಬನ ಶಕ್ತಿಯಿಂದ ಮೆರೆಯುತ್ತಿದ್ದ ಹಳ್ಳಿಗಾಡಿನವರು ಈಗ ತಮ್ಮ ಸುಖಸಂತೋಷ ಅಭ್ಯುದಯಗಳಿಗೆ ಬೇಕಾದ ಅನುಕೂಲಗಳನ್ನು ತಾವೇ ಕಲ್ಪಿಸಿಕೊಳ್ಳುವುದನ್ನು ಬಿಟ್ಟು ಸರ್ವವ್ಯಾಪಿಯೂ, ಸರ್ವಶಕ್ತವೂ ಆದ ಸರಕಾರದ ಕಡೆಯಿಂದ ಸಹಾಯವನ್ನು ಬಯಸುತ್ತಾರೆ. ಆದರೆ ಈ ಶತಮಾನದಲ್ಲಿ ಆ ಹಿಂದಿನ ಸಮಾಜವನ್ನು ಬಲಪಡಿಸುವುದಕ್ಕಾಗಿ ಮತ್ತು ಕೇಂದ್ರ ಸರಕಾರದ ಕೆಲಸವನ್ನು ಕಡಮೆ ಮಾಡುವುದಕ್ಕಾಗಿ, ಗ್ರಾಮ ಪಂಚಾಯತಿ, ತಾಲ್ಲೂಕ್ ಬೋರ್ಡ್, ಜಿಲ್ಲಾ ಬೋರ್ಡ್, ಮ್ಯುನಿಸಿಪಾಲಿಟಿ ಮೊದಲಾದ ಸ್ಥಳೀಯ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಅವುಗಳಿಗೆ ಬೇಕಾದ ಹಣಕಾಸು, ಮತ್ತು ಸ್ವತಂತ್ರ ಅಧಿಕಾರ ಇವು ಇಲ್ಲದಿರುವುರಿಂದ ಈ ಸಂಸ್ಥೆಗಳ ಕೆಲಸವು ಹೆಚ್ಚು ತೃಪ್ತಿಕರವಾಗಿಲ್ಲವೆಂದು ಹೇಳಬೇಕು. ಆದರೂ ಈ ಸಂಸ್ಥೆಗಳ ಬೆಳವಣಿಗೆಯಿಂದ ಇಂಡಿಯಾ ಸರಕಾರದ ಆಯವ್ಯಯ ಪರಿಸ್ಥಿತಿಯಲ್ಲಿ ಕೆಲವು ಬದಲಾವಣೆಗಳು ಅನಿವಾರ್ಯವಾಗಿ ತಲೆದೋರುತ್ತವೆ.

ಇಲ್ಲಿಯ ಸಾರ್ವಜನಿಕ ಸಂಸ್ಥೆಗಳ ಹಣಕಾಸಿನ ರಚನೆಯು, ಇತಿಹಾಸಕ್ಕೆ ಸಂಬಂಧಪಟ್ಟ ಕೆಲವು ಸಂಗತಿಗಳ ಪ್ರಭಾವಕ್ಕೆ ಒಳಗಾಗಿದೆ. ಇಲ್ಲಿಯ ಆಯವ್ಯಯ ಸ್ಥಿತಿಯನ್ನು ಪರಿಶೀಲಿಸುವವರಿಗೆ ಇದು ಸ್ಪಷ್ಟವಾಗಿ ಗೋಚರವಾಗುವುದು. ಇಂಡಿಯಾ ಸರಕಾರದ ಆಯವ್ಯಯ ರಚನೆಯಲ್ಲಿ ಆಗಾಗ ಕೆಲವು ಮುಖ್ಯವಾದ ಬದಲಾವಣೆಗಳಾಗಿ, ಪ್ರಾಂತಗಳಲ್ಲಿನ ತೆರಿಗೆಯ ವಿಭಾಗದಲ್ಲಿ ಒಂದು ವಿಧವಾದ ಅಸಮತೆಯುಂಟಾಗಿದೆ. ನಮ್ಮ ಆಯವ್ಯಯದ ಅಚ್ಚುಕಟ್ಟು, ತೆರಿಗೆಯ ಹೊರೆ ಜನರ ಮೇಲೆ ಒಟ್ಟಿನಲ್ಲಿ ಒಂದು ಸಮನಾಗಿ ಬೀಳುವ ರೀತಿ, ಬೆಳೆದು ಬಂದಿಲ್ಲ. ದೇಶದಲ್ಲಿರುವ ಸಂಪತ್ತನ್ನೂ, ಬರುವ ಆದಾಯವನ್ನೂ ಸ್ವಲ್ಪ ಹೆಚ್ಚು ಕಡಮೆ ದೇಶದ ಜನರೆಲ್ಲರೂ ಅನಭವಿಸುವ ಬದಲು, ಕೆಲವರು ಸುಖ ಸಾಮ್ರಾಜ್ಯದಲ್ಲಿ ತೇಲಿ ಇತರರು ಸೊಕ್ಕಿ ಸೊರಗುವಂತೆ ಇದೆ. ತೆರಿಗೆ ಹೊರೆಯನ್ನು ಹೊರಲು ಹೆಚ್ಚು ಶಕ್ತಿಯಿಲ್ಲದವರಿಂದ ಸಾರ್ವಜನಿಕ ಸಂಸ್ಥೆಗಳು ಹೆಚ್ಚು ಆದಾಯವನ್ನು ಪಡೆಯುವುದು ವಾಡಿಕೆಯಲ್ಲಿದೆ. ಭೂಮಿಯನ್ನು ಉತ್ತು ಬಿತ್ತಿ ಬೇಸಾಯ ಮಾಡುವ ಬಡ ರೈತನು ತಾನು ಅನುಭವಿಸುವ ಜಮೀನಿಗೆ ವರ್ಷಂಪ್ರತಿ ತೆರಿಗೆ ಸಲ್ಲಿಸಬೇಕು. ತಾನು ಉಪಯೋಗಿಸುವ ಉಪ್ಪು, ಸಕ್ಕರೆ, ಸೀಮೆ ಎಣ್ಣೆ, ಬಟ್ಟೆ, ಬೆಂಕಿ ಪೆಟ್ಟಿಗೆ ಮೊದಲಾದ ಸರಕುಗಳ ಮೇಲೆ ತೆರಿಗೆ ಪಾವತಿಮಾಡಬೇಕು. ವಂಶಪಾರಂಪರ್ಯವಾಗಿ ತನಗೆ ಬಂದಿರುವ ನೂರಾರು ಎಕರೆ ಜಮೀನನ್ನೋ ಗ್ರಾಮಗಳನ್ನೋ ಅನುಭವಿಸುತ್ತಿರುವ ಜಮೀನ್ದಾರನು, ದೇಶದ ಕೆಲವು ಭಾಗಗಳಲ್ಲಿ ನೂರಾರು ವರ್ಷಗಳಿಂದ ಹಿಂದೆ ಗೊತ್ತುಮಾಡಲ್ಪಟ್ಟ, ಎಂದಿಗೂ ಬದಲಾಯಿಸಲ್ಪಡದ

ಭೂಕಂದಾಯವನ್ನು ಮಾತ್ರ ಸರಕಾರಕ್ಕೆ ಸಲ್ಲಿಸುತ್ತಾನೆ. ಇದು ವ್ಯವಸಾಯದಿಂದ ಬರುವ ಆದಾಯವನ್ನು ಅರಿತು ವಿಧಿಸುವ ತೆರಿಗೆಯಲ್ಲ. ಅಲ್ಲದೆ ಈ ಜಮೀನ್‌ದಾರರು ಪಾಶ್ಚಾತ್ಯ ದೇಶಗಳಂತೆ ಆಸ್ತಿ ತೆರಿಗೆಗಳನ್ನು ಕೊಡಬೇಕಾಗಿಲ್ಲ. ಸಂಪತ್ತು ಒಂದು ಕಡೆಯೇ ನಿಂತು, ಬೆಳೆದು ಸಾಮಾನ್ಯ ಜನಜೀವನಕ್ಕೆ ಉಪಯೋಗವಾಗದೇ ಇರಲು, ನಮ್ಮ ಸರಕಾರದ ಆಯವ್ಯಯ ಕ್ರಮವೂ ಒಂದು ಕಾರಣವೆನ್ನಬಹುದು.

ಜನಜೀವನದ ಮಟ್ಟವೇರಲು ಸಾಧಕವಾಗುವಂತೆ ಆಯವ್ಯಯವನ್ನು ರಚಿಸುವುದು ಆವಶ್ಯಕ. ತೆರಿಗೆ ಹೊರೆಯನ್ನು ಹೊರಲು ಶಕ್ತಿಯಿರುವವರ ಮೇಲೆ ಹೆಚ್ಚಿನ ತೆರಿಗೆ ಹಾಕುವುದರಿಂದ ಹುಟ್ಟುವಳಿಯ ಮೊತ್ತವೂ ಹೆಚ್ಚುವ ಸಂಭವವಿದೆ. ಆದರೆ ನಮ್ಮ ದೇಶದ ಚರಿತ್ರೆಯಲ್ಲುಂಟಾದ ಕೆಲವು ಸಂಘಟನೆಗಳಿಗೆ ಅನುಗುಣವಾಗಿ ನಮ್ಮ ಸಾರ್ವಜನಿಕ ಆಯವ್ಯಯದ ಅಚ್ಚುಕಟ್ಟು ಆಗಾಗ್ಗೆ ಕೆಲವು ಬದಲಾವಣೆಗಳನ್ನು ಹೊಂದಬೇಕಾಯಿತು. ಇದರಿಂದ ಸರಕಾರದ ಆಯವ್ಯಯದ ನೀತಿ ಒಂದೇ ವಿಧವಾಗಿ, ಜನಾಂಗದ ಸಂಪದಭಿವೃದ್ಧಿ ಮಾರ್ಗವನ್ನು ಹೊಂದಿಕೊಂಡು ಬೆಳೆಯಲು ಸಾಧ್ಯವಿಲ್ಲದೆ ಹೋಯಿತು. ರಾಜಕೀಯ ಸುಧಾರಣೆಗಳಿಂದ ಸರಕಾರದ ಆಯವ್ಯಯಸ್ಥಿತಿಯಲ್ಲಿ ಆಗಾಗ ಉಂಟಾದ ವ್ಯತ್ಯಾಸಗಳನ್ನು ಪರಿಶೀಲಿಸುವುದರಿಂದ ಈ ವಿಷಯ ಸ್ಪಷ್ಟವಾಗಿ ಗೋಚರವಾಗುತ್ತದೆ.



# ಪ್ರಕರಣ ೧೭

## ರಾಜಕೀಯ ಸುಧಾರಣೆ ಮತ್ತು ಆಯವ್ಯಯ ಕ್ರಮ

ಇಂಡಿಯಾ ಸರಕಾರ ಒಂದು ರಾಜಕೀಯ ರೂಪವನ್ನು ತಾಳಿದ್ದು ೧೮೫೮ ರಲ್ಲಿ. ಆಗ ಇಂಡಿಯಾ ದೇಶದ ಮೇಲಿನ ಪೂರ್ಣಾಧಿಕಾರವು ಈಸ್ಟ್ ಇಂಡಿಯಾ ಕಂಪನಿಯಿಂದ ಬ್ರಿಟಿಷ್ ಸಾರ್ವಭೌಮ ಸರಕಾರಕ್ಕೆ ಸೇರಿತು. ಅದುವರೆಗೆ ಇಂಡಿಯಾ ದೇಶದ ಆಡಳಿತವನ್ನು ನೋಡುತ್ತಿದ್ದ ಸಮಿತಿಯ ಅಧ್ಯಕ್ಷಸ್ಥಾನದಲ್ಲಿ ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ ಎಂಬ ಮಂತ್ರಿಯೊಬ್ಬರನ್ನು ನೇಮಿಸ ಲಾಯಿತು. ಅವರಿಗೆ ಇಂಡಿಯಾ ದೇಶದ ಆಡಳಿತದ ಜತೆಗೆ ಇಲ್ಲಿಯ ಸರಕಾರದ ಆಯವ್ಯಯದ ವಿಷಯದಲ್ಲಿ ಕೊನೆಯ ಮಾತನ್ನು ಹೇಳುವ ಹೆಚ್ಚಿನ ಅಧಿಕಾರ ದೊರೆಯಿತು. ನಮ್ಮ ಸರಕಾರದ ಆಯವ್ಯಯ ರಚನೆಯಲ್ಲಿ ಅಂದಿನಿಂದ ಇದು ವರೆಗೆ ಅನೇಕ ಬದಲಾವಣೆಗಳುಂಟಾಗಿವೆ.* ಇವುಗಳನ್ನು ಸ್ಥೂಲವಾಗಿ ನಾಲ್ಕು ಭಾಗಗಳಾಗಿ ಮಾಡಬಹುದು.

ಇಲ್ಲಿಯ ರಾಜಕೀಯ ಚಳುವಳಿಯ ಪ್ರಭಾವದಿಂದ ನಮ್ಮ ದೇಶದ ಸರಕಾರದ ಆಯವ್ಯಯದ ಮೇಲೆ ಬ್ರಿಟಿಷ್ ಪಾರ್ಲಿಮೆಂಟ್ ಮತ್ತು ಇಲ್ಲಿರುವ ಅದರ ಪ್ರತಿನಿಧಿಗಳಿಗೆ ಇದ್ದ ಆಡಳಿತದ ಅಧಿಕಾರವು ಕ್ರಮೇಣ ಸಡಿಲವಾಗುತ್ತ ಬಂದಿದೆ. ಮೊದಮೊದಲು ತೆರಿಗೆಯನ್ನು ನಿರ್ಧಾರ ಮಾಡಿ ವೆಚ್ಚವನ್ನು ನಿಷ್ಕರ್ಷೆ ಮಾಡುವ ಅಧಿಕಾರ ನಮ್ಮ ಶಾಸನ ಸಭೆಗಳಿಗೆ ಇರಲೇ ಇಲ್ಲ. ಸೈನ್ಯ, ಪೋಲೀಸ್, ಒಳಾಡಳಿತ, ಶಿಸ್ತು ಮತ್ತು ಕಾನೂನಿನ ಪಾಲನೆ ಇವುಗಳಿಗಾಗಿ ಬೇಕಾಗುವ ಹಣವನ್ನು ಜನರಿಂದ ಬ್ರಿಟಿಷ್ ಪ್ರತಿನಿಧಿಗಳ ಸೂಚನೆಯಂತೆ ಸಂಗ್ರಹಿಸಿ ವೆಚ್ಚಮಾಡುವುದು ಸರಕಾರದ ಮುಖ್ಯ ಕೆಲಸವಾಗಿತ್ತು. ೧೯೧೯ನೆಯ ಇಸವಿಯ ವರೆಗೂ, ಇಂಡಿಯಾ ದೇಶದಲ್ಲಿ ಚಕ್ರವರ್ತಿ ಸಾರ್ವಭೌಮರ ಪ್ರತಿನಿಧಿಯಾದ ವೈಸ್ ರಾಯ್ ಮತ್ತು ಗವರ್ನರ್ ಜನರಲ್‌ರವರು ಯಾವ ವರುಷದಲ್ಲಿ ಎಷ್ಟು ಹಣವನ್ನು ಖರ್ಚುಮಾಡಬಹುದು, ಯಾವ ವಿಧದ ತೆರಿಗೆಗಳನ್ನು ಹೇಗೆ ಹಾಕಬೇಕು. ಸಾಲವನ್ನು ಯಾವ ನಿಬಂಧನೆಗಳನ್ನನುಸರಿಸಿ ಎತ್ತಬೇಕು, ಇವೇ ಮೊದಲಾದ ವಿಷಯಗಳನ್ನು ತೀರ್ಮಾನಮಾಡಿ ಇಂಗ್ಲೆಂಡಿನಲ್ಲಿರುವ ಇಂಡಿಯಾ ದೇಶದ ಮಂತ್ರಿ

---

* ಈಚಿನ ಯುದ್ಧದ ಪರಿಣಾಮದಿಂದ ಮತ್ತು ೧೯೪೭ರಲ್ಲಿ ದೊರೆತ ಸುಧಾರಣೆಗಳಿಂದ ಸರಕಾರದ ಆಯವ್ಯಯ ವ್ಯವಸ್ಥೆಯಲ್ಲಿ ಉಂಟಾಗಿರುವ ಬದಲಾವಣೆಯನ್ನು ಇಲ್ಲಿ ಸೂಚಿಸಿರುವುದಿಲ್ಲ. ಈಚಿನ ಆಯವ್ಯಯಕ್ಕೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಪ್ರತ್ಯೇಕ ವಾಗಿ ಅನುಬಂಧದಲ್ಲಿ ಕೊಟ್ಟಿದೆ.

(Secretary of State for India) ಅಪ್ಪಣೆ ಮಾಡುತ್ತಿದ್ದರು. ೧೯೧೯ ರಲ್ಲಿ ದೊರೆತ ಮಾಂಟೆಗೂ ಚೆರ್ಮ್ಸ್‌ಫರ್ಡ್ ಸುಧಾರಣೆಗಳಿಂದ, ಏಳು ಸಾವಿರ ಮೈಲಿ ದೂರದಲ್ಲಿ ಇಂಡಿಯಾ ಸರಕಾರದ ಮೇಲ್ವಿಚಾರಣ ಮಂತ್ರಿಯು ಕೈಲಿದ್ದ ಈ ಅಧಿಕಾರವು ಬಲುಮಟ್ಟಿಗೆ ಕಡಮೆಯಾಯಿತು. ಈ ಸುಧಾರಣೆಗಳನ್ನು ವಿಮರ್ಶೆಮಾಡಿ ಬ್ರಿಟಿಷ್ ಪಾರ್ಲಿಮೆಂಟಿನ ಸಮಿತಿಯವರು, ಇಂಡಿಯಾ ದೇಶದ ಶಾಸನಸಭೆಗಳಿಗೆ ತಮ್ಮ ಸರಕಾರದ ಹಣಕಾಸನ್ನು ವ್ಯವಸ್ಥೆಗೊಳಿಸುವ ಅಧಿಕಾರವಿರಬೇಕೆಂದು ಅಭಿಪ್ರಾಯಪಟ್ಟರು. ಅಲ್ಲದೆ ಇಲ್ಲಿನ ಶಾಸನ ಸಭೆಗೂ, ಸರಕಾರಕ್ಕೂ ಸಮ್ಮತವಾದ ತೀರ್ಮಾನಗಳಲ್ಲಿ ಇಂಗ್ಲೆಂಡಿನಲ್ಲಿರುವ ಇಂಡಿಯಾ ಸರಕಾರದ ಮಂತ್ರಿಯು ಕೈಹಾಕ ಬಾರದೆಂದು ಸಮಿತಿಯವರು ಸೂಚಿಸಿದರು. ೧೯೩೫ರ ರಾಜಕೀಯ ಸುಧಾರಣೆ ಗಳಿಂದ ಪ್ರಾಂತ ಸರಕಾರಗಳ ಶಾಸನ ಸಭೆಗಳಿಗೆ ಅಲ್ಲಿಯ ಆಯವ್ಯಯದ ವಿಷಯದಲ್ಲಿ ಪೂರ್ಣವಾದ ಅಧಿಕಾರ ದೊರೆಯಿತು. ಇಷ್ಟಾದರೂ ವೆಚ್ಚದ ಬಾಬು ಗಳಲ್ಲಿ ಶಾಸನ ಸಭೆಯ, ಅಪ್ಪಣೆಯನ್ನು ಪಡೆಯಬೇಕಾದುವು ಕೆಲವು, ಸಭೆಯ ಒಪ್ಪಿಗೆಯಿಲ್ಲದೆಯೇ ಖರ್ಚುಮಾಡಬಹುದಾದ ಬಾಬುಗಳು ಕೆಲವು, ಎಂಬ ವಿಂಗಡಣೆ ಉಳಿಯಿತು. ಕಾಲ ಪರಿಸ್ಥಿತಿಯನ್ನು ಅನುಸರಿಸಿ, ಶಾಸನ ಸಭೆಯ ಒಪ್ಪಿಗೆ ದೊರೆಯದಿದ್ದರೂ, ಹೊಸತೆರಿಗೆಯನ್ನು ಹಾಕುವುದಕ್ಕಾಗಲಿ, ಅದನ್ನು ಹೆಚ್ಚು ಮಾಡುವುದಕ್ಕಾಗಲಿ, ಸಂಗ್ರಹಿಸಿದ ಹಣವನ್ನು ವೆಚ್ಚಮಾಡುವುದಕ್ಕಾಗಲಿ, ಇಂಡಿಯಾ ದೇಶದ ಸಾರ್ವಭೌಮರಿಂದ ನೇಮಿಸಲ್ಪಟ್ಟ ಗವರ್ನರ್ ಮತ್ತು ಗವರ್ನರ್ ಜನರಲ್ ಅವರಿಗೆ ವಿಶೇಷಾಧಿಕಾರವುಂಟು. ಇದರಿಂದ ನಮ್ಮ ದೇಶದ ಪ್ರಾಂತ ಸರಕಾರವೇ ಆಗಲಿ, ಕೇಂದ್ರ ಸರಕಾರವೇ ಆಗಲಿ, ಪಡೆಯುವ ಆದಾಯ ಮತ್ತು ಮಾಡುವ ಖರ್ಚು, ಇವುಗಳನ್ನು ಹೀಗೆಯೇ ಎಂದು ತೀರ್ಮಾನ ಮಾಡುವ ಅಧಿಕಾರ ಸಂಪೂರ್ಣವಾಗಿ ಪ್ರಜೆಗಳಿಗೇ ಇದೆಯೆಂದು ಹೇಳುವುದು ಕಷ್ಟ.

ಇಂಡಿಯಾ ಸರಕಾರದ ಆಯವ್ಯಯ ವ್ಯವಸ್ಥೆ ಮೊದಲು ಕೇಂದ್ರೀ ಕೃತವಾಗಿದ್ದು, ಕ್ರಮೇಣ ನಮಗೆ ದೊರೆತ ಸುಧಾರಣೆಗಳ ಪರಿಣಾಮ ವಾಗಿ, ಪ್ರಾಂತ ಮತ್ತು ಕೇಂದ್ರಗಳೆಂಬ ವಿಭಜನೆಯನ್ನು ಪಡೆಯಿತು. ೧೮೭೧ ನೆಯ ಇಸವಿಗೆ ಮುಂಚೆ ಕೇಂದ್ರ ಸರಕಾರದ ಹಿಡಿತಕ್ಕೆ ಸಿಕ್ಕಿದ್ದ ಪ್ರಾಂತ ಸರಕಾರ ಗಳು ಯಾವ ವಿಧವಾದ ಜವಾಬ್ದಾರಿಯನ್ನೂ ವಹಿಸಲು ಶಕ್ತಿಯಿಲ್ಲದೆ, ತಮ್ಮ ಕೆಲಸವನ್ನು ನಿರ್ವಾಹಮಾಡಲು ಸಾಮರ್ಥ್ಯವಿಲ್ಲದಂತಿದ್ದುವು. ಪ್ರಾಂತ ಸರಕಾರಗಳ ಹುಟ್ಟುವಳಿ ಕಡಿಮೆಯಾಯಿತು. ವೆಚ್ಚ ಒಂದೇ ಸಮನಾಗಿ ನಿಂತಿತು. ಸರಕಾರದ ಕೆಲಸಗಳು ಸುಸೂತ್ರವಾಗಿ ನಡೆಯದಂತಾದುವು. ೧೮೭೧ ರಲ್ಲಿ ಪ್ರಾಂತಗಳಿಗೆ ಅನ್ವಯಿಸುವ ಹಣಕಾಸಿನ ವ್ಯವಸ್ಥೆಯೊಂದನ್ನು ಮಾಡಿ, ಸ್ಥಳೀಯ ವಿದ್ಯಮಾನಗಳನ್ನು ಅನುಸರಿಸಿ ಮಾಡಬೇಕಾದ ವೆಚ್ಚವನ್ನು ಪ್ರಾಂತ ಗಳಿಗೇ ವಹಿಸಿದರು. ಕೆಲವು ಆದಾಯದ ಬಾಬುಗಳಲ್ಲಿ ಉತ್ಪನ್ನವಾದ ಹಣದ ಜತೆಗೆ, ಕೇಂದ್ರ ಸರಕಾರ ಸಹಾಯ ದ್ರವ್ಯವನ್ನು ಕೊಡುವ ನೀತಿಯನ್ನು ಅನು ಸರಿಸಿತು. ೧೯೧೯ ನೆಯ ಇಸವಿಯ ವರೆಗೂ ಈ ಆಯವ್ಯಯ ವ್ಯವಸ್ಥೆಯಲ್ಲಿ

ಆಗಾಗ್ಗೆ ಕೆಲವು ಬದಲಾವಣೆಗಳಾದರೂ, ಕೇಂದ್ರ ಸರಕಾರದಿಂದ ಪ್ರಾಂತ ಸರಕಾರ ಪ್ರತ್ಯೇಕವಾಗಲಿಲ್ಲ. ಪ್ರಾಂತ ಮತ್ತು ಕೇಂದ್ರ, ಈ ಎರಡು ಸರಕಾರಗಳಿಗೂ ಒಂದೇ "ಬಡ್ಜೆಟ್" ನಿರ್ಮಾಣವಾಗುತ್ತಿತ್ತು. ೧೯೧೯ ರಲ್ಲಿ ದೊರೆತ ಮಾಂಟೆಗೂ ಚೆಲ್ಮ್ಸ್ ಫರ್ಡ್ ಸುಧಾರಣೆಗಳಿಂದ ಪ್ರಾಂತ ಸರಕಾರಗಳ ಆಯುವ್ಯಯು ಕೇಂದ್ರ ಸರಕಾರದ ಆಯುವ್ಯಯದಿಂದ ಬೇರೆಯಾಯಿತು. ಇದರಿಂದ ಇಂಡಿಯಾ ಸರಕಾರದ ಎರಡು ಭಾಗಗಳ ಆಯುವ್ಯಯು ಬಾಬುಗಳ ವಿಂಗಡಣೆ ಆವಶ್ಯಕವಾಯಿತು. ಅಲ್ಲದೆ ಸಂಯುಕ್ತ ರಾಜ್ಯಾಂಗ ರಚನೆಗೆ ತಳಹದಿ ಹಾಕಿದಂತಾಯಿತು. ೧೯೩೫ರ ಇಂಡಿಯಾ ಸರಕಾರದ ಕಾನೂನಿನಿಂದ ಪ್ರಾಂತ ಸ್ವಾತಂತ್ರ್ಯ ದೊರೆತು, ಆಯುವ್ಯಯ ವ್ಯವಸ್ಥಾಕ್ರಮ ಮತ್ತಷ್ಟು ಸಡಿಲಗೊಂಡಿತು.

ಇತರ ದೇಶಗಳ ಸರಕಾರಗಳ ವೆಚ್ಚ ಹೆಚ್ಚುತ್ತಿರುವಂತೆ ನಮ್ಮ ದೇಶದ ವೆಚ್ಚವೂ ಈಚೆಗೆ ಹೆಚ್ಚುತ್ತ ಬಂದಿದೆ. ಇದಕ್ಕೆ ಬೇಕಾದ ಹಣವನ್ನು ಸಂಗ್ರಹಿಸುವುದಕ್ಕಾಗಿ ಬೇರೆ ಬೇರೆ ಮಾರ್ಗಗಳನ್ನು ಅನುಸರಿಸಬೇಕಾಗಿದೆ. ಮಾಂಟೆಗೂ ಚೆಲ್ಮ್ಸ್ ಫರ್ಡ್ ಸುಧಾರಣೆಗಳು ಜಾರಿಗೆ ಬಂದ ತರುವಾಯ ಸರಕಾರದ ಆದಾಯ ಸಾಧನೋಪಾಯಗಳಲ್ಲಿ ಬದಲಾವಣೆ ಉಂಟಾದುವು. ಭೂಕಂದಾಯ, ಎಕ್ಸೈಜ್, ಅಫೀಂ, ಇವೇ ಮೊದಲಾದ ತೆರಿಗೆಗಳ ಪ್ರಾಧಾನ್ಯ ಕಡಿಮೆಯಾಗಿ, ಆದಾಯ ತೆರಿಗೆ, ಅಧಿಕ ಲಾಭದ ತೆರಿಗೆ, ವ್ಯಾಪಾರದ ತೆರಿಗೆ, ಮೊದಲಾದುವುಗಳ ಪ್ರಾಮುಖ್ಯ ಹೆಚ್ಚಿದೆ. ಸಮಾಜ ಜೀವನವನ್ನು ಉತ್ತಮಗೊಳಿಸಲು ಬೇಕಾದ ವಿದ್ಯಾಭ್ಯಾಸ, ವೈದ್ಯಸಹಾಯ, ಆರೋಗ್ಯ, ಸಂಪದಭಿವೃದ್ಧಿ ಕಾರ್ಯಗಳಿಗಾಗಿ ಹೆಚ್ಚು ಹಣ ವೆಚ್ಚವಾಗುತ್ತಿದೆ. ಹೀಗೆ ಸಾರ್ವಜನಿಕ ಆಯುವ್ಯಯು ಆಧುನಿಕ ಮಾರ್ಗದ ಕಡೆಗೆ ತಿರುಗಿದೆ.

ಈ ಶತಮಾನದಲ್ಲಿ ನಮ್ಮ ಸರಕಾರದ ಆಯುವ್ಯಯದ ನೀತಿಯಲ್ಲಿ ಕೆಲವು ಬದಲಾವಣೆಗಳಾಗಿವೆ. ಉದಾಹರಣೆಗೆ :—ಇಂಡಿಯಾ ದೇಶದಲ್ಲಿ ಒಂದಾನೊಂದು ಕಾಲದಲ್ಲಿ ಪ್ರಾಧಾನ್ಯವಾಗಿದ್ದ ಸ್ಥಳೀಯ ಸಂಸ್ಥೆಗಳು ಕಾರಣಾಂತರಗಳಿಂದ ನಶಿಸಿಹೋಗಿದ್ದು, ಈಗ ಪ್ರಬಲಗೊಳ್ಳುತ್ತಿವೆ. ಇದರಿಂದ ಸ್ಥಳೀಯ ಸಂಸ್ಥೆಗಳಿಗೂ ಪ್ರಾಂತ ಸರಕಾರಗಳಿಗೂ ಒಂದು ಹೊಸ ಸಂಬಂಧ ಕಲ್ಪಿತವಾಗಿದೆ. ಸ್ಥಳೀಯ ಸಂಸ್ಥೆಗಳ ಆಡಳಿತ ನಿರ್ವಾಹಕ್ಕಾಗಿ ಬೇಕಾಗುವ ಹಣವನ್ನು ಒದಗಿಸಲು ಕೆಲವು ಆದಾಯದ ಬಾಬುಗಳನ್ನು ಆ ಸಂಸ್ಥೆಗಳಿಗಾಗಿ ಮೀಸಲಾಗಿಡಬೇಕಾಗಿದೆ. ಸಹಾಯ ದ್ರವ್ಯವನ್ನು ಒದಗಿಸಿ, ಕೆಲವುಬಾರಿ ಸಾಲಕೊಟ್ಟು, ಆ ಸಂಸ್ಥೆಗಳ ಕಾರ್ಯವನ್ನು ಸರಿಯಾಗಿ ನೋಡಿಕೊಳ್ಳಬೇಕಾಗಿದೆ.

ಕೇಂದ್ರ ಸರಕಾರ ತನ್ನ ಆದಾಯವನ್ನು ತೆರಿಗೆ, ಸುಂಕ, ಅಂಚೆ ಮತ್ತು ರೈಲ್ವೆ, ಮೊದಲಾದುವುಗಳಿಂದ ಪಡೆಯುವ ಹಾಗೆಯೇ, ಲಾಭಕರವಾದ ವ್ಯಾಪಾರೋದ್ಯಮಗಳನ್ನು ಕೈಗೊಂಡು, ಹಣವನ್ನು ಸಂಗ್ರಹಿಸುತ್ತಿದೆ. ರೈಲ್ವೆ ಆದಾಯ ಕೇವಲ ಹತ್ತು ವರುಷಗಳಲ್ಲಿ, ಒಟ್ಟು ಆದಾಯದಲ್ಲಿ ಶೇಕಡಾ ಎಂಟರಷ್ಟಿದ್ದದ್ದು ಹದಿನಾರರಷ್ಟಕ್ಕೇರಿದೆ. ೧೯೨೫ನೆಯ ಇಸವಿಯವರೆಗೂ ರೈಲ್ವೆ ಹಣಕಾಸಿನ ವ್ಯವಸ್ಥೆ ಸರಕಾರದ ಹಣಕಾಸಿನ ವ್ಯವಸ್ಥೆಯ ಒಂದು ಭಾಗವಾಗಿತ್ತು. ೧೯೨೫ ರ

ಇದು ತಪ್ಪಿ ರೈಲ್ವೆ ಹಣಕಾಸಿಗೇ ಪ್ರತ್ಯೇಕವಾದ ಒಂದು "ಬಡ್ಜೆಟ್" ನೀತಿ ರೂಪುಗೊಂಡಿತು. ಈ ಉದ್ಯಮದಿಂದ ದೊರೆಯುವ ಹಣದಲ್ಲಿ, ರೈಲ್ವೆ ಬಡಾವಣೆಗೆ ಬೇಕಾದ ಹಣವನ್ನು ಉಪಯೋಗಿಸಿಕೊಂಡಮೇಲೆ ಉಳಿದ ಆದಾಯವನ್ನು ಮಾತ್ರ ಕೇಂದ್ರ ಸರಕಾರದ ಕಾರ್ಯಗಳಿಗೆ ವಿನಿಯೋಗಮಾಡುವಂತಾಯಿತು.

ಹೀಗೆ ರಾಜಕೀಯ ಸುಧಾರಣೆಗಳ ಪರಿಣಾಮವಾಗಿ ಆಗಾಗ್ಗೆ ಬದಲಾವಣೆಗಳನ್ನು ಹೊಂದಿ ರೂಪಗೊಂಡಿರುವ ಇಂಡಿಯಾ ಸರಕಾರದ ಆಯವ್ಯಯದ ಕ್ರಮದ ಅರಿವಾಗಬೇಕಾದರೆ, ಇಲ್ಲಿಯ ಕೇಂದ್ರ ಮತ್ತು ಪ್ರಾಂತ ಸರಕಾರಗಳ ಆದಾಯ ವೆಚ್ಚಗಳು, ಸಾಲಸೋಲಗಳು, ದೇಶೀಯ ಸಂಸ್ಥಾನಗಳ ಆಯವ್ಯಯ ವ್ಯವಸ್ಥೆ ಮತ್ತು ಸ್ಥಳೀಯ ಸಂಸ್ಥೆಗಳ ವಿದ್ಯಮಾನಗಳು, ಇವುಗಳನ್ನು ತಿಳಿಯಬೇಕಾದುದು ಅತ್ಯಗತ್ಯ.

---

# ಪ್ರಕರಣ ೧೮

## ಕೇಂದ್ರ ಮತ್ತು ಪ್ರಾಂತ ಸರಕಾರಗಳ ಹುಟ್ಟುವಳಿ

ಕೇಂದ್ರ, ಪ್ರಾಂತ, ದೇಶೀಯ ಸಂಸ್ಥಾನಗಳು ಮತ್ತು ಸ್ಥಳೀಯ ಸಂಸ್ಥೆಗಳು, ಇವುಗಳು ಇಂಡಿಯಾ ಸರಕಾರದ ಬೇರೆ ಬೇರೆ ಅಂಗಗಳು. ಈ ಸರಕಾರಗಳು ಬೇರೆ ಬೇರೆ ಬಾಬುಗಳಿಂದ ತಮ್ಮ ಹುಟ್ಟುವಳಿಯನ್ನು ಪಡೆಯುತ್ತವೆ. ಕೇಂದ್ರ ಮತ್ತು ಪ್ರಾಂತಸರಕಾರಗಳ ಆದಾಯ ಮತ್ತು ಅದರ ಬಾಬುಗಳನ್ನು ಈ ಪ್ರಕರಣದಲ್ಲಿ ವಿಮರ್ಶಿಸಲಾಗುವುದು.

ನಮ್ಮ ದೇಶದಲ್ಲಿ, ಸಾಮಾನ್ಯವಾಗಿ ಸರಕಾರ ಈ ಕೆಳಗೆ ಸೂಚಿಸಿರುವ ಮಾರ್ಗಗಳಿಂದ ಹಣವನ್ನು ಪಡೆಯುತ್ತದೆ :—

೧. ಭೂಕಂದಾಯ
೨. ತೆರಿಗೆ ಮತ್ತು ಸುಂಕ
೩. ಸರಕಾರಕ್ಕೇ ಸರ್ವಸ್ವಾಮ್ಯವಿರುವ ಪ್ರಕೃತಿದತ್ತವಾದ ಬಾಬುಗಳ (Public Monopolies)
೪. ವ್ಯಾಪಾರೋದ್ಯಮಗಳಿಂದ ಬರುವ ಆದಾಯ
೫. ಸಾಲದ ಮೇಲಿನ ಬಡ್ಡಿ
೬. ಫೀಗದಿ, ದಂಡ, ಮೊದಲಾದುವು.

ಭೂಕಂದಾಯ ತೆರಿಗೆಯೇ ಅಥವಾ ಅದನ್ನು ಅನುಭವಿಸುವವನು ಕೊಡು ಗುತ್ತಿಗೆ ಮೊಬಲಗೇ ಎಂಬುದು ದೊಡ್ಡ ಪ್ರಶ್ನೆ. ಇದು ಹೀಗೆ ಎಂದು ತೀರ್ಮಾ ಮಾಡುವುದು ಕಷ್ಟ. ಇದನ್ನು ತೆರಿಗೆಯೆಂದು ಭಾವಿಸಿದರೆ ಭೂಕಂದಾಯ ಆದಾಯ ತೆರಿಗೆಯಂತೆಯೇ ಪ್ರತ್ಯಕ್ಷ ತೆರಿಗೆಯಾಗುವುದು. ಭೂಕಂದಾಯ ತೆರಿಗೆಯೇ ಅಲ್ಲವೆ ಎಂಬುದನ್ನು ನಿರ್ದಿಷ್ಟವಾಗಿ ತೀರ್ಮಾನಮಾಡಿಲ್ಲದಿರುವುದರಿಂದಲೂ, ಬಹುಕಾಲದಿಂ ಸರಕಾರಕ್ಕೆ ಈ ಬಾಬಿನಿಂದ ಹೆಚ್ಚಿನ ಆದಾಯ ಉತ್ಪನ್ನವಾಗಿರುವುದರಿಂದಲು ಆದಾಯದ ವಿಂಗಡಣೆಯಲ್ಲಿ ಇದನ್ನು ಪ್ರತ್ಯೇಕವಾಗಿ ಸೂಚಿಸುವುದು ಸಹಜವಾಗಿ

ಈ ಶತಮಾನದಲ್ಲಿ, ಅದರಲ್ಲೂ ೧೯೧೫ ರಿಂದ ಈಚೆಗೆ, ಪ್ರತ್ಯಕ್ಷ ತೆರಿಗೆಗ ಪ್ರಾಮುಖ್ಯವೂ, ಸುಂಕದಿಂದ ಬರುವ ಆದಾಯದ ಬೆಳವಣಿಗೆಯೂ ಕಂಡುಬರುತ್ತಿ ಸ್ಟಾಂಪ್ ಮತ್ತು ರಜಿಸ್ಟ್ರೇಷನ್‌ಗಳ ಆದಾಯವನ್ನು ಇಲ್ಲಿ ತೆರಿಗೆಯೆಂದೇ ಭಾವಿ ಲಾಗಿದೆ.

ಮೇಲಿನ ಎರಡು ಬಾಬುಗಳಿಗೂ ಸೇರದಂತೆ ಸರಕಾರದ ಆಸ್ತಿಯೆಂ ಭಾವಿಸಲ್ಪಟ್ಟ, ಅರಣ್ಯ, ಖನಿಜ, ಮೊದಲಾದ ಪ್ರಕೃತಿದತ್ತವಾದ ಸಾಧನ ಸಂಪತ್ತ ಗಳು, ಸರಕಾರದ ಆದಾಯದ ಬಾಬುಗಳಲ್ಲಿ ಮುಖ್ಯವಾಗಿವೆ.

ರೈಲ್ವೆ, ನೀರಾವರೀ ಕೆಲಸಗಳು, ಅಂಚೆ ಮತ್ತು ತಂತಿ ವೊದಲಾದುವು ಗಳನ್ನು ವ್ಯಾಪಾರೋದ್ಯಮಗಳೆಂದು ಭಾವಿಸಲಾಗಿದೆ. ಇವುಗಳಿಂದ ಬರುವ ನಿವ್ವಳ ಆದಾಯ ಸರಕಾರದ ಹುಟ್ಟುವಳಿಯ ಒಂದು ಭಾಗ.

ಕೇಂದ್ರ, ಪ್ರಾಂತ, ಸ್ಥಳೀಯ ಮತ್ತು ದೇಶೀಯ ಸಂಸ್ಥಾನಗಳ ಸರಕಾರಗಳಿಗೆ ಕೊಟ್ಟ ಸಾಲದ ಮೇಲಿನ ಬಡ್ಡಿಯೂ ಒಂದು ಮುಖ್ಯ ಆದಾಯದ ಬಾಬು.

ದೇಶೀಯ ಸಂಸ್ಥಾನಗಳಿಂದ ಬರುವ ಪೊಗದಿ, ಇಲಾಖೆಗಳಿಂದ ಬರುವ ಹುಟ್ಟುವಳಿ, ಇವೇ ವೊದಲಾದುವುಗಳನ್ನು ಇತರ ಬಾಬುಗಳಲ್ಲಿ ಸೇರಿಸಲಾಗಿದೆ.

ಸರಕಾರದ ಒಟ್ಟು ಹುಟ್ಟುವಳಿಯಲ್ಲಿ ಮೇಲಿನ ಬಾಬುಗಳಿಂದ ಶೇಕಡಾ ಎಷ್ಟೆಷ್ಟು ಆದಾಯ ಬರುತ್ತದೆ, ಸುಮಾರು ಹತ್ತು ವರುಷಗಳಲ್ಲಿ ಇದರಲ್ಲಿ ಆಗಿರುವ ವ್ಯತ್ಯಾಸಗಳೇನು ಎಂಬುದನ್ನು ಈ ಕೆಳಗಣ ಪಟ್ಟಿ ಸ್ಥೂಲವಾಗಿ ತಿಳಿಸುವುದು :—

| ಬಾಬುಗಳು | ೧೯೨೧-೨೨ ರಲ್ಲಿ ಶೇಕಡಾ | ೧೯೨೯-೩೦ ರಲ್ಲಿ ಶೇಕಡಾ | ವ್ಯತ್ಯಾಸ |
|---|---|---|---|
| ಭೂಕಂದಾಯ ... | ೧೯ | ೧೫ | —೪ |
| ತೆರಿಗೆ ಮತ್ತು ಸುಂಕ ... | ೪೯ | ೪೮ | —೧ |
| ಪ್ರಕೃತಿದತ್ತವಾದ ಬಾಬುಗಳು ... | ೩ | ೨ | —೧ |
| ವ್ಯಾಪಾರೋದ್ಯಮ ... | ೧೧ | ೨೦ | +೯ |
| ಬಡ್ಡಿ ... | ೧ | ೩ | +೨ |
| ಇತರ ಬಾಬುಗಳು ... | ೧೭ | ೧೨ | —೫ |
| | ೧೦೦ | ೧೦೦ | |

೧೯೧೯ನೆಯ ಇಸವಿಯ ಸುಧಾರಣೆಗಳ ಪರಿಣಾಮವಾಗಿ ೧೯೨೧ರಿಂದ ಇಂಡಿಯಾ ಸರಕಾರದ ಕೇಂದ್ರ ಮತ್ತು ಪ್ರಾಂತ ಸರಕಾರಗಳ ಕರ್ತವ್ಯ ನಿರ್ವ ಹಣದಲ್ಲಿ ವಿಭಜನೆಯಾದಂತೆಯೇ, ಇವುಗಳ ಹುಟ್ಟುವಳಿಯ ಬಾಬುಗಳಲ್ಲಿಯೂ ಒಂದು ನಿರ್ದಿಷ್ಟವಾದ ವಿಭಾಗಕ್ರಮ ತಲೆದೋರಿತು. ಸುಂಕ, ಆದಾಯದ ತೆರಿಗೆ, ಉಪ್ಪು ಮತ್ತು ಅಫೀಂ ಇವುಗಳ ಮಾರಾಟ, ರೈಲ್ವೆ, ಅಂಚೆ ಮತ್ತು ತಂತಿ, ದೇಶೀಯ ಸಂಸ್ಥಾನಗಳ ಪೊಗದಿ, ವೊದಲಾದ ಆದಾಯದ ಬಾಬುಗಳು ಕೇಂದ್ರ ಸರಕಾರಕ್ಕೆ ಸೇರಿತು. ಭೂಕಂದಾಯ, ಆಬ್ಕಾರಿ, ಅರಣ್ಯ, ಸ್ಟಾಂಪು ಮತ್ತು ರಿಜಿ ಸ್ಟ್ರೇಷನ್ ಇವು ಪ್ರಾಂತ ಸರಕಾರದ ಆದಾಯದ ಬಾಬುಗಳೆಂದು ವಿಧಾಯಕ ವಾಯಿತು. ಹೀಗೆ ಹುಟ್ಟುವಳಿಯು ಬಾಬುಗಳಲ್ಲಿ ವಿಭಜನೆಯಾದುದಲ್ಲದೆ, ಪ್ರಾಂತ ಸರಕಾರಗಳ ಹುಟ್ಟುವಳಿಯು ಅವುಗಳ ಕರ್ತವ್ಯನಿರ್ವಾಹಕ್ಕೆ ಸಾಕಾಗದಿದ್ದರೆ, ಕೇಂದ್ರ ಸರಕಾರವು ಸಹಾಯ ದ್ರವ್ಯ ಒದಗಿಸಬೇಕೆಂದೂ, ಪ್ರಾಂತ ಸರಕಾರ

# ಪ್ರಕರಣ ೧೮

## ಕೇಂದ್ರ ಮತ್ತು ಪ್ರಾಂತ ಸರಕಾರಗಳ ಹುಟ್ಟುವಳಿ

ಕೇಂದ್ರ, ಪ್ರಾಂತ, ದೇಶೀಯ ಸಂಸ್ಥಾನಗಳು ಮತ್ತು ಸ್ಥಳೀಯ ಸಂಸ್ಥೆಗಳು, ಇವುಗಳು ಇಂಡಿಯಾ ಸರಕಾರದ ಬೇರೆ ಬೇರೆ ಅಂಗಗಳು. ಈ ಸರಕಾರಗಳು ಬೇರೆ ಬೇರೆ ಬಾಬುಗಳಿಂದ ತಮ್ಮ ಹುಟ್ಟುವಳಿಯನ್ನು ಪಡೆಯುತ್ತವೆ. ಕೇಂದ್ರ ಮತ್ತು ಪ್ರಾಂತಸರಕಾರಗಳ ಆದಾಯ ಮತ್ತು ಅದರ ಬಾಬುಗಳನ್ನು ಈ ಪ್ರಕರಣದಲ್ಲಿ ವಿಮರ್ಶಿಸಲಾಗುವುದು.

ನಮ್ಮ ದೇಶದಲ್ಲಿ, ಸಾಮಾನ್ಯವಾಗಿ ಸರಕಾರ ಈ ಕೆಳಗೆ ಸೂಚಿಸಿರುವ ಮಾರ್ಗಗಳಿಂದ ಹಣವನ್ನು ಪಡೆಯುತ್ತದೆ :—

೧. ಭೂಕಂದಾಯ
೨. ತೆರಿಗೆ ಮತ್ತು ಸುಂಕ
೩. ಸರಕಾರಕ್ಕೇ ಸರ್ವಸ್ವಾಮ್ಯವಿರುವ ಪ್ರಕೃತಿದತ್ತವಾದ ಬಾಬುಗಳು (Public Monopolies)
೪. ವ್ಯಾಪಾರೋದ್ಯಮಗಳಿಂದ ಬರುವ ಆದಾಯ
೫. ಸಾಲದ ಮೇಲಿನ ಬಡ್ಡಿ
೬. ಫೀಗದಿ, ದಂಡ, ಮೊದಲಾದುವು.

ಭೂಕಂದಾಯ ತೆರಿಗೆಯೇ ಅಥವಾ ಅದನ್ನು ಅನುಭವಿಸುವವನು ಕೊಡುವ ಗುತ್ತಿಗೆ ಮೊಬಲಗೇ ಎಂಬುದು ದೊಡ್ಡ ಪ್ರಶ್ನೆ. ಇದು ಹೀಗೆ ಎಂದು ತೀರ್ಮಾನ ಮಾಡುವುದು ಕಷ್ಟ. ಇದನ್ನು ತೆರಿಗೆಯೆಂದು ಭಾವಿಸಿದರೆ ಭೂಕಂದಾಯ ಆದಾಯ ತೆರಿಗೆಯಂತೆಯೇ ಪ್ರತ್ಯಕ್ಷ ತೆರಿಗೆಯಾಗುವುದು. ಭೂಕಂದಾಯ ತೆರಿಗೆಯೇ ಅಲ್ಲವೇ ಎಂಬುದನ್ನು ನಿರ್ದಿಷ್ಟವಾಗಿ ತೀರ್ಮಾನಮಾಡಿಲ್ಲದಿರುವುದರಿಂದಲೂ, ಬಹುಕಾಲದಿಂದ ಸರಕಾರಕ್ಕೆ ಈ ಬಾಬಿನಿಂದ ಹೆಚ್ಚಿನ ಆದಾಯ ಉತ್ಪನ್ನವಾಗಿರುವುದರಿಂದಲೂ, ಆದಾಯದ ವಿಂಗಡಣೆಯಲ್ಲಿ ಇದನ್ನು ಪ್ರತ್ಯೇಕವಾಗಿ ಸೂಚಿಸುವುದು ಸಹಜವಾಗಿದೆ.

ಈ ಶತಮಾನದಲ್ಲಿ, ಅದರಲ್ಲೂ ೧೯೧೫ ರಿಂದ ಈಚೆಗೆ, ಪ್ರತ್ಯಕ್ಷ ತೆರಿಗೆಗಳ ಪ್ರಾಮುಖ್ಯವೂ, ಸುಂಕದಿಂದ ಬರುವ ಆದಾಯದ ಬೆಳವಣಿಗೆಯೂ ಕಂಡುಬರುತ್ತಿವೆ. ಸ್ಟಾಂಪ್ ಮತ್ತು ರಜಿಸ್ಟ್ರೇಷನ್‌ಗಳ ಆದಾಯುವನ್ನು ಇಲ್ಲಿ ತೆರಿಗೆಯೆಂದೇ ಭಾವಿಸಲಾಗಿದೆ.

ಮೇಲಿನ ಎರಡು ಬಾಬುಗಳಿಗೂ ಸೇರದಂತೆ ಸರಕಾರದ ಆಸ್ತಿಯಂತೆ ಭಾವಿಸಲ್ಪಟ್ಟ, ಅರಣ್ಯ, ಖನಿಜ, ಮೊದಲಾದ ಪ್ರಕೃತಿದತ್ತವಾದ ಸಾಧನ ಸಂಪತ್ತುಗಳು, ಸರಕಾರದ ಆದಾಯದ ಬಾಬುಗಳಲ್ಲಿ ಮುಖ್ಯವಾಗಿವೆ.

ರೈಲ್ವೆ, ನೀರಾವರೀ ಕೆಲಸಗಳು, ಅಂಚೆ ಮತ್ತು ತಂತಿ ಮೊದಲಾದುವು ಗಳನ್ನು ವ್ಯಾಪಾರೋದ್ಯಮಗಳೆಂದು ಭಾವಿಸಲಾಗಿದೆ. ಇವುಗಳಿಂದ ಬರುವ ನಿವ್ವಳ ಆದಾಯ ಸರಕಾರದ ಹುಟ್ಟುವಳಿಯ ಒಂದು ಭಾಗ.

ಕೇಂದ್ರ, ಪ್ರಾಂತ, ಸ್ಥಳೀಯ ಮತ್ತು ದೇಶೀಯ ಸಂಸ್ಥಾನಗಳ ಸರಕಾರಗಳಿಗೆ ಕೊಟ್ಟ ಸಾಲದ ಮೇಲಿನ ಬಡ್ಡಿಯೂ ಒಂದು ಮುಖ್ಯ ಆದಾಯದ ಬಾಬು.

ದೇಶೀಯ ಸಂಸ್ಥಾನಗಳಿಂದ ಬರುವ ಪೊಗದಿ, ಇಲಾಖೆಗಳಿಂದ ಬರುವ ಹುಟ್ಟುವಳಿ, ಇವೇ ಮೊದಲಾದುವುಗಳನ್ನು ಇತರ ಬಾಬುಗಳಲ್ಲಿ ಸೇರಿಸಲಾಗಿದೆ.

ಸರಕಾರದ ಒಟ್ಟು ಹುಟ್ಟುವಳಿಯಲ್ಲಿ ಮೇಲಿನ ಬಾಬುಗಳಿಂದ ಶೇಕಡಾ ಎಷ್ಟೆಷ್ಟು ಆದಾಯ ಬರುತ್ತದೆ, ಸುಮಾರು ಹತ್ತು ವರುಷಗಳಲ್ಲಿ ಇದರಲ್ಲಿ ಆಗಿರುವ ವ್ಯತ್ಯಾಸಗಳೇನು ಎಂಬುದನ್ನು ಈ ಕೆಳಗಣ ಪಟ್ಟಿ ಸ್ಥೂಲವಾಗಿ ತಿಳಿಸುವುದು :—

| ಬಾಬುಗಳು | | ೧೯೨೧-೨೨ ರಲ್ಲಿ ಶೇಕಡಾ | ೧೯೨೯-೩೦ ರಲ್ಲಿ ಶೇಕಡಾ | ವ್ಯತ್ಯಾಸ |
|---|---|---|---|---|
| ಭೂಕಂದಾಯ | ... | ೧೯ | ೧೫ | —೪ |
| ತೆರಿಗೆ ಮತ್ತು ಸುಂಕ | ... | ೪೯ | ೪೮ | —೧ |
| ಪ್ರಕೃತಿದತ್ತವಾದ ಬಾಬುಗಳು | ... | ೩ | ೨ | —೧ |
| ವ್ಯಾಪಾರೋದ್ಯಮ | ... | ೧೧ | ೨೦ | +೯ |
| ಬಡ್ಡಿ | ... | ೧ | ೩ | +೨ |
| ಇತರ ಬಾಬುಗಳು | ... | ೧೭ | ೧೨ | —೫ |
| | | ೧೦೦ | ೧೦೦ | |

೧೯೧೯ನೆಯ ಇಸವಿಯ ಸುಧಾರಣೆಗಳ ಪರಿಣಾಮವಾಗಿ ೧೯೨೧ರಿಂದ ಇಂಡಿಯಾ ಸರಕಾರದ ಕೇಂದ್ರ ಮತ್ತು ಪ್ರಾಂತ ಸರಕಾರಗಳ ಕರ್ತವ್ಯ ನಿರ್ವ ಹಣದಲ್ಲಿ ವಿಭಜನೆಯಾದಂತೆಯೇ, ಇವುಗಳ ಹುಟ್ಟುವಳಿಯ ಬಾಬುಗಳಲ್ಲಿಯೂ ಒಂದು ನಿರ್ದಿಷ್ಟವಾದ ವಿಭಾಗಕ್ರಮ ತಲೆದೋರಿತು. ಸುಂಕ, ಆದಾಯದ ತೆರಿಗೆ, ಉಪ್ಪು ಮತ್ತು ಅಫೀಂ ಇವುಗಳ ಮಾರಾಟ, ರೈಲ್ವೆ, ಅಂಚೆ ಮತ್ತು ತಂತಿ, ದೇಶೀಯ ಸಂಸ್ಥಾನಗಳ ಪೊಗದಿ, ಮೊದಲಾದ ಆದಾಯದ ಬಾಬುಗಳು ಕೇಂದ್ರ ಸರಕಾರಕ್ಕೆ ಸೇರಿತು. ಭೂಕಂದಾಯ, ಆಬ್ಕಾರಿ, ಅರಣ್ಯ, ಸ್ಟಾಂಪು ಮತ್ತು ರಿಜಿ ಸ್ಟ್ರೇಷ್ಟ್ ಇವು ಪ್ರಾಂತ ಸರಕಾರದ ಆದಾಯದ ಬಾಬುಗಳೆಂದು ವಿಧಾಯಕ ವಾಯಿತು. ಹೀಗೆ ಹುಟ್ಟುವಳಿಯು ಬಾಬುಗಳಲ್ಲಿ ವಿಭಜನೆಯಾದುದಲ್ಲದೆ, ಪ್ರಾಂತ ಸರಕಾರಗಳ ಹುಟ್ಟುವಳಿಯು ಅವುಗಳ ಕರ್ತವ್ಯನಿರ್ವಾಹಕ್ಕೆ ಸಾಕಾಗದಿದ್ದರೆ, ಕೇಂದ್ರ ಸರಕಾರವು ಸಹಾಯ ದ್ರವ್ಯ ಒದಗಿಸಬೇಕೆಂದೂ, ಪ್ರಾಂತ ಸರಕಾರ

ಗಳಲ್ಲಿ ಹೆಚ್ಚಾಗಿ ಉಳಿದಿರುವ ಆದಾಯವನ್ನು ಉಪಯೋಗಿಸಿಕೊಳ್ಳಬಹುದೆಂದೂ, ಕೇಂದ್ರ ಮತ್ತು ಪ್ರಾಂತಸರಕಾರಗಳು, "ಬಡ್ಜೆಟ್" ಗಳನ್ನು ತಮ್ಮ ತಮ್ಮ ಶಾಸನ ಸಭೆಗಳ ಮುಂದಿಟ್ಟು ಅವುಗಳ ಒಪ್ಪಿಗೆ ಪಡೆಯಬೇಕೆಂದೂ ತೀರ್ಮಾನವಾಯಿತು.

ಸ್ಥಳೀಯ ಮತ್ತು ದೇಶೀಯ ಸಂಸ್ಥಾನ ಸರಕಾರಗಳನ್ನು ಬಿಟ್ಟು ಇಂಡಿಯಾ ಸರಕಾರದ ಒಟ್ಟು ಆದಾಯ ದಿನೇದಿನೇ ಹೆಚ್ಚುತ್ತಿದೆ. ಮೊದಲನೆಯ ಬಡ್ಜೆಟ್ ತಯಾರಾದ ೧೮೬೧ನೆ ಇಸವಿಯಲ್ಲಿ ಸರಕಾರದ ಆದಾಯ ೪೩ ಕೋಟಿ ರೂಪಾಯಿ ಮಾತ್ರವಿದ್ದು ಈ ಶತಮಾನದ ಪ್ರಾರಂಭದವೇಳೆಗೆ ೧೧೨ ಕೋಟಿ ರೂಪಾಯಿಗೆ ಏರಿತು. ಕಳೆದ ಮಹಾಯುದ್ಧಕ್ಕೆ ಮುಂಚೆ ಇದು ೧೨೮ ಕೋಟಿ ರೂಪಾಯಿಗಳಾಗಿದ್ದು, ಯುದ್ಧ ಮುಗಿದಮೇಲೆ ೨೦೬ ಕೋಟಿ ರೂಪಾಯಿಗಳಷ್ಟಾಯಿತು. ಮಾಂಟೆಗೂ ಚೆಲ್ಮ್ಸ್‌ಫರ್ಡ್ ಸುಧಾರಣೆಗಳು ಜಾರಿಗೆ ಬಂದಮೇಲೆ ೧೯೨೧ರಲ್ಲಿ ಕೇಂದ್ರ ಸರಕಾರದ ಆದಾಯ ೧೧೫ ಕೋಟಿ ರೂಪಾಯಿಗಳು ಮತ್ತು ಪ್ರಾಂತ ಸರಕಾರದ ಹುಟ್ಟುವಳಿ ೭೦ ಕೋಟಿ ರೂಪಾಯಿಗಳಷ್ಟಿತ್ತು. ೧೯೩೮ರಲ್ಲಿ ಕೇಂದ್ರ ಸರಕಾರದ ಆದಾಯ ೧೨೨ ಕೋಟಿ ರೂ. ಗಳಿಗೂ ಪ್ರಾಂತ ಸರಕಾರದ ಆದಾಯ ೮೬ ಕೋಟಿ ರೂ. ಗಳಿಗೂ ಏರಿತು.

ಇಂಡಿಯಾ ಸರಕಾರದ ಒಟ್ಟು ಆದಾಯ ಕ್ರಮಕ್ರಮವಾಗಿ ಏರುತ್ತಿರುವಂತೆಯೇ ಮುಖ್ಯವಾದ ಆದಾಯದ ಬಾಬುಗಳಲ್ಲಿ ಆಗಿರುವ ವ್ಯತ್ಯಾಸವನ್ನು ಈ ಕೆಳಗಿನ ಪಟ್ಟಿ ಸೂಚಿಸುತ್ತದೆ :—

(ಕೋಟಿ ರೂಪಾಯಿಗಳಲ್ಲಿ)

| ಬಾಬುಗಳು | ೧೮೯೧-೯೫ರವರೆಗಿನ ಸರಾಸರಿ | ೧೯೦೧-೫ ಸರಾಸರಿ | ೧೯೧೧-೧೫ ಸರಾಸರಿ | ೧೯೨೧-೨೫ ಸರಾಸರಿ | ೧೯೩೧-೩೫ ಸರಾಸರಿ |
|---|---|---|---|---|---|
| ಭೂಕಂದಾಯ | ೨೮.೨ | ೨೮.೧ | ೩೨.೦ | ೩೫.೩ | ೩೧.೭ |
| ಸುಂಕ | ೨.೭ | ೬.೦ | ೯.೯ | ೪೧.೮ | ೫೦.೫ |
| ಆದಾಯದ ತೆರಿಗೆ | ೧.೭ | ೧.೯ | ೨.೮ | ೧೮.೦ | ೧೭.೫ |
| ಅಬ್ಕಾರಿ | ೫.೪ | ೭.೩ | ೧೨.೬ | ೧೮.೯ | ೧೫.೦ |
| ಅಫೀಂ | ೭.೪ | ೭.೯ | ೪.೮ | ೩.೮ | ೧.೨ |
| ಉಪ್ಪು | ೮.೬ | ೮.೦ | ೫.೩ | ೭.೪ | ೮.೮ |
| ರೈಲ್ವೆ (ಒಟ್ಟು ಆದಾಯ) | ೨೦.೪ | ೨೯.೬ | ೨೫.೪ | ೨೯.೩ | ೩೨.೯ |
| ಇತರ | ೨೧.೨ | ೨೯.೮ | ೩೩.೩ | ೫೨.೩ | ೪೯.೪ |
| ಒಟ್ಟು | ೯೫.೬ | ೧೧೮.೬ | ೧೨೬.೧ | ೨೦೬.೮ | ೨೦೭.೦ |

೧೯೧೯ ನೆಯ ಇಸವಿಯ ರಾಜಕೀಯ ಸುಧಾರಣೆಗಳ ಪರಿಣಾಮವಾಗಿ ಕೇಂದ್ರ ಮತ್ತು ಪ್ರಾಂತ ಸರಕಾರಗಳ ಹುಟ್ಟುವಳಿಯ ಬಾಬುಗಳಲ್ಲಿ ನಡೆದಿರುವ ವಿಭಜನೆಯನ್ನು ತಿಳಿಯಬೇಕಾದರೆ, ಯಾವುದಾದರೂ ಒಂದು ವರ್ಷದ ಬಡ್ಜೆಟ್ಟನ್ನು ಪರಿಶೀಲಿಸಿದರೆ, ಸಾಕು. ೧೯೩೫–೩೬ನೆಯ ಸಾಲಿನ ಕೇಂದ್ರ ಸರಕಾರದ ಬಡ್ಜೆಟ್ ಮತ್ತು ೧೯೩೩_೩೪ನೆಯ ಸಾಲಿನ ಪ್ರಾಂತ ಸರಕಾರದ ಬಡ್ಜೆಟ'ಗಳಿಂದ ಆರಿಸಿದ ಕೆಲವು ಅಂಕಿಗಳನ್ನು ಇಲ್ಲಿ ಸೂಚಿಸಿ ಈ ಅಂಶಗಳನ್ನು ವಿಮರ್ಶಿಸಲಾಗುವುದು.

೧೯೩೫–೩೬ನೆಯ ಸಾಲಿನ

ಕೇಂದ್ರ ಸರಕಾರದ ಒಟ್ಟು ಆದಾಯ

೧೨೧ ಕೋಟಿ ರೂ. ಗಳು

| ಮುಖ್ಯವಾದ ಬಾಬುಗಳು | ಮೊಬಲಗು ಕೋಟಿ ರೂ. ಗಳು |
|---|---|
| ಸುಂಕ ... ... | ೫೧.೮೪ |
| ಆದಾಯದ ತೆರಿಗೆ ... ... | ೧೬.೪೦ |
| ಉಪ್ಪು ... ... | ೮.೭೩ |
| ಅಫೀಂ ... ... | .೬೧ |
| ಇತರ ... ... | ೧.೯೧ |
| ರೈಲ್ವೇ (ಒಟ್ಟು) ... ... | ೩೨.೨೫ |
| ನೀರಾವರಿ, ಅಂಚೆ ಮತ್ತು ತಂತಿ, ನಾಣ್ಯ ಮತ್ತು ಟಂಕಸಾಲೆ | ೨.೭೭ |
| ರಕ್ಷಣಾ ಕಾರ್ಯಗಳು ... ... | ೪.೯೩ |
| ಇತರ ... ... | ೧.೫೬ |
| ಒಟ್ಟು ... ... | ೧೨೧.೦೦ |

೧೯೩೩-೩೪ನೆಯ ಸಾಲಿಗೆ.
ಎಲ್ಲಾ ಪ್ರಾಂತ ಸರಕಾರಗಳ ಒಟ್ಟು ಆದಾಯ
೮೨.೮೪ ಕೋಟಿ ರೂಪಾಯಿಗಳು

| ಮುಖ್ಯವಾದ ಬಾಬುಗಳು | ಮೊಬಲಗು ಕೋಟಿ ರೂ. ಗಳು |
|---|---|
| ಭೂಕಂದಾಯ ... ... | ೨೯.೮೨ |
| ಅಬ್ಕಾರಿ ... ... | ೧೪.೫೯ |
| ಸ್ಟಾಂಪು (ವ್ಯವಹಾರಕ್ಕೆ ಸಂಬಂಧಿಸಿದ್ದು) ... | ೧೧.೯೩ |
| ಅರಣ್ಯಗಳು ... ... | ೩.೩೮ |
| ರಿಜಿಸ್ಟ್ರೇಷನ್ ... ... | ೧.೧೧ |
| ಪರಿಶಿಷ್ಟ ತೆರಿಗೆಗಳು (Scheduled taxes) ... | .೪೦ |
| ನೀರಾವರೀ ಬಾಬುಗಳು (ನಿವ್ವಳ) ... | ೮.೯೮ |
| ಸಾಲದ ಮೇಲಿನ ಬಡ್ಡಿ ... ... | ೨.೧೭ |
| ಇತರ ಬಾಬುಗಳು ... ... | ೧೦.೪೬ |
| ಒಟ್ಟು ... ... | ೮೨.೮೪ |

ಮೇಲಿನ ಪಟ್ಟಿಗಳನ್ನು ನೋಡಿದರೆ ಕೇಂದ್ರ ಸರಕಾರದ ಆದಾಯದ ಬಹು ಭಾಗ ಸುಂಕ, ಉಪ್ಪು, ಆದಾಯ ತೆರಿಗೆ, ಅಫೀಂ ಮೊದಲಾದುವುಗಳಿಂದಲೂ, ಪ್ರಾಂತ ಸರಕಾರಗಳಿಗೆ ಮುಖ್ಯವಾದ ಆದಾಯ ಭೂಕಂದಾಯ, ಅಬ್ಕಾರಿ, ಸ್ಟಾಂಪು, ರಿಜಿಸ್ಟ್ರೇಷನ್, ಇವುಗಳಿಂದಲೂ, ಬರುತ್ತವೆಯೆಂದು ಕಾಣುತ್ತದೆ ಈ ಬಾಬುಗಳನ್ನು ಪ್ರತ್ಯೇಕವಾಗಿ ವಿಮರ್ಶಿಸಲಾಗುವುದು.

## ಎ. ಕೇಂದ್ರ ಸರಕಾರದ ಆದಾಯ ಬಾಬುಗಳು.

### ಸುಂಕ

೧೯೩೫-೩೬ನೆಯ ಇಸವಿಯ ಆಯವ್ಯಯ ಪಟ್ಟಿಯನ್ನು ನೋಡಿದರೆ ಸರಕಾರದ ತೆರಿಗೆ ಬಾಬುಗಳ ಒಟ್ಟು ಆದಾಯದಲ್ಲಿ ಶೇಕಡ ೬೮ರಷ್ಟು ಹುಟ್ಟುವಳಿ ಸುಂಕದ ಬಾಬಿನಿಂದ ಬಂದಿದೆಯೆನ್ನಬಹುದು. ಈ ಹುಟ್ಟುವಳಿಯ ಪ್ರಾಮುಖ್ಯ ದಿನೇ ದಿನೇ ಬೆಳೆಯುತ್ತಿದೆ. ೧೮೮೧-೮೨ರಲ್ಲಿ ಎರಡೂವರೆ ಕೋಟಿ ರೂಪಾಯಿಯಷ್ಟಿದ್ದು,

೧೯೩೪-೩೭ರ ವೇಳೆಗೆ ಐವತ್ತು ಕೋಟಿ ರೂಪಾಯಿಗಳಿಗೆ ಏರಿದೆ. ಸುಂಕವನ್ನು ಸಾಮಾನ್ಯವಾಗಿ ಮೂರು ವಿಧವಾಗಿ ವಸೂಲ್ ಮಾಡುತ್ತಾರೆ. ೧. ನಮ್ಮ ದೇಶದ ಉಪಯೋಗಕ್ಕಾಗಿ ಸಮುದ್ರದಾಚೆನಿಂದ ಬರುವ ವಿದೇಶ ಪದಾರ್ಥ ಗಳ ಮೇಲೆ ತೆರಿಗೆ ಹಾಕುವುದರಿಂದ. ನಮ್ಮ ದೇಶದಲ್ಲಿಯೇ ತಯಾರಾಗಿ ಹೊರ ದೇಶಗಳಿಗೆ ರಫ್ತಾಗುವ ಸಾಮಾನುಗಳಮೇಲೆ ವಿಧಿಸುವ ದಂಡದಿಂದ. ೩. ನಮ್ಮ ದೇಶದಲ್ಲೇ ತಯಾರಾಗಿ ಜನಸಾಮಾನ್ಯ ದಿನಂಪ್ರತಿ ಉಪಯೋಗಿಸುವ ಸೀಮೆ ಎಣ್ಣೆ, ಬೆಳ್ಳಿ, ಚಿನ್ನ, ಸಕ್ಕರೆ, ಬೆಂಕಿ ಪೆಟ್ಟಿಗೆ ಮೊದಲಾದ ವಸ್ತುಗಳಮೇಲೆ ವಿಧಿ ಸುವ ತೆರಿಗೆಯಿಂದ. ಇವುಗಳಲ್ಲಿ ಮೊದಲನೆಯದಾದ ವಿದೇಶ ದ್ರವ್ಯಗಳ ಮೇಲಿನ ಸುಂಕ ಮುಖ್ಯವಾದುದರಿಂದ ಅದನ್ನಿಲ್ಲಿ ಸೂಕ್ಷ್ಮವಾಗಿ ವಿಚಾರಮಾಡಬಹುದು.

೧೮೮೨ನೆಯ ಇಸವಿಯವರೆಗೂ ಇಂಡಿಯಾ ದೇಶಕ್ಕೆ ಹೊರಗಿನಿಂದ ಬರುವ ಪದಾರ್ಥಗಳ ಮೇಲೆ ಯಾವ ವಿಧವಾದ ತೆರಿಗೆಯನ್ನೂ ಹಾಕುತ್ತಿರಲಿಲ್ಲ. ಹೊರ ದೇಶದ ಪದಾರ್ಥಗಳ ಮೇಲೆ ಸುಂಕ ಹಾಕುವ ಪದ್ಧತಿ ಆಗ ಆರಂಭವಾಯಿತು. ಕ್ರಮೇಣ ಇದು ಪ್ರಮುಖ ಆದಾಯದ ಬಾಬು ಆಯಿತು. ೧೮೯೪ರಲ್ಲಿ ನೂಲು ಮತ್ತು ಬಟ್ಟೆ ಇವು ಗಳನ್ನುಳಿದು ಮಿಕ್ಕ ಎಲ್ಲ ಪದಾರ್ಥಗಳಮೇಲೂ ಸರಕಾರ ಸುಂಕ ವಸೂಲ್ಮಾಡಲು ಆರಂಭಿಸಿತು. ಈ ರೀತಿ ಹೊರದೇಶದ ಪದಾರ್ಥಗಳ ಮೇಲೆ ಸುಂಕ ಹಾಕಿದ್ದು ನಮ್ಮ ದೇಶದ ಪದಾರ್ಥಗಳಿಗೆ ಪ್ರೋತ್ಸಾಹ ಕೊಡ ಬೇಕೆಂಬ ಉದ್ದೇಶದಿಂದಲ್ಲ; ಸರಕಾರದ ಆದಾಯ ಹೆಚ್ಚಿಸಿಕೊಳ್ಳಬೇಕೆಂಬ ಆಶಯ ದಿಂದ. ೧೮೯೪ರಲ್ಲಿ ಸುಂಕವನ್ನು ನೂಲು ಮತ್ತು ಬಟ್ಟೆಗಳ ಮೇಲೂ ವಸೂಲ್ಮಾ ಡಿದರು. ೧೮೯೬ರಲ್ಲಿ ಇದನ್ನು ಶೇ. ಮೂರೂವರೆಯಷ್ಟು ಕಡಿಮೆ ಮಾಡಿ ಇಂಡಿಯಾ ದೇಶದ ಗಿರಣಿಗಳಲ್ಲಿ ತಯಾರಾದ ಬಟ್ಟೆಗಳ ಮೇಲೆ ಸುಂಕ ಹಾಕಲಾಯಿತು. ೧೯೨೬ನೆಯ ಇಸವಿಯವರೆಗೂ ಇದೇ ರೀತಿ ನಡೆದುಬಂತು.

೧೯೧೪ರ ಮಹಾಯುದ್ಧ ಕೊನೆಗೊಂಡಮೇಲೆ ಇಂಡಿಯಾ ದೇಶದ ಸುಂಕದ ವ್ಯವಸ್ಥೆಯಲ್ಲಿ ಕೆಲವು ವ್ಯತ್ಯಾಸಗಳಾದುವು. ಹೊರಗಿನಿಂದ ಬಂದ ಪದಾರ್ಥಗಳ ಬೆಲೆ, ಅವುಗಳ ಉಪಯೋಗ, ಇವುಗಳನ್ನು ಅನುಸರಿಸಿ ಸುಂಕದ ದರ ಹೆಚ್ಚು ಮಾಡುವ ಪದ್ಧತಿ ಜಾರಿಗೆ ಬಂತು. ದಿನೇ ದಿನೇ ಬೆಳೆಯುತ್ತಿರುವ ಸರಕಾರದ ಕೆಲಸಗಳಿಗೆ ಹಣ ಸಾಲದೆ ಹೋದುದರಿಂದ ಆಯುವ್ಯಯವನ್ನು ಸರಿತೂಗಿಸುವ ಉದ್ದೇಶದಿಂದ ಸುಂಕದ ದರ ಹೆಚ್ಚಿಸಿ ಸರಕಾರದ ಹುಟ್ಟುವಳಿ ಹೆಚ್ಚುಮಾಡುವ ಮಾರ್ಗಗಳನ್ನು ಹುಡುಕಬೇಕಾಯಿತು.

ಮಹಾಯುದ್ಧಕ್ಕೆ ಮೊದಲು ಸರಕಾರದ ಆದಾಯವನ್ನು ಹೆಚ್ಚಿಸಿಕೊಳ್ಳುವುದ ಕ್ಕಾಗಿ ಮಾತ್ರ ಸುಂಕವನ್ನು ಹಾಕುತ್ತಿದ್ದರು. ಯುದ್ಧ ಮುಗಿದಮೇಲೆ ಸುಂಕದ ವ್ಯವಸ್ಥೆಯಲ್ಲಿ ಸರಕಾರದ ನೀತಿ ಸ್ವಲ್ಪ ವ್ಯತ್ಯಾಸಗೊಂಡಿತು. ಅಲ್ಲಿಂದೀಚೆಗೆ ಹೊರ ಗಣ ಪದಾರ್ಥಗಳ ಮೇಲೆ ಸುಂಕ ವಸೂಲ್ಮಾಡುವುದೂ, ಅದರ ದರ ಹೆಚ್ಚಿಸುತ್ತಿರು ವುದೂ, ಸರಕಾರದ ಆದಾಯ ಮಾತ್ರ ಹೆಚ್ಚಿಸುವುದಕ್ಕಲ್ಲ. ಈ ಆದಾಯ ಹೆಚ್ಚಿಸಿ ಕೊಳ್ಳುವುದರ ಜತೆಗೆ, ದೇಶದ ಕೈಗಾರಿಕೆಗಳಿಗೆ ಮತ್ತು ಇಲ್ಲಿಯೇ ತಯಾರಾಗುವ

ಪದಾರ್ಥಗಳಿಗೆ ಪ್ರೋತ್ಸಾಹ ಕೊಡಬೇಕೆಂಬ ಆಶಯವೂ ಸರಕಾರಕ್ಕೆ ಇತ್ತು. ಯುದ್ಧ ಮುಗಿದಮೇಲೆ, ಯುದ್ಧಕಾಲದಲ್ಲಿ ಸೊರಗಿದ್ದ ಪಾಶ್ಚಾತ್ಯ ರಾಷ್ಟ್ರಗಳು ಚೇತರಿಸಿಕೊಂಡು ಪದಾರ್ಥಗಳನ್ನು ತಯಾರ್ಮಾಡಿ ಕಡಮೆ ಬೆಲೆಗೆ ಮಾರುವ ಪ್ರಸಂಗ ಒದಗಿತು. ಇದರಿಂದ ದೇಶೀಯ ವಸ್ತುಗಳ ಬೆಳವಣಿಗೆಗೆ ಚ್ಯುತಿ ಯುಂಟಾಗುವ ಸಂಭವ ಬಂತು. ಈಗ ಹೊರಗಿನಿಂದ ಬರುವ ಪದಾರ್ಥಗಳು ಇಲ್ಲಿಯ ಪದಾರ್ಥಗಳೊಂದಿಗೆ ಪೋಟಾಪೋಟಿ ನಡಸದಂತೆ ಸುಂಕದ ದರ ಹೆಚ್ಚಿಸ ಬೇಕಾಯಿತು. ಹಾಗೆಯೇ, ಇಂಡಿಯಾ ದೇಶದಲ್ಲಿ ಆರಂಭವಾದ ಅನೇಕ ಮುಖ್ಯವಾದ ಕೈಗಾರಿಕೆಗಳಿಗೆ ಬ್ರಿಟಿಷರು ಹೆಚ್ಚು ಮೂಲಧನವನ್ನು ಕೊಟ್ಟಿದ್ದು ದರಿಂದ, ಹೀಗೆ ಸುಂಕದ ದರ ಹೆಚ್ಚಿಸುವುದರಿಂದ ತಮಗೇ ಹೆಚ್ಚಿನ ಪ್ರತಿಫಲ ದೊರೆಯುವುದೆಂಬ ಆಶೆ ಅವರ ಮನಸ್ಸಿನಲ್ಲಿದ್ದಿರಬಹುದು. ಈ ಕಾರಣಗಳಿಂದ ಸುಂಕದ ವ್ಯವಸ್ಥೆಯಲ್ಲಿ ಮೇಲೆ ಹೇಳಿದ ವ್ಯತ್ಯಾಸ ಮಾಡಲು ಸಾರ್ವಭೌಮ ಸರಕಾರ ಆಗ ಹೆಚ್ಚು ಅಡಚಣೆ ಮಾಡಲಿಲ್ಲ. ಈ ರೀತಿ ಹೊರಗಣ ಪದಾರ್ಥಗಳ ಮೇಲೆ ಸುಂಕದ ದರ ಏರಿಸಿ ರಕ್ಷಣೆ ಪಡೆದ ಕೈಗಾರಿಕೆ ಎಂದರೆ ಉಕ್ಕಿನ ಕೈಗಾರಿಕೆ. ಕೆಲವು ವರ್ಷಗಳ ಮೇಲೆ, ಸಕ್ಕರೆ, ಬೆಂಕಿಕಡ್ಡಿ, ಹತ್ತಿಯ ಮಾಲುಗಳು, ಇವು ಗಳಿಗೂ ಅಲ್ಪ ಸ್ವಲ್ಪ ರಕ್ಷಣೆ ದೊರೆಯಿತು. ಪುನಃ ೧೯೩೨ ನೆಯ ಆಗಸ್ಟು ೨೦ ರಲ್ಲಿ ಅಟ್ಟಾವ ಎಂಬ ಸ್ಥಳದಲ್ಲಿ ಇಂಡಿಯಾ ಸರಕಾರಕ್ಕೂ ಬ್ರಿಟನ್ನಿಗೂ ಒಂದು ವ್ಯಾಪಾರದ ಒಪ್ಪಂದವಾಯಿತು. ಅದೇ ಸೆಪ್ಟಂಬರ್ ತಿಂಗಳಲ್ಲಿ ಅದಕ್ಕೆ ಅನುಬಂಧ ರೂಪವಾದ ಮತ್ತೊಂದು ತೀರ್ಮಾನವಾಯಿತು. ಈ ಒಪ್ಪಂದಕ್ಕೆ ಬಂದುದು ಒಂದು ದ್ವಿಮುಖವಾದ ಉದ್ದೇಶದಿಂದೆನ್ನಬಹುದು.

೧. ಇಂಡಿಯಾ ದೇಶದ ಹೊರಗಣ ವ್ಯಾಪಾರಕ್ಕೆ ಇರುವ ಮತ್ತು ಮುಂದೆ ಬರಬಹುದಾದ ತೊಂದರೆಗಳನ್ನು ನಿವಾರಿಸಿ, ಇಲ್ಲಿಯ ವ್ಯಾಪಾರ ಸುಸೂತ್ರವಾಗಿ ನಡೆಯುವಂತೆ ಮಾಡುವುದು. ೨. ಆಗ ಒದಗಿದ್ದ ಹಣಕಾಸು ಮತ್ತು ವ್ಯಾಪಾರದ (World Depression) ಮುಗ್ಗಟ್ಟನ್ನು ತಗ್ಗಿಸಿ ಹೊರಗಣ ವ್ಯಾಪಾರ ಬೆಳೆಯುವಂತೆ ಸಾಧನ ಸಂಪತ್ತನ್ನು ಒದಗಿಸುವುದು. ಈ ಎರಡು ವಿಧ ವಾದ ಉದ್ದೇಶದಿಂದ ಆ ಒಪ್ಪಂದ ಮಾಡಿಕೊಂಡಿದ್ದಾಯಿತು. ಇಂಡಿಯಾ ದೇಶದಿಂದ ಬ್ರಿಟನ್ನಿಗೆ ರಫ್ತಾಗುವ ಪದಾರ್ಥಗಳಿಗೆ ತೋರಿಸುವ ರಿಯಾ ಯತಿಗಳಿಗಾಗಿ, ಅಲ್ಲಿಂದ ಇಂಡಿಯಾ ದೇಶಕ್ಕೆ ಬರುವ ಪದಾರ್ಥಗಳಿಗೂ ರಿಯಾ ಯಿತಿ ತೋರಿಸಬೇಕಾಯಿತು. ಇದುವರೆಗೂ ನಮ್ಮ ದೇಶಕ್ಕೆ ಪದಾರ್ಥಗಳು ಎಲ್ಲಿಂದ ಬಂದರೂ ಒಂದೇ ಸಮನಾದ ಸುಂಕವನ್ನು ಹಾಕುತ್ತಿತ್ತು. ಈ ಒಪ್ಪಂದ ದಿಂದ ಇದು ತಪ್ಪಿ, ಈ ಒಪ್ಪಂದವಾದ ಮೇಲೆ ಎರಡು ವಿಧವಾದ ಸುಂಕದ ದರ ಗಳನ್ನು ಜಾರಿಗೆ ತರಬೇಕಾಯಿತು. ಅಂದಿನಿಂದ ಬ್ರಿಟನ್ ಉಳಿದು ಇತರ ದೇಶ ಗಳಿಂದ ಆಮದಾಗುವ ಪದಾರ್ಥಗಳ ಮೇಲೆ ಹೆಚ್ಚಿನ ದರದ ಸುಂಕವನ್ನೂ ಬ್ರಿಟನ್ನಿ ನಿಂದ ಬರುವ ಪದಾರ್ಥಗಳ ಮೇಲೆ ಕಡಮೆ ದರದ ಸುಂಕ ಹಾಕಬೇಕಾಯಿತು. ಈ ನೀತಿಯನ್ನು ಅನುಸರಿಸಿದುದರಿಂದ ಇಂಡಿಯಾ ದೇಶ ಬ್ರಿಟನ್ನೇತರ ರಾಷ್ಟ್ರ

ಗಳೊಂದಿಗೆ ನಡಸುತ್ತಿದ್ದ ವ್ಯಾಪಾರ ಕುಸಿದುಬಿದ್ದು ದಿನೇ ದಿನೇ ಕ್ಷೀಣಿಸು
ಬಂದಿತು. ಈ ಅಟ್ಟಾವಾ ಒಪ್ಪಂದವನ್ನು ಗ್ರೇಟ್ ಬ್ರಿಟನ್ನಿನ ಹಿತ ದೃಷ್ಟಿಯಿಂ
ಮಾಡಲಾಯಿತೇ ಹೊರತು ಇಂಡಿಯಾ ದೇಶಕ್ಕೆ ಇದರಿಂದ ಹೆಚ್ಚು ಪ್ರಯೋಜ
ವಾಗಲಿಲ್ಲವೆಂದು ಕೆಲವು ಅರ್ಥಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.
ಒಪ್ಪಂದವಾದ ನಾಲ್ಕು ವರ್ಷಗಳಲ್ಲಿ ಗ್ರೇಟ್ ಬ್ರಿಟನ್ನಿನಿಂದ ಇಂಡಿಯಾಕ್ಕೆ ಆ
ದಾಗುವ ಪದಾರ್ಥಗಳು ಶೇಕಡಾ ೩೪ ರಷ್ಟು ಹೆಚ್ಚಿದುವು. ಈ ನಾಲ್ಕು ವರ್ಷ
ಗಳಲ್ಲಿ ಇಲ್ಲಿಂದ ಬ್ರಿಟನ್ನಿಗೆ ರಫ್ತಾದ ಸಾಮಾನುಗಳನ್ನು ಶೇಕಡಾ ೧೦ರಷ
ಹೆಚ್ಚಿಸುವುದೂ ಕಷ್ಟಸಾಧ್ಯವಾಯಿತು.

ಹೀಗಾಗಿ ಹೊರಗಿನಿಂದ ಬರುವ ಪದಾರ್ಥಗಳ ಮೇಲೆ ಹಾಕುವ ಸುಂಕ
ದರ ಕೆಲವು ವಿಷಯಗಳಲ್ಲಿ ಶೇಕಡಾ ೭೫ ರಷ್ಟು ಹೆಚ್ಚಿದೆ. ಈಗ ಹೊರಗಿನಿಂ
ನಮ್ಮ ದೇಶಕ್ಕೆ ಬರುವ ಹತ್ತಿಯಿಂದ ತಯಾರಾದ ಬಟ್ಟೆ, ರೈಲ್ವೆ ಸಾಮಾನುಗಳ
ಸಕ್ಕರೆ, ಬೆಂಕಿಕಡ್ಡಿ, ಮೋಟಾರು, ಸಿನಿಮಾ ಚಿತ್ರಗಳು, ಗಡಿಯಾರಗಳು, ರೇಷ
ಬಟ್ಟೆ, ಹೊಗೆಸೊಪ್ಪು, ಸಿಗರೇಟುಗಳು, ಸೀಮೆಯೆಣ್ಣೆ, ಪೆಟ್ರೋಲಿಯಂ, ಬೇ
ಮಾದಕದ್ರವ್ಯಗಳು, ಇವುಗಳ ಮೇಲೆಲ್ಲಾ ಸುಂಕ ವಸೂಲ್ಮಾಡುತ್ತಾರೆ.
ಇವೆಲ್ಲವೂ ವಿದೇಶ ಪದಾರ್ಥಗಳಿಗೆ ಅನ್ವಯಿಸುವುದು.

ಹಾಗೆಯೇ ನಮ್ಮ ದೇಶದಿಂದ ಹೊರಕ್ಕೆ ರಫ್ತಾಗುವ ಪದಾರ್ಥಗಳ ಮೇಲ
ಸುಂಕ ವಸೂಲ್ಮಾಡುತ್ತಾರೆ. ೧೮೬೦ರ ವರೆಗೂ ಹೊರಕ್ಕೆ ಹೋಗುವ ವಸ್ತುಗ
ಮೇಲೆ ಕೇವಲ ಶೇಕಡಾ ಮೂರರಷ್ಟು ಮಾತ್ರ ಸುಂಕ ವಿಧಿಸಿತ್ತು. ೧೮೬
ರಿಂದ ೧೮೮೦ರ ವರೆಗಿನ ಇಪ್ಪತ್ತು ವರುಷಗಳಲ್ಲಿ ಅನೇಕ ಪದಾರ್ಥಗಳಮೇ
ಸುಂಕವನ್ನು ವಜಾಮಾಡಲಾಯಿತು. ೧೯೨೪ನೆ ಇಸ್ವಿಯಿಂದೀಚೆಗೆ ರಫ್ತಾಗು
ವಸ್ತುಗಳ ಮೇಲೆ ಸುಂಕದ ದರ ಹೆಚ್ಚಿಸಿದರು. ದೇಶೀಯ ಪದಾರ್ಥಗಳಿ
ರಕ್ಷಣೆಕೊಡುವ ಉದ್ದೇಶದಿಂದ ವಿದೇಶದ ವಸ್ತುಗಳ ಮೇಲಿನ ಸುಂಕ ಹೆಚ್ಚಿಸಿದರು
ಇದರಲ್ಲಿ ಸಾಮ್ರಾಜ್ಯಸರಕಾರದ ಹಿತವೇ ದೃಷ್ಟಿಯಲ್ಲಿದ್ದುದರಿಂದ ದೇಶೀಯೋತ್ಪ
ವಸ್ತುಗಳಿಗೆ ಹೆಚ್ಚು ಪ್ರೋತ್ಸಾಹ ದೊರೆಯಲಿಲ್ಲ. ಆದರೂ ಈಚೆಗೆ ಸಕ್ಕರೆ, ಉಕು
ಕಬ್ಬಿಣದ ಕೈಗಾರಿಕೆಗಳು ದೇಶದಲ್ಲಿ ಬೆಳೆಯುತ್ತ ಬಂದಿವೆ. ಇವುಗಳಿಂದ ದೇಶ
ಸಂಪದಭಿವೃದ್ಧಿ ಹೆಚ್ಚುವುದರಲ್ಲಿ ಸಂದೇಹವಿಲ್ಲ. ಈಗ ನಮ್ಮಿಂದ ಹೊರಕ್ಕೆ ರಫ್ತಾ
ಸುಂಕದ ಮೂಲಕ ಸರಕಾರಕ್ಕೆ ಆದಾಯ ತರುವ ಪದಾರ್ಥಗಳೆಂದರೆ ಸೆಣ
ಮತ್ತು ಅಕ್ಕಿ. ಹೊಸ ಸುಧಾರಣೆಗಳ ಪ್ರಕಾರವಾಗಿ, ಸೆಣಬಿನ ಮೇಲಿನ ಸುಂ
ದಿಂದ ಬರುವ ಆದಾಯದ ಒಂದು ಭಾಗವನ್ನು ಸೆಣಬು ಬೆಳೆಯುವ ಬಂಗಾ
ಅಸ್ಸಾಂ ಮತ್ತು ಬಿಹಾರ ಪ್ರಾಂತಗಳಿಗೆ ಕೊಡಬೇಕಾಯಿತು.

ಆಮದು ರಫ್ತುಗಳ ಮೇಲೆ ಹೇರುವ ಸುಂಕದಂತೆ ನಮ್ಮ ಇಂಡಿಯಾ ದೇ
ದಲ್ಲಿಯೇ ತಯಾರಾಗಿ ನಾವು ದಿನಂಪ್ರತಿ ಉಪಯೋಗಿಸುವ ಪದಾರ್ಥಗಳ ಮೇ
ವಿಧಿಸುವ ಆಬ್ಕಾರಿ ಸುಂಕ ಮೂರನೆಯದು. ಉಪ್ಪು, ಸಕ್ಕರೆ, ಬೆಂಕಿಕಡ್ಡಿ, ಇ
ಇಲ್ಲಿಯೇ ತಯಾರಾಗುವ ಪದಾರ್ಥಗಳು. ಇವುಗಳ ಮೇಲೆ ಹಾಕುವ ಸುಂಕ ಕೇಂ

ಸರಕಾರಕ್ಕೆ ಹೋಗುತ್ತದೆ. ಕೇಂದ್ರ ಮತ್ತು ಪ್ರಾಂತ ಸರಕಾರಗಳ ಆದಾಯ ಬಾಬುಗಳ ವಿಭಜನೆಯಾದಮೇಲೆ, ಕೇಂದ್ರ ಸರಕಾರದ ಹುಟ್ಟುವಳಿ ಸಾಲದೆ ಹೆಚ್ಚು ಆದಾಯ ಬಾಬುಗಳನ್ನು ಹುಡುಕಬೇಕಾದ ಪ್ರಸಂಗವೊದಗಿತು. ಆಗ ಬೆಂಕಿ ಕಡ್ಡಿ, ಸಕ್ಕರೆ, ಪೆಟ್ರೋಲಿಯಂ ಮೊದಲಾದುವುಗಳ ಮೇಲೆ ಸುಂಕ ಹಾಕಲು ಪ್ರಾರಂಭಿಸಿದರು.

ಒಟ್ಟಿನಲ್ಲಿ ಮಹಾಯುದ್ಧದಿಂದೀಚೆಗೆ ಸುಂಕದ ಉತ್ಪತ್ತಿ ದಿನೇ ದಿನೇ ಹೆಚ್ಚುತ್ತಿದೆ. ೧೯೧೩–೧೪ ರಲ್ಲಿ ಈ ಉತ್ಪತ್ತಿ ೧೧.೧೩ ಕೋಟಿ ರೂಪಾಯಿಗಳಷ್ಟಿದ್ದು ೧೯೩೫-೩೬ ರವೇಳೆಗೆ ೫೧.೮೪ ರೂಪಾಯಿಗಳಿಗೆ ಏರಿತು. ಮುಂದೆಯೂ ಕೂಡ ಸರಕಾರಕ್ಕೆ ಸುಂಕದ ಬಾಬಿನಿಂದ ಹೆಚ್ಚು ಆದಾಯ ಬರುವುದರಲ್ಲಿ ಸಂದೇಹವಿಲ್ಲ.

## ಆದಾಯ ತೆರಿಗೆ

ನಮ್ಮ ದೇಶದಲ್ಲಿ ಈ ತೆರಿಗೆ ಇತ್ತೀಚೆಗೆ ಪ್ರಾಮುಖ್ಯವನ್ನು ಪಡೆಯುತ್ತಿದೆ. ಇದು ಉತ್ತರೋತ್ತರ ಬೆಳೆಯಬಲ್ಲ ಪ್ರತ್ಯಕ್ಷವಾದ ತೆರಿಗೆಗಳಲ್ಲಿ ಬಹುಮುಖ್ಯವಾದುದು. ೧೯೩೫—೩೬ರಲ್ಲಿ ಈ ಬಾಬಿನಿಂದ ಕೇವಲ ೧೭ ಕೋಟಿ ರೂಪಾಯಿಗಳ ಹುಟ್ಟುವಳಿಯಾಯಿತು. ಇದು ಕೇಂದ್ರ ಸರಕಾರದ ಒಟ್ಟು ಆದಾಯದಲ್ಲಿ ಶೇಕಡಾ ಎಂಟರಷ್ಟೆನ್ನಬಹುದು. ಆದರೆ ಇದು ಇತರ ದೇಶಗಳ ಆದಾಯದ ಪ್ರಮಾಣದಷ್ಟಿಲ್ಲವೆನ್ನಬಹುದು. ಸಂಯುಕ್ತ ಸಂಸ್ಥಾನದಲ್ಲಿ ಸರಕಾರದ ಒಟ್ಟು ಆದಾಯದಲ್ಲಿ, ಆದಾಯ ಮತ್ತು ಆಸ್ತಿ ತೆರಿಗೆಗಳಿಂದ ಶೇಕಡಾ ೫೧ರಷ್ಟು, ಗ್ರೇಟ್ ಬ್ರಿಟನ್ನಿನಲ್ಲಿ ಶೇಕಡಾ ೩೮ರಷ್ಟು, ಜರ್ಮನಿಯಲ್ಲಿ ಶೇಕಡಾ ೩೫ರಷ್ಟು, ಫ್ರಾನ್ಸ್‌ನಲ್ಲಿ ಶೇಕಡಾ ೨೮ರಷ್ಟು ಜಪಾನಿನಲ್ಲಿ ಶೇಕಡಾ ೨೦ರಷ್ಟು ಉತ್ಪನ್ನವಾಗುತ್ತದೆ.

ನಮ್ಮ ದೇಶದಲ್ಲಿ ೧೮೬೦ನೆಯ ಇಸವಿಯಿಂದ ಆದಾಯದ ಮೇಲೆ ತೆರಿಗೆ ಹಾಕುವ ಪದ್ಧತಿ ರೂಢಿಗೆ ಬಂದಿತು. ೧೮೫೭ರಲ್ಲಿ ದೇಶದಾದ್ಯಂತ್ಯವೂ ಆದ ದಂಗೆಯ ಫಲವಾಗಿ ಸರಕಾರದ ಆದಾಯ ಕುಗ್ಗಿ ಹಣ ಕಾಸಿನ ಸ್ಥಿತಿಯಲ್ಲಿ ಮುಗ್ಗಟ್ಟೊದಗಿತು. ಈ ಮುಗ್ಗಟ್ಟನ್ನು ತಪ್ಪಿಸುವುದಕ್ಕಾಗಿ ಐದು ವರ್ಷಗಳ ಕಾಲ ಈ ವಿಧವಾದ ತೆರಿಗೆಯನ್ನು ವಸೂಲ್ಮಾಡಬೇಕೆಂದು ನಿರ್ಧಾರವಾಯಿತು. ಈ ತೆರಿಗೆ ಮೊದಮೊದಲು ವ್ಯಾಪಾರ ಮತ್ತು ವೃತ್ತಿಗಳ ಮೇಲೆ ಕೊಡಬೇಕಾಗಿದ್ದ ತೆರಿಗೆಯಂತೆ ಪ್ರಾರಂಭವಾಗಿ ೧೮೬೯ರಲ್ಲಿ ಸಾಧಾರಣವಾದ ತೆರಿಗೆಯಾಗಿ ಪರಿಣಮಿಸಿತು. ೧೮೭೨-೭೩ರಲ್ಲಿ ಈ ತೆರಿಗೆಯನ್ನು ವಜಾಮಾಡಿದರು. ಪುನಃ ೧೮೮೬ರಲ್ಲಿ ನಡೆದ ಬರ್ಮಾ ಯುದ್ಧದ ಪರಿಣಾಮವಾಗಿ ಸರಕಾರದ ಖರ್ಚು ಹೆಚ್ಚಿ ಅದರ ಜತೆಗೆ ಅಲ್ಲಲ್ಲಿ ಕ್ಷಾಮವೂ ತಲೆದೋರಿತು. ಆಗ ಸರಕಾರ ವ್ಯವಸಾಯೇತರ ಆದಾಯದ ಮೇಲೆ ಪ್ರಜೆಗಳು ತೆರಿಗೆ ಕೊಡುವಂತೆ ನಿರ್ಧರಿಸಿತು. ೧೯೧೬ರಿಂದೀಚೆಗೆ ಸರಕಾರ ಈ ತೆರಿಗೆಯನ್ನು ಬಲಪಡಿಸುತ್ತ ಬಂತು. ೧೯೧೭–೧೮ನೆಯ ಇಸವಿಯ

೫೦,೦೦೦ ರೂಪಾಯಿಗಳಿಗಿಂತ ಹೆಚ್ಚು ಆದಾಯವುಳ್ಳವರು ಅಧಿಕ ದರದ (Super-tax) ಆದಾಯ ತೆರಿಗೆಯನ್ನೂ ಕೊಡಬೇಕೆಂದು ತೀರ್ಮಾನಿಸಿದರು.

ಆದಾಯ ಹೆಚ್ಚಿದಂತೆಲ್ಲಾ ಈ ತೆರಿಗೆಯ ದರವೂ ಹೆಚ್ಚುತ್ತದೆ. ಸುಮಾರು ವರ್ಷಕ್ಕೆ ೨,೦೦೦ ರೂ. ಗಳ ಒಳಗೆ ಆದಾಯವುಳ್ಳವರಿಗೆ ಈ ತೆರಿಗೆ ಅನ್ವಯಿಸುವುದಿಲ್ಲ. ೨,೦೦೦ ರೂ. ಯಿಂದ ೪,೯೯೯ ರೂ. ಗಳ ಒಳಗೆ ಆದಾಯವುಳ್ಳವರು ರೂಪಾಯಿ ಒಂದಕ್ಕೆ ಆರು ಕಾಸಿನಂತೆ ತೆರಿಗೆ ಕೊಡಬೇಕು. ಆದಾಯ ಹೆಚ್ಚಿದಂತೆ ಇದರ ದರವೂ ಹೆಚ್ಚುತ್ತದೆ. ೧,೦೦,೦೦೦ ರೂ. ಗಳ ಮೇಲೆ ಆದಾಯವುಳ್ಳವರು ರೂಪಾಯಿಗೆ ಎರಡಾಣೆಯಂತೆ ತೆರಿಗೆ ಕೊಡಬೇಕು. ಈ ತೆರಿಗೆಯಿಂದ ೧೯೧೯–೨೦ರಲ್ಲಿ ಬಹು ಹೆಚ್ಚು ಆದಾಯ ಬಂದಿತು. ೧೯೨೪ರಿಂದ ಈಚೆಗೆ ಈ ಹುಟ್ಟುವಳಿಯಲ್ಲಿ ಹೆಚ್ಚು ಏರಿಳಿತಗಳಿಲ್ಲ. *೧೯೩೫-೩೬ ರಲ್ಲಿ ಈ ಬಾಬಿನಿಂದ ಇಂಡಿಯಾ ಸರಕಾರಕ್ಕೆ ಹದಿನೇಳು ಕೋಟಿ ರೂಪಾಯಿಗಳ ಆದಾಯವಿದೆ. ೧೮೬೧–೬೨ರಲ್ಲಿ ಕೇವಲ ಎರಡು ಕೋಟಿಯಷ್ಟು ಮಾತ್ರ ಹುಟ್ಟುವಳಿಯಿದ್ದುದು ಈಗ ಹದಿನೇಳು ಕೋಟಿ ರೂಪಾಯಿಗಳಿಗೇರಿರುವುದು, ಈ ಬಾಬಿನಿಂದ ಆದಾಯ ಹೇಗೆ ದಿನೇ ದಿನೇ ಬಲಗೊಳ್ಳುತ್ತಿದೆ ಎಂಬುದನ್ನು ಸೂಚಿಸುತ್ತದೆ.

ಇಂಡಿಯಾ ದೇಶದ ಆದಾಯದ ತೆರಿಗೆಯ ದರವನ್ನು ಪಾಶ್ಚಾತ್ಯ ದೇಶಗಳ ದರಗಳೊಂದಿಗೆ ಹೋಲಿಸಿದರೆ ಈ ದರ ತೀರ ಅಲ್ಪ. ಹೀಗೆಂದ ಮಾತ್ರದಿಂದ ಆದಾಯ ಪಡೆಯುತ್ತಿರುವವರ ಮೇಲೆ ಸರಿಯಾಗಿ ತೆರಿಗೆಯ ಹೊರೆ ಬಿದ್ದಿಲ್ಲವೆಂದಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಪ್ರಜೆಗಳ ಸರಾಸರಿ ಆದಾಯ ಬಹಳ ಮೇಲಿನ ಮಟ್ಟದಲ್ಲಿರುತ್ತದೆ. ಇಂಡಿಯಾ ದೇಶದವರ ಆದಾಯ ಬಹು ಕಡಮೆ. ಕೆಲವರಿಗೆ ಈಗಿನ ದರದ ಪ್ರಕಾರ ತೆರಿಗೆ ಕೊಡುವುದು ಕೂಡಾ ಕಷ್ಟವೆನಿಸುತ್ತದೆ.

## ಉಪ್ಪು

ಕಳೆದ ೧೯೧೪–೧೮ರಲ್ಲಿ ನಡೆದ ಯುದ್ಧಕ್ಕೆ ಮುಂಚೆ ಇಂಡಿಯಾ ಸರಕಾರದ ಹುಟ್ಟುವಳಿಯನ್ನು ಗಳಿಸಿ ಕೊಡುವುದರಲ್ಲಿ ಆದಾಯದ ತೆರಿಗೆಯನ್ನು ಬಿಟ್ಟರೆ ಉಪ್ಪಿನ ಮೇಲಿನ ತೆರಿಗೆಯೇ ಮುಖ್ಯವಾದುದು.† ೧೮೪೩ನೆಯ ಇಸವಿಗೆ ಮೊದಲು, ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸುವ ಪದಾರ್ಥಗಳ ಮೇಲೆ ಹಾಕುವ ಪ್ರದೇಶಾಂತರ ತೆರಿಗೆಯಂತೆಯೇ (Transit duties) ಉಪ್ಪಿನ ಮೇಲೆಯೂ ತೆರಿಗೆ ಹಾಕುತ್ತಿದ್ದರು. ೧೮೪೩ರಲ್ಲಿ ಈ ವಿಧಾನ

---

* ಇತ್ತೀಚಿನ ಘೋರಯುದ್ಧದ ಕಾಲದಲ್ಲಿ ಈ ತೆರಿಗೆ ದರಗಳನ್ನು ಬಹಳಮಟ್ಟಿಗೆ ಹೆಚ್ಚಿಸಿ ತೆರಿಗೆ ರೀತಿ ನೀತಿಗಳನ್ನು ಮಾರ್ಪಾಡುಮಾಡಿ ಕೇಂದ್ರ ಸರಕಾರದ ಆದಾಯದಲ್ಲಿ ಅರ್ಧದಷ್ಟು ಭಾಗವನ್ನು ಆದಾಯ ತೆರಿಗೆಗಳಿಂದ ಸಂಗ್ರಹಿಸಿರುವ ವಿಷಯವನ್ನು ಪ್ರತ್ಯೇಕವಾಗಿ ಅನುಬಂಧದಲ್ಲಿ ಸಂಕ್ಷಿಪ್ತವಾಗಿ ಸೂಚಿಸಿರುತ್ತದೆ.

† ೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ ಈ ತೆರಿಗೆಯನ್ನು ವಜಾ ಮಾಡಿರುತ್ತಾರೆ.

ಕೊನೆಗಂಡಿತು. ಆಗಿನಿಂದ ದೇಶದಲ್ಲಿ ತಯಾರಾದ ಉಪ್ಪಿನ ಮೇಲೆಲ್ಲಾ ಒಟ್ಟು ತೆರಿಗೆಹಾಕಲು ಉಪಕ್ರಮಿಸಿದರು. ೧೯೦೩ನೆಯ ಇಸವಿಯವರೆಗೂ ಉಪ್ಪಿನ ಮೇಲಿನ ತೆರಿಗೆ ಬಹಳ ವಿಪರೀತವಾಗಿತ್ತು. ೧೮೮೨ರಲ್ಲಿ ಮಣ ಒಂದಕ್ಕೆ ರೂ. ೨-೦-೦ ಪ್ರಕಾರ ತೆರಿಗೆಯಿದ್ದದ್ದು ೧೮೮೮ರ ವೇಳೆಗೆ ಇದು ರೂ. ೨-೮-೦ ಆಯಿತು. ೧೯೦೩ರಲ್ಲಿ ಇದನ್ನು ಪುನಃ ಎರಡು ರೂಪಾಯಿಗೆ ಇಳಿಸಿದರು. ೧೯೦೫ ರಲ್ಲಿ ರೂ. ೧-೮-೦ ಗೂ, ೧೯೦೭ ರಲ್ಲಿ ರೂ. ೧-೦-೦ಕ್ಕೂ ಇದನ್ನು ತಗ್ಗಿಸಿದರು. ೧೯೧೪ ರಲ್ಲಿ ಪುನಃ ಇದನ್ನು ರೂ. ೧-೪-೦ ಗೆ ಏರಿಸಿದರು. ೧೯೩೧ನೆಯ ಇಸವಿಯುವರೆಗೂ ಇದೇ ದರವಿದ್ದು ಆಗ ಅದನ್ನು ರೂ. ೧-೯-೦ಗೆ ಹೆಚ್ಚಿಸಿದರು. ನಮ್ಮ ದೇಶದಲ್ಲಿ ತಯಾರಾಗುವ ಉಪ್ಪಿನ ಮೇಲೆ ಸರಕಾರದವರು ಮೂರು ವಿಧವಾಗಿ ಸುಂಕವನ್ನು ವಸೂಲ್ಮಾಡುತ್ತಾರೆನ್ನಬಹುದು :

i. ಇಂಡಿಯಾ ದೇಶದಲ್ಲಿ ತಯಾರಾದ ಉಪ್ಪಿನ ಮೇಲೆ ಒಂದು ಸಾಮಾನ್ಯ ತೆರಿಗೆಯನ್ನು ವಿಧಿಸಿ.

ii. ಹೊರಗಿನಿಂದ ಬರುವ ಉಪ್ಪಿನ ಮೇಲೆ ಸುಂಕವನ್ನು ಹಾಕಿ.

iii. ಸರಕಾರದವರೇ ತಯಾರಿಸಿದ ಉಪ್ಪನ್ನು ಮಾರಿ.

ಈ ಮೂರು ಮಾರ್ಗಗಳಲ್ಲಿ ಮೊದಲನೆಯ ಮಾರ್ಗದಿಂದ ಸರಕಾರದ ಹುಟ್ಟುವಳಿಯ ಬಹುಭಾಗ ಬರುತ್ತದೆ.

ನಮ್ಮಲ್ಲಿ * ಪಂಜಾಬ್ ಮತ್ತು ವಾಯವ್ಯ ಪ್ರಾಂತದ ಕೋಹಟ್ ಗಣಿಯಲ್ಲಿಯೂ, ರಾಜಪುತ್ರಸ್ಥಾನದಲ್ಲಿ ಸಂಭರದಲ್ಲಿಯೂ, ರಾಣ್ ಮತ್ತು ಕಚ್ ದೇಶಗಳ ಗಡಿಗಳಲ್ಲಿಯೂ, ಬೊಂಬಾಯಿ ಮತ್ತು ಮದರಾಸ್ ಬಳಿ ಸ್ಥಾಪಿತವಾಗಿರುವ ಸಮುದ್ರದಿಂದ ಉಪ್ಪು ತಯಾರ್ಮಾಡುವ ಸ್ಥಳಗಳಲ್ಲಿಯೂ, ಸಿಂಧೂನದಿಯ ಮುಖ ಪ್ರಾಂತದಲ್ಲಿಯೂ ಉಪ್ಪು ದೊರೆಯುತ್ತದೆ.

ಉಪ್ಪು, ಪ್ರತಿಯೊಬ್ಬನೂ, ಅವನು ಬಡವನಾಗಲಿ, ಭಾಗ್ಯವಂತನಾಗಲಿ ಉಪಯೋಗಿಸುವ ಪದಾರ್ಥ. ಇದರ ಮೇಲೆ ತೆರಿಗೆ ಹಾಕುವುದರಿಂದ ಬಹು ಮಂದಿ ಬಡವರಿಗೆ ತೊಂದರೆಯಾಗುತ್ತದೆ ; ಇದು ಜನಪ್ರಿಯವಾದ ತೆರಿಗೆಯಲ್ಲ. ಆದ್ದರಿಂದ ಇದನ್ನು ತೆಗೆದುಹಾಕಬೇಕೆಂದು ಜನಸಾಮಾನ್ಯ ಅಭಿಪ್ರಾಯಪಡಬಹುದು. ಆದರೆ ಇದನ್ನು ತೆಗೆದುಹಾಕುವುದರಿಂದ ಸರಕಾರಕ್ಕೆ ವರ್ಷಂಪ್ರತಿ ಸುಮಾರು ಎಂಟು ಕೋಟಿ ರೂಪಾಯಿಗಳಷ್ಟು ನಷ್ಟವಾಗುವುದು. ಈಗ ಜನಸಾಮಾನ್ಯವು ಸಾಧಾರಣವಾಗಿ ಸರಕಾರಕ್ಕೆ ಇತರ ಯಾವ ವಿಧವಾಗಿಯೂ ಪ್ರತ್ಯಕ್ಷ ತೆರಿಗೆಯನ್ನು ಸಲ್ಲಿಸುತ್ತಿಲ್ಲ. ಸರಕಾರದ ರಕ್ಷಣೆಗೆ ಒಳಪಟ್ಟು, ಅದರ ಸೌಕರ್ಯ ಮತ್ತು ಸೌಲಭ್ಯಗಳನ್ನು ಅನುಭವಿಸುವ ಪ್ರತಿಯೊಬ್ಬ ಪ್ರಜೆಯೂ ಯಾವುದಾದರೂ ಒಂದು ವಿಧವಾಗಿ ಸರಕಾರಕ್ಕೆ ತೆರಿಗೆ ಸಲ್ಲಿಸಬೇಕಾದುದು ಧರ್ಮ. ಹೀಗೆ ಬಡವರಿಂದಲೂ ಯಾವುದಾದರೊಂದು ತೆರಿಗೆಯನ್ನು ವಸೂಲ್ಮಾಡಬೇಕಾದರೆ ಉಪ್ಪಿನ ತೆರಿಗೆಯನ್ನು ಬಿಟ್ಟು ಗತ್ಯಂತರವಿಲ್ಲ ಎಂದು ಸರಕಾರದವರೆನ್ನುತ್ತಾರೆ. ಉಪ್ಪು ಆಹಾರ

---

* ಇದರಲ್ಲಿ ಕೆಲವುಭಾಗ ಈಗ ಪಾಕೀಸ್ಥಾನಕ್ಕೆ ಸೇರಿರುತ್ತದೆ.

ಪದಾರ್ಥಗಳಿಗೆ ಅತ್ಯಾವಶ್ಯಕವಾದುದರಿಂದ ಇದರ ಮೇಲಿನ ತೆರಿಗೆಯ ಬಹುಭಾಗ ವನ್ನು ನಮ್ಮಲ್ಲಿ ಬಡವರೇ ಹೊರಬೇಕಾಗುವುದು. ಇದರ ದರವನ್ನು ಆದಷ್ಟು ಕಡಮೆಮಾಡುವುದು ಒಳ್ಳೆಯದು.

## ಅಫೀಂ

ಅಫೀಮು ನಮ್ಮ ದೇಶದಲ್ಲಿ, ಸಂಯುಕ್ತ ಪ್ರಾಂತದಲ್ಲಿ, ಮಧ್ಯ ಇಂಡಿಯಾ ಪ್ರಾಂತಗಳಲ್ಲಿ, ಮತ್ತು ಗ್ವಾಲಿಯರ್ ಸಂಸ್ಥಾನಗಳಲ್ಲಿ, ಸರಕಾರದ ಮೇಲ್ವಿಚಾರಣೆ ಯಲ್ಲಿ ತಯಾರಾಗುತ್ತದೆ. ಹೀಗೆ ತಯಾರಾದ ಅಫೀಮನ್ನು ಘಜೀಪುರದಲ್ಲಿ ನಾಜೂಕು ಮಾಡಿ ಹೊರದೇಶಗಳ ಮತ್ತು ಇಲ್ಲಿಯ ಉಪಯೋಗಕ್ಕಾಗಿ, ಮತ್ತು ಔಷಧಗಳ ತಯಾರಿಕೆಗಾಗಿ ಮಾರುತ್ತಾರೆ. ಹಿಂದೆ ಇಲ್ಲಿ ತಯಾರಾದ ಅಫೀಮು ಚೀನಾ ದೇಶಕ್ಕೆ ಬಹಳವಾಗಿ ಹೋಗುತ್ತಿತ್ತು. ಇದನ್ನು ತಡೆಯಲು ಅಥವಾ ಆದಷ್ಟು ಕಡಮೆಮಾಡಲು ಚೀನಾ ಸರಕಾರ ಪ್ರಯತ್ನಪಟ್ಟಿತು. ಅದರ ಫಲವಾಗಿ ೧೯೦೭ ಮತ್ತು ೧೯೧೧ನೆಯ ಇಸ್ವಿಗಳಲ್ಲಿ ಈ ವ್ಯಾಪಾರದ ಸಂಬಂಧವಾಗಿ ಇಂಡಿಯಾ ಮತ್ತು ಚೀನಾ ಸರಕಾರಗಳಿಗೆ ಒಪ್ಪಂದವಾಯಿತು. ಆಗಿನಿಂದ, ಇಲ್ಲಿಂದ ರಫ್ತಾಗುತ್ತಿದ್ದ ಅಫೀಮು ಕಡಮೆ ಬೀಳುತ್ತ ಬಂತು. ೧೯೨೬ರಲ್ಲಿ, ವೈದ್ಯವಸ್ತುಗಳ ಉಪಯೋಗಕ್ಕಾಗಿ ಬಿಟ್ಟು ಇತರ ವಿಧವಾಗಿ ಅಫೀಮನ್ನು ಇಲ್ಲಿಂದ ಹೊರಗೆ ಕಳುಹಿಸ ಕೂಡದೆಂದು ತೀರ್ಮಾನವಾಯಿತು. ನಮ್ಮ ದೇಶದಲ್ಲಿ ಉಪಯೋಗಿಸುತ್ತಿದ್ದ ಅಫೀಮಿನ ಪ್ರಮಾಣವೂ ಕಡಮೆಯಾಗುತ್ತಿದೆ. ಒಂದು ಕಾಲದಲ್ಲಿ ಈ ಬಾಬಿನಿಂದ ಸರಕಾರಕ್ಕೆ ಸುಮಾರು ಎಂಟು ಕೋಟಿ ರೂಪಾಯಿಗಳಷ್ಟು ಆದಾಯ ಬರುತ್ತಿದ್ದು ಈಗ ಅದು ಕೇವಲ ಅರುವತ್ತು ಲಕ್ಷ ರೂಪಾಯಿಗೆ ಇಳಿದಿದೆ.

## ರೈಲ್ವೆಗಳು

ಕೇಂದ್ರ ಸರಕಾರದ ೧೯೩೫-೩೬ನೆಯ ವರ್ಷದ ಆದಾಯದ ಪಟ್ಟಿಯನ್ನು ನೋಡಿದರೆ ರೈಲ್ವೆ ಬಾಬಿನಿಂದ ಸುಮಾರು ೩೨ ಕೋಟಿ ರೂಪಾಯಿಗಳಷ್ಟು ಆದಾಯ ಬಂದಂತೆ ಸೂಚಿಸಲಾಗಿದೆ. ಇದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಆ ವರ್ಷ, ಕೇಂದ್ರ ಸರಕಾರದ ಹುಟ್ಟುವಳಿಗೆ ಈ ಬಾಬಿನಿಂದ ಯಾವ ವಿಧವಾದ ಸಹಾಯವೂ ದೊರೆತಿಲ್ಲವೆಂಬುದು ತಿಳಿದುಬರುತ್ತದೆ.

೧೯೨೫ರವರೆಗೂ ರೈಲ್ವೆಗಳಿಂದ ಬರುವ ಆದಾಯ ಅದಕ್ಕೆ ತಗಲುವ ಎಲ್ಲ ವಿಧವಾದ ಖರ್ಚು, ಇವುಗಳನ್ನು ಇತರ ಬಾಬುಗಳಂತೆಯೇ ಕೇಂದ್ರ ಸರಕಾರದ " ಬಡ್ಜೆಟ್ " ನಲ್ಲಿ ಸೇರಿಸುವ ಪದ್ಧತಿಯಿತ್ತು. ಆಕ್ವರ್ತ್ ಸಮಿತಿಯ (Acworth Committee) ಸಲಹೆಗಳ ಮೇಲೆ, ೧೯೨೪ರಲ್ಲಿ ಇಂಡಿಯಾ ಸರಕಾರದ ಶಾಸನ ಸಭೆಯವರು, ರೈಲ್ವೆಗಳ ಆಯವ್ಯಯವನ್ನು ಸರಕಾರದ ಆಯವ್ಯಯದಿಂದ ಪ್ರತ್ಯೇ

ಕಿಸಬೇಕೆಂದು ತೀರ್ಮಾನಮಾಡಿದರು. ಇದರಂತೆ ಈಚೆಗೆ ರೈಲ್ವೆಗಳ ಆಯವ್ಯಯ ವನ್ನು ತೋರಿಸುವ "ಬಡ್ಜೆಟ್" ಪ್ರತ್ಯೇಕವಾಗಿ ತಯಾರಾಗುತ್ತಿದೆ. ಅಲ್ಲದೆ ಪ್ರತಿವರ್ಷವೂ, ಸರಕಾರದವರು ರೈಲ್ವೆಗಳ ಬೆಳವಣಿಗೆಗೆ ಸಹಾಯಮಾಡಿರುವ ಹಣ, ಭೂಮಿ ಮೊದಲಾದ ಸೌಲಭ್ಯಗಳಿಗಾಗಿ, ಒಂದು ನಿಗದಿಯಾದ ಮೊಬಲಗನ್ನು ರೈಲ್ವೆ ಬಾಬಿನಿಂದ, ಸರಕಾರದ ಸಾಮಾನ್ಯ ಹುಟ್ಟುವಳಿಗೆ ರೈಲ್ವೆ ಬಡ್ಜೆಟ್ಟಿನಿಂದ ಸಲ್ಲಿಸಬೇಕೆಂದೂ ತೀರ್ಮಾನವಾಯಿತು.

೧೮೪೫ನೆ ಇಸ್ವಿಯ ವೇಳೆಗೆ ನಮ್ಮ ದೇಶದಲ್ಲಿ ರೈಲ್ವೆ ಸ್ಥಾಪಿತವಾಯಿತು. ೧೯೦೦ರವರೆಗೂ ರೈಲ್ವೆಗಳಿಂದ ಸರಕಾರಕ್ಕೆ ಆದಾಯ ಬರಲೇ ಇಲ್ಲ ಈ ಬಾಬಿ ನಿಂದ ೫೮೫ ಲಕ್ಷ ಪೌಂಡುಗಳಷ್ಟು ಸರಕಾರಕ್ಕೆ ನಷ್ಟವಾಯಿತು. ೧೯೦೦ರಿಂದ ೧೯೩೦ರವರೆಗಿನ ಮುವ್ವತ್ತು ವರುಷಗಳ ಕಾಲದಲ್ಲಿ ರೈಲ್ವೆಗಳಿಂದ ಸರಕಾರಕ್ಕೆ ಅಲ್ಪಸ್ವಲ್ಪ ಹಣ ಪಾವತಿಯಾಯಿತು. ೧೯೩೧ರಿಂದ ಈಚೆಗೆ ಮುಗ್ಗಟ್ಟೊದಗಿ ರೈಲ್ವೆ ಬಡ್ಜೆಟ್ಟಿನಲ್ಲಿ ಆದಾಯಕ್ಕಿಂತ ವೆಚ್ಚ ಹೆಚ್ಚುತ್ತಿದೆ. ಇದರಿಂದ ಸರಕಾರಕ್ಕೆ ನ್ಯಾಯ ವಾಗಿ ರೈಲ್ವೆ ಬಾಬಿನಿಂದ ಸಲ್ಲಬೇಕಾದ ಮೊಬಲಗು ಪಾವತಿಯಾಗುತ್ತಿಲ್ಲ. ರೈಲ್ವೆ ಬಡ್ಜೆಟ್ಟಿನ ಆದಾಯ ವೆಚ್ಚಗಳನ್ನು ಸರಿತೂಗಿಸುವುದೇ ಕಷ್ಟವಾಗಿರುವುದರಿಂದ, ಈ ಹಣವನ್ನು ಕೇಂದ್ರ ಸರಕಾರದವರು ಮನ್ನಾಮಾಡಿದ್ದಾರೆ.

೧೯೩೫-೩೬ರಲ್ಲಿ ಹಿಂದಿನ ಪಟ್ಟಿಯಲ್ಲಿ ತೋರಿಸಿರುವ ೩೨ ಕೋಟಿ ರೂಪಾಯಿ ಗಳು, ರೈಲ್ವೆ ಬಾಬಿನ ಒಟ್ಟು ವರಮಾನ. ಆ ವರ್ಷದ ಖರ್ಚು, ವರಮಾನಕ್ಕಿಂತ ಸುಮಾರು ನಾಲ್ಕೂವರೆ ಕೋಟಿ ರೂಪಾಯಿನಷ್ಟು ಹೆಚ್ಚಿತ್ತು. ಆ ಕಾರಣದಿಂದ ಪ್ರತಿವರ್ಷವೂ ಕೇಂದ್ರ ಸರಕಾರಕ್ಕೆ ರೈಲ್ವೆಗಳು ಸಲ್ಲಿಸಬೇಕಾಗಿದ್ದ ಹಣವನ್ನು ಕೂಡ ಪಾವತಿಮಾಡಲಿಲ್ಲ. ಇದರಿಂದ ಆ ವರ್ಷ ಕೇಂದ್ರ ಸರಕಾರಕ್ಕೆ ರೈಲ್ವೆ ಗಳಿಂದ ಏನೂ ನಿವ್ವಳ ಆದಾಯ ಬಂದಿಲ್ಲವೆಂಬುದು ಸ್ಪಷ್ಟವಾಗುತ್ತದೆ

## ಬಿ. ಪ್ರಾಂತ ಸರಕಾರಗಳ ಹುಟ್ಟುವಳಿ

೧೯೧೯ನೆಯ ಇಸ್ವಿಯ ಮಾಂಟೆಗೂ ಚೆಲ್ಮ್ಸ್‌ಫರ್ಡ್ ಸುಧಾರಣೆಗಳ ಮತ್ತು ೧೯೩೫ನೆಯ ಇಸ್ವಿಯ ಇಂಡಿಯಾ ಸರಕಾರದ ಮಸೂದೆಯ ಪರಿಣಾಮವಾಗಿ ಪ್ರಾಂತಗಳ ಸ್ವಾತಂತ್ರ್ಯ ದೊರೆತು ಅವುಗಳ ಕರ್ತವ್ಯ ನಿರ್ವಾಹ ಮತ್ತು ಆದಾಯ ವೆಚ್ಚಗಳ ಪ್ರತ್ಯೇಕ ವಿಭಜನೆಯಾಯಿತು. ಇದನ್ನನುಸರಿಸಿ ಪ್ರಾಂತ ಸರಕಾರಗಳು ನಡೆಸಬೇಕಾದ ಕೆಲಸಗಳನ್ನು ನಿರ್ವಹಿಸುವುದಕ್ಕಾಗಿ ಅವುಗಳಿಗೆ ಕೆಲವು ಹುಟ್ಟುವಳಿ ಬಾಬುಗಳನ್ನು ಮೀಸಲಾಗಿಡಲಾಗಿದೆ. ಪ್ರಾಂತಗಳ ಹುಟ್ಟುವಳಿ ಸಾಧಾರಣವಾಗಿ, ಭೂಕಂದಾಯ, ಅಬ್ಕಾರಿ, ಸ್ಟಾಂಪು, ಕಾಡುಖಾತೆ, ರಿಜಿಸ್ಟ್ರೇಷನ್, ನೀರಾವರಿ ಕೆಲಸಗಳು ಮೊದಲಾದ ಬಾಬುಗಳಿಂದ ಉತ್ಪನ್ನ ವಾಗುತ್ತದೆ. ೧೯೩೫ರಲ್ಲಿ ಪ್ರಾಂತ ಸ್ವಾತಂತ್ರ್ಯ ದೊರೆತಮೇಲೆ ಕೆಲವು ಗೊತ್ತಾದ ಹೊಸ ತೆರಿಗೆಗಳನ್ನು (Scheduled taxes) ಹಾಕುವ ಪದ್ಧತಿ ರೂಢಿಗೆ ಬಂದಿದೆ.

ಇವುಗಳಲ್ಲಿ ವ್ಯಾಪಾರದ ತೆರಿಗೆ, ವ್ಯವಸಾಯದಿಂದ ಬರುವ ಆದಾಯದ ಮೇಲೆ ತೆರಿಗೆ, ಜೂಜಿನ ಮೇಲೆ ತೆರಿಗೆ, ವಿನೋದಾವಳಿಗಳಿಂದ ತೆರಿಗೆ, ಇವು ಕೆಲವು.

ಪ್ರಾಂತ ಸರಕಾರದ ಹುಟ್ಟುವಳಿಯ ಬಾಬುಗಳಲ್ಲಿ ಕೆಲವನ್ನು ಇಲ್ಲಿ ಸ್ಥೂಲವಾಗಿ ಪರಿಶೀಲಿಸಲಾಗುವುದು.

## ಭೂಕಂದಾಯ

ಭೂಕಂದಾಯ ಪ್ರಾಂತ ಸರಕಾರಗಳು ಈಗ (ಅಂದರೆ ೧೯೩೫-೩೬ರ ಲ್ಲಿ) ಪಡೆಯುವ ಹುಟ್ಟುವಳಿಯ ಬಾಬುಗಳಲ್ಲಿ ಬಹು ಮುಖ್ಯವಾದುದು. ೧೯೩೩-೩೪ನೆ ಇಸ್ವಿಯಲ್ಲಿ ಈ ಬಾಬಿನಿಂದ ಬ್ರಿಟಿಷ್ ಇಂಡಿಯಾದಲ್ಲಿ ೨೯.೯೯ ಕೋಟಿ ರೂಪಾಯಿ ಗಳಷ್ಟು ಉತ್ಪತ್ತಿಯಾಯಿತು. ೧೮೭೦-೭೧ರಲ್ಲಿ ಭೂಕಂದಾಯದಿಂದ ೨೧ ಕೋಟಿ ರೂಪಾಯಿಗಳಷ್ಟು ಆದಾಯವಿದ್ದು ೧೯೩೫-೩೬ರ ವೇಳೆಗೆ ಸುಮಾರು ೩೨ ಕೋಟಿ ರೂಪಾಯಿನಷ್ಟು ಏರಿದೆ. ಭೂಕಂದಾಯದ ವಿಷಯವನ್ನು ಪ್ರಸ್ತಾಪಿಸುವಾಗ ಎರಡು ತೊಡಕಾದ ಪ್ರಶ್ನೆಗಳು ನಮ್ಮ ಮುಂದೆ ನಿಲ್ಲುತ್ತವೆ.

೧. ಸಾಮಾನ್ಯವಾಗಿ ರೈತಾಪಿ ಜನರು ಉತ್ತು ಬಿತ್ತಿ ಬೇಸಾಯಮಾಡುವ ಅಥವಾ ಜಮೀನ್ದಾರರು ಅನುಭವಿಸುತ್ತಿರುವ ಭೂಮಿಯ ಸ್ವಾಮ್ಯ, ಸರಕಾರದ್ದೇ ಅಥವಾ ಅದನ್ನು ಹಿಂದಿನಿಂದಲೂ ಅನುಭವಿಸುತ್ತಿರುವವರದೇ?

೨. ಭೂಮಿಯಮೇಲೆ ವಸೂಲ್ಮಾಡುವ ತೆರಿಗೆ, ಅದರ ಮೇಲಿನ ಒಡೆತನ ಕ್ಕಾಗಿ ಪ್ರಜೆಗಳು ಸರಕಾರಕ್ಕೆ ಸಲ್ಲಿಸುವ ಕಾಣಿಕೆಯೋ ಅಥವಾ ತಾವು ಅದರಿಂದ ಪಡೆಯುವ ಆದಾಯಕ್ಕೆ ಬದಲು ಕೊಡುವ ಗುತ್ತಿಗೆಯೋ?—ಇವು ಸಹಜವಾದ ಪ್ರಶ್ನೆಗಳು.

ನಮ್ಮ ದೇಶದಲ್ಲಿ ಜನರು ಅನುಭವಿಸುತ್ತಿರುವ ಭೂಮಿಯಮೇಲೆ ಸರಕಾರಕ್ಕೆ ಸ್ವಾಮ್ಯವಿದೆಯೆಂಬ ಅಭಿಪ್ರಾಯ ಹಿಂದಿನಿಂದಲೂ ಇದ್ದಂತೆ ಕಂಡುಬರುವುದಿಲ್ಲ. ಈ ಭಾವನೆ ಬ್ರಿಟಿಷರು ಇಲ್ಲಿಗೆ ಬರುವುದಕ್ಕೆ ಹಿಂದಿನಿಂದಲೂ, ನಮ್ಮ ಜನರಲ್ಲಿ, ಮತ್ತು ಸರಕಾರಗಳಲ್ಲಿ ಮೂಡಿದ್ದಂತೆ ತೋರುತ್ತದೆ. ಜನರು ಅನುಭವಿಸುತ್ತಿರುವ ಜಮೀನು ಗಳ ಒಡೆತನ ಅವರಿಗೇ ಸೇರಿದುದೆಂದು ಹಿಂದೂ ಮತ್ತು ಮುಸ್ಲಿಂ ದೊರೆಗಳಿಬ್ಬರೂ ತೀರ್ಮಾನಿಸಿದ್ದರೆಂಬುದಕ್ಕೂ ಪ್ರಮಾಣಗಳಿವೆ. ಹದಿನೆಂಟನೆಯ ಶತಮಾನದಲ್ಲಿ ಮೊಗಲ ಸಾಮ್ರಾಜ್ಯವೊಡೆದು ಅಲ್ಲಲ್ಲಿ ಸಣ್ಣಪುಟ್ಟರಾಜರು ಸರಕಾರಗಳನ್ನು ಸ್ಥಾಪಿಸಿ, ತಮ್ಮ ಪ್ರಾಬಲ್ಯದಿಂದ ಆ ಪ್ರಾಂತಗಳು ತಮಗೆ ಸೇರಿದುವೆಂದೂ ಅಲ್ಲಿಯ ಭೂಮಿಯ ಒಡೆತನ ತಮ್ಮದೆಂದೂ ಮೆರೆದರು. ಬ್ರಿಟಿಷರು ಬಂದು, ತಮ್ಮ ಪ್ರಭುತ್ವವನ್ನು ಇಲ್ಲಿ ಸ್ಥಾಪಿಸಿದಮೇಲೆ ಭೂಮಿಯಮೇಲಿನ ಸ್ವಾಮ್ಯ ಅದನ್ನು ಅನುಭವಿಸುವ ಪ್ರಜೆಯದೇ ಎಂದು ತೀರ್ಮಾನವಾಯಿತು. ಭೂಮಿ ಯಾರ ಅನುಭವದಲ್ಲೇ ಇರಲಿ, ಅವನು ರೈತನಾಗಲಿ, ಜಮೀನ್ದಾರನಾಗಲೀ ಅದರ ಮೇಲಿನ ಒಡೆತನ ಅವನಿಗೆ ಸೇರಿದ್ದು. ರೈತವಾರಿಕ್ರಮ ಆಚರಣೆಯಲ್ಲಿರುವ ಬೊಂಬಾಯಿ ಪ್ರಾಂತದಲ್ಲಿ ಕೂಡ ಜಮೀನ್

ದಾರನಿಗೆ ತನ್ನ ಜಮೀನಿನ ಮೇಲೆ ಎಷ್ಟು ಹಕ್ಕಿದೆಯೋ ಅಷ್ಟೇ ಹಕ್ಕು ಒಬ್ಬ ರೈತನಿಗೂ ಇದೆ. ಸರಕಾರಕ್ಕೆ ಸಲ್ಲಿಸಬೇಕಾದ ಕಂದಾಯವನ್ನು ಸರಕಾರಕ್ಕೆ ಸಲೀಸಾಗಿ ಪಾವತಿ ಮಾಡುತ್ತಿರುವವರೆಗೂ ಈ ಹಕ್ಕಿಗೆ ಚ್ಯುತಿಯಿಲ್ಲ.

## ಭೂಕಂದಾಯ ತೆರಿಗೆಯೋ ಕಾಣಿಕೆಯೋ ?

ಜಮೀನಿನ ಮೇಲಿನ ಹಕ್ಕು ಅದನ್ನು ಅನುಭವಿಸುವವನದು ಎಂದಮೇಲೆ ಆ ಜಮೀನಿಗಾಗಿ ಅವನು ಸರಕಾರಕ್ಕೆ ತೆರುವ ಹಣ, ಒಬ್ಬ ಒಡೆಯನಿಗೆ ಸಲ್ಲಿಸುವ ಕಪ್ಪದಂತಲ್ಲ. ಅದು ನಾವು ಆ ಭೂಪ್ರದೇಶದಿಂದ ಪಡೆಯುವ ಆದಾಯಕ್ಕೆ ಬದಲು ಕೊಡುವ ತೆರಿಗೆಯಂತಾಯಿತು. ಈ ಪ್ರಶ್ನೆಯನ್ನು ವಿದ್ವಾಂಸರು ವಿಪುಲವಾಗಿ ಚರ್ಚಿಸಿದ್ದರೂ ಇನ್ನೂ ಭಿನ್ನಾಭಿಪ್ರಾಯವಿದ್ದೇ ಇದೆ. ಒಂದು ದೇಶಕ್ಕೆ ಸೇರಿದ ಜಮೀನೆಲ್ಲವೂ ಆ ದೇಶದ ಸರಕಾರಕ್ಕೆ ಸೇರಿದುದು ಎಂದು ಅಭಿಪ್ರಾಯಪಟ್ಟಲ್ಲಿ, ಆ ಜಮೀನಿನಲ್ಲಿ ಉತ್ಪತ್ತಿಯಾದ ಆದಾಯವನ್ನೆಲ್ಲಾ ಆ ಸರಕಾರ ತೆಗೆದುಕೊಳ್ಳುವುದಕ್ಕೆ ಹಕ್ಕಿದೆ. ಆದರೆ ಈ ಕ್ರಮವನ್ನು ನಮ್ಮ ದೇಶದಲ್ಲಿ ಅನುಸರಿಸುತ್ತಿಲ್ಲ. ಜಮೀನಿನಿಂದ ಹುಟ್ಟುವ ಆದಾಯವನ್ನು ತೆರಿಗೆ ಕೊಡುವವನಿಗೆ ತೊಂದರೆಯಾಗದಂತೆ ತೆಗೆದುಕೊಳ್ಳುವುದು ಸಾಧ್ಯವಾದರೆ ಆ ಮಾರ್ಗವನ್ನು ಅನುಸರಿಸಲು ಅವಕಾಶಗಳೇನೋ ಇವೆ. ಜಮೀನಿನ ಹುಟ್ಟುವಳಿಯನ್ನು ತೆಗೆದುಕೊಳ್ಳುವಾಗ ಅದಕ್ಕಾಗಿ ತಗಲುವ ಖರ್ಚು, ಅದರ ಮೇಲಿನ ಬಡ್ಡಿ, ಇವುಗಳನ್ನು ಪ್ರತ್ಯೇಕಮಾಡಿ, ಅದರ ಮೇಲೆ ಸಲ್ಲಿಸಬೇಕಾದ ಗುತ್ತಿಗೆ ಅಥವಾ ಬಾಡಿಗೆ (economic rent) ತೆರಿಗೆಯಲ್ಲಿ ಸೇರಿಸಿಬಿಡಬಹುದು. ಜಮೀನಿನ ಮೇಲಿನ ಒಡೆತನ ಸರಕಾರದ್ದಲ್ಲ. ಅದು ಪ್ರಜೆಗೆ ಸೇರಿದುದು, ಜಮೀನಿನ ಮೇಲೆ ಕೊಡುವ ಹಣ ತೆರಿಗೆಯೇ ಹೊರತು ಕಾಣಿಕೆಯಲ್ಲ ಎಂಬುದು ಬಹುಜನರ ಅಭಿಪ್ರಾಯ. ಭೂಸ್ವಾಮ್ಯ ಸರಕಾರಕ್ಕೆ ಸೇರಿಲ್ಲ, ಅದನ್ನು ಅನುಭವಿಸುವವನ ಹಕ್ಕು, ಎಂದು ಸರಕಾರದವರು ತೀರ್ಮಾನಿಸುವವರೆಗೂ ಈ ತೊಡಕು ಬಗೆಹರಿಯುವಂತಿಲ್ಲ.

## ಮಾಡಬೇಕಾದ ಕೆಲವು ಸುಧಾರಣೆಗಳು

ಭೂಕಂದಾಯದ ದರವನ್ನು ಕೊನೆಯಪಕ್ಷ ಶೇಕಡಾ ೨೫ರಷ್ಟಾದರೂ ಕಡಮೆಮಾಡಬೇಕಾದ ಕಾಲವೊದಗಿದೆ ಎಂದು ಪ್ರಾಂತಗಳಲ್ಲಿನ ನಾಯಕರು ವಾದಿಸುತ್ತಿದ್ದಾರೆ. ತೆರಿಗೆ ಕೊಡುವ ಶಕ್ತಿಯನ್ನು ಪರಿಶೀಲಿಸಿ ಈ ತೆರಿಗೆಯನ್ನು ಹಾಕದೆ ಇರುವುದರಿಂದ ಜನಸಾಮಾನ್ಯವು ಈಗಿನ ದರದಿಂದ ಸ್ವಲ್ಪ ತೊಂದರೆಗೆ ಸಿಕ್ಕಿದೆಯೆನ್ನಬಹುದು. ಈಗಿನ ನಿಯಮಗಳ ಪ್ರಕಾರ ಕೇವಲ ಒಂದೆರಡು ಎಕರೆ ಜಮೀನನ್ನಿಟ್ಟುಕೊಂಡು ಅದರಲ್ಲಿ ಬಂದ ದವಸದಿಂದ ಜೀವನ ಮಾಡಬೇಕಾದ ರೈತನೂ, ಸಾವಿರಾರು ಎಕರೆಗಳನ್ನು ಅನುಭವಿಸುವ ಜಮೀನ್

ದಾರನೂ ಒಂದೇ ದರದಲ್ಲಿ ಸರಕಾರಕ್ಕೆ ಭೂಕಂದಾಯವನ್ನು ತರಬೇಕಾಗಿದೆ. ಅಷ್ಟೇ ಅಲ್ಲದೆ, ೧೭೯೩ರಲ್ಲಿ ಆದ ಖಾಯಂವಾರೀ ಜಮೀನ್ದಾರೀ ನಿಯಾಮಕದಿಂದ (Permanent Zamindari Settlement) ರೈತರ ಅವಸ್ಥೆ ಕೆಡುತ್ತ ಬಂತು. ಇದರಿಂದ ಜಮೀನನ್ನು ಹತ್ತಾರು ವರ್ಷಗಳಿಂದ ಉತ್ತು ಬಿತ್ತಿ ಬೇಸಾಯ ಮಾಡುತ್ತಿದ್ದ ರೈತರಿಗೆ ಜಮೀನಿನ ಒಡೆತನ ಹೋಗಿ ಅವರು ಜಮೀನ್ದಾರರಿಗೆ ಹೆಚ್ಚು ದರದಲ್ಲಿ ಭೂಕಂದಾಯವನ್ನು, ಬೆಳೆಯಾಗಲಿ ಆಗದಿರಲಿ, ಸಲ್ಲಿಸಬೇಕಾಯಿತು. ಬಂಗಾಳಾ ಪ್ರಾಂತದಲ್ಲಿನ ಜಮೀನ್ದಾರರು ರೈತರಿಂದ ವರ್ಷಂಪ್ರತಿ ಸುಮಾರು ೧೭ ಕೋಟಿ ರೂಪಾಯಿಗಳನ್ನು ವಸೂಲ್ಮಾಡುತ್ತಾರೆ. ಆದರೆ ಅವರು ಸರಕಾರಕ್ಕೆ ಕಂದಾಯದ ರೂಪದಲ್ಲಿ ಪಾವತಿಮಾಡುವ ಹಣ ಕೇವಲ ೪ ಕೋಟಿ ರೂಪಾಯಿಗಳಷ್ಟು ಮಾತ್ರ.

ನಮ್ಮ ದೇಶದಲ್ಲಿ ಸರಕಾರಕ್ಕೆ ಭೂಕಂದಾಯ ಸಲ್ಲಿಸುವವರಲ್ಲಿ ಬಹುಮಂದಿ ರೈತರು. ಅವರು ಬಡವರು; ಭೂಕಂದಾಯದ ದರ ಕಡಮೆಯಾದ ಹೊರತು ಅವರಿಗೆ ದಾರಿದ್ರ್ಯ ತಪ್ಪುವಂತಿಲ್ಲ. ೧೯೨೪–೨೫ರಲ್ಲಿ ತೆರಿಗೆಗಳನ್ನು ವಿಮರ್ಶಿಸಿ ಸಲಹೆ ಕೊಡಲು ನೇಮಕವಾದ ಇಂಡಿಯನ್ ಟ್ಯಾಕ್ಸೇಷನ್ ಎನ್‌ಕ್ವೈರಿ ಕಮಿಟಿಯವರು ಭೂಕಂದಾಯದ ದರ ಕಡಮೆಮಾಡಬೇಕೆಂದು ಸಲಹೆಕೊಟ್ಟರು. ರೈತನು ತನ್ನ ಬೇಸಾಯಕ್ಕಾಗಿ ವೆಚ್ಚಮಾಡುವ ಹಣ, ಕೊಡುವ ಕೂಲಿ, ಅವನಿಗೆ ಅದರಿಂದ ಬರಬೇಕಾದ ಪ್ರತಿಫಲ, ಇವುಗಳನ್ನು ಕಳೆದು ಉಳಿಯುವ ಆದಾಯದಲ್ಲಿ ಶೇಕಡಾ ೨೫ರಷ್ಟು ಸರಕಾರಕ್ಕೆ ತೆರಿಗೆಯ ಮೂಲಕ ಪಾವತಿಮಾಡಬೇಕೆಂದು ಸಲಹೆ ಮಾಡಿದ್ದಾರೆ.

ಇದುವರೆಗೂ ಹತ್ತಾರು ವರ್ಷಗಳಿಗೊಮ್ಮೆ ಭೂಕಂದಾಯದ ದರವನ್ನು ತೀರ್ಮಾನಿಸುತ್ತಿದ್ದಾರೆ. ಕಂದಾಯದ ದರ ತೀರ್ಮಾನಮಾಡಿದ ಕಾಲದಲ್ಲಿ ಫಲವತ್ತಾಗಿದ್ದ ಜಮೀನು ಕೆಲವು ವರ್ಷಗಳಲ್ಲೇ ಬಂಜರಾಗಬಹುದು. ಆದರೂ ಅದನ್ನು ಅನುಭವಿಸುವ ರೈತನು ಆ ಮೊದಲ ದರದಲ್ಲೇ ತೆರಿಗೆಯನ್ನು ಕಟ್ಟಬೇಕು. ಕಂದಾಯದ ದರ ಹೇಗಿರಬೇಕು, ಅದನ್ನು ಎಷ್ಟುವರುಷಗಳಿಗೊಮ್ಮೆ ಪುನರ್ವ್ಯವಸ್ಥೆಗೊಳಿಸುತ್ತ ಹೋಗಬೇಕು, ಎಂಬ ವಿಚಾರದಲ್ಲಿ ಆಯಾ ಪ್ರಾಂತಗಳ ಶಾಸನ ಸಭೆಗಳವರು ಒಂದು ನಿರ್ಧಾರಕ್ಕೆ ಬರುವುದು ಉಚಿತವಾದುದು. ೧೯೨೮–೨೯ರಲ್ಲಿ ಪಂಜಾಬು ಶಾಸನಸಭೆ, ಭೂಕಂದಾಯವನ್ನು ನಲವತ್ತು ವರ್ಷಗಳಿಗೊಮ್ಮೆ ವ್ಯವಸ್ಥೆ ಮಾಡಬೇಕೆಂದೂ, ಕಂದಾಯದ ದರ ನಿವ್ವಳ ಆದಾಯದಲ್ಲಿ ಶೇಕಡಾ ೨೫ರಷ್ಟಿರಬೇಕೆಂದೂ ತೀರ್ಮಾನಿಸಿತು. ಇದೇ ವಿಧದ ಮಸೂದೆಯೊಂದು ಸಂಯುಕ್ತ ಮತ್ತು ಮಧ್ಯಪ್ರಾಂತಗಳ ಶಾಸನಸಭೆಗಳಲ್ಲಿಯೂ ತೀರ್ಮಾನವಾಗಿದೆ. ಇತರ ಪ್ರಾಂತಗಳಲ್ಲಿಯೂ ಈ ಪ್ರಶ್ನೆಯನ್ನು ಆದಷ್ಟು ಬೇಗ ಪರ್ಯಾಲೋಚಿಸುವುದು ಒಳ್ಳೆಯದು. ಭೂಕಂದಾಯದ ಬಾಬಿನಿಂದ ಹೆಚ್ಚು ಹೆಚ್ಚು ಆದಾಯ ಪಡೆಯಲು ಸಾಧ್ಯವಿಲ್ಲ. ಈ ಕಂದಾಯದ ಹುಟ್ಟುವಳಿ ವರ್ಷೇ ವರ್ಷೇ ಬೆಳೆಯಲಾರದು.

ಈ ಬಾಬಿನಿಂದ ಇನ್ನುಮುಂದೆ ಸರಕಾರ ಈಗಿಗಿಂತ ಹೆಚ್ಚು ವರಮಾನ ನಿರೀಕ್ಷಿಸು ವುದು ಸಾಧ್ಯವಿಲ್ಲ.

## ಅಬ್ಕಾರಿ

ಭೂಕಂದಾಯವನ್ನುಳಿದರೆ ಪ್ರಾಂತಸರಕಾರಗಳಿಗೆ ಬರುವ ಮುಖ್ಯ ಆದಾಯದ ಬಾಬೆಂದರೆ ಅಬ್ಕಾರಿ.* ಸರಕಾರ ೧. ಮಾದಕ ವಸ್ತುಗಳಾದ ಮದ್ಯ, ಔಷಧ, ಅಫೀಂ ಇವುಗಳನ್ನು ತಯಾರ್ಮಾಡಲು ತೆರಿಗೆಯನ್ನು ಹಾಕಿ, ಮತ್ತು ೨. ಇವುಗಳನ್ನು ಮಾರುವುದಕ್ಕೆ ಅಪ್ಪಣೆಪಡೆಯಲು ಒಂದು ರುಸುಮನ್ನು ಪಾವತಿಮಾಡ ಬೇಕೆಂದು ವಿಧಿಸುವುದು, ಈ ಎರಡು ವಿಧವಾಗಿ ಅಬ್ಕಾರಿ ಬಾಬಿನಿಂದ ವರಮಾನ ಪಡೆ ಯುತ್ತಿದೆ. ಮಾದಕ ದ್ರವ್ಯಗಳನ್ನು ಒಂದು ಪ್ರದೇಶದಲ್ಲಿ ತಯಾರಿಸುವ ಹಕ್ಕಿಗಾಗಿ ಅಲ್ಲಲ್ಲಿ ಶೇಂದಿ ಹರಾಜುಗಳನ್ನು ಸರಕಾರದವರು ಏರ್ಪಡಿಸುತ್ತಾರೆ. ಹಾಗೆ ತಯಾರಾದ ಮದ್ಯಗಳನ್ನು ಮಾರುವುದಕ್ಕೆ ಅಪ್ಪಣೆಕೊಟ್ಟು ಅದರಿಂದ ಫೀ ವಸೂಲ್ಮಾಡುತ್ತಾರೆ. ಇಂಡಿಯಾದೇಶದಲ್ಲಿ ಅಬ್ಕಾರಿಯಿಂದ ಬರುವ ಆದಾಯ ಬಹಳ ಕಾಲ ವಿಷವೇರುವಂತೆ ವರ್ಷಂಪ್ರತಿ ಏರುತ್ತಬಂತು. ೧೮೬೧-೬೨ರಲ್ಲಿ ಈ ಬಾಬಿನ ಹುಟ್ಟುವಳಿ ಸುಮಾರು ಎರಡು ಕೋಟಿಯಷ್ಟಿದ್ದು ೧೯೩೫-೩೬ರ ವೇಳೆಗೆ ೧೫ ಕೋಟಿ ರೂಪಾಯಿಗಳಿಗೇರಿತು. ೧೯೩೫ರಿಂದೀಚೆಗೆ ಪ್ರಾಂತ ಸ್ವಾತಂತ್ರ್ಯ ತಲೆದೋರಿ, ಅಖಿಲ ಭಾರತ ಕಾಂಗ್ರೆಸ್ ಸಂಗಡದ ಸದಸ್ಯರು ಮಂತ್ರಿ ಮಂಡಲಗಳನ್ನು ರಚಿಸಿದಾಗ ಈ ತೆರಿಗೆ ಬಡವರ ಜೀವನವನ್ನು ಶುಷ್ಕಮಾಡುವ ತೆರಿಗೆಯೆಂದು ಭಾವಿಸಿ ಅವರು ಪಾನನಿರೋಧ ನೀತಿಯನ್ನು ಅನುಸರಿಸಿದರು. ಆಗಿನಿಂದ ಪ್ರಾಂತಸರಕಾರಗಳಿಗೆ ಈ ಬಾಬಿನಿಂದ ಬರುತ್ತಿದ್ದ ಹುಟ್ಟುವಳಿ ತಗ್ಗಿದೆ.

## ಸ್ಟಾಂಪು ಮತ್ತು ರಿಜಿಸ್ಟ್ರೇಷನ್

ಇದು ಸಾಕ್ಷಾತ್ತಾಗಿ ಜನಸಾಮಾನ್ಯ ಕೊಡುವ ತೆರಿಗೆಯಲ್ಲ. ವ್ಯವಹಾರದಲ್ಲಿ ನಿರತರಾಗಿರುವವರು, ತಮಗೆ ದೊರೆಯುವ ಸೌಕರ್ಯಗಳಿಗಾಗಿ ಪಾವತಿಮಾಡ ಬೇಕಾದ ರುಸುಂ ಇದು ; ಸ್ಟಾಂಪಿನಿಂದ ಬರುವ ಆದಾಯ ಎರಡು ವಿಧವಾದದ್ದು : ಕೋರ್ಟು ವ್ಯವಹಾರಗಳಿಗೆ ಸಂಬಂಧಪಟ್ಟದ್ದೊಂದು, ಲೇವಾದೇವಿ ಮತ್ತು ವ್ಯಾಪಾರದ ವ್ಯವಹಾರಗಳಿಗೆ ಅನ್ವಯಿಸತಕ್ಕದು ಎರಡನೆಯದು. ೧೯೧೧-೧೨ನೆ ಇಸವಿಯಿಂದೀಚೆಗೆ ಈ ಬಾಬಿನಿಂದ ಹುಟ್ಟುವಳಿ ಹೆಚ್ಚುತ್ತಿದೆ. ಆಗ ಏಳು ಕೋಟಿ ರೂಪಾಯಿಗಳ ಉತ್ಪತ್ತಿ ಇದ್ದದ್ದು ೧೯೩೪-೩೫ರ ವೇಳೆಗೆ ಹನ್ನೆರಡುಕೋಟಿ ರೂಪಾಯಿಗಳಷ್ಟಾಯಿತು. ಇದರಲ್ಲಿ ಮುಕ್ಕಾಲು ಭಾಗ ಸಿವಿಲ್, ರೆವಿನ್ಯೂ, ಮತ್ತು ಕ್ರಿಮಿನಲ್ ವ್ಯವಹಾರಗಳಿಂದ ಬಂದುದು.

---

* ಪಾನ ನಿರೋಧ ನೀತಿಯನ್ನು ಸಂಪೂರ್ಣವಾಗಿ ಈಚೆಗೆ ಸರಕಾರ ಕೈಕೊಂಡಿರು ವುದರಿಂದ, ಈ ಬಾಬಿನ ಆದಾಯ ಇನ್ನು ಮುಂದೆ ಇರುವುದಿಲ್ಲ.

ತಮ್ಮ ವ್ಯವಹಾರದ ಕಾಗದ ಪತ್ರಗಳನ್ನೂ ಪ್ರಜೆಗಳು ರಿಜಿಸ್ಟರ್ ಮಾಡಿಸ ಬೇಕೆಂಬ ನಿಯಮಗಳಿವೆ. ಹೀಗೆ ಮಾಡಿಸಲು ಸರಕಾರಕ್ಕೆ ಒಂದು ರುಸುಂ ಕೊಡ ಬೇಕು. ರಿಜಿಸ್ಟ್ರೇಷನ್ ಬಾಬಿನ ಹುಟ್ಟುವಳಿ ಮೂವತ್ತು ವರ್ಷಗಳ ಹಿಂದೆ ಸುಮಾರು ೬೩ ಲಕ್ಷ ರೂಪಾಯಿಗಳಷ್ಟು ಇತ್ತು. ಇದು ೧೯೩೫-೩೬ರ ವೇಳೆಗೆ ೧೧೮ ಲಕ್ಷ ರೂಪಾಯಿಗಳಾಯಿತು.

## ನೀರಾವರಿ ಕೆಲಸಗಳು

ಕೇಂದ್ರ ಸರಕಾರ ರೈಲ್ವೆ, ಅಂಚೆ, ತಂತಿ, ಮೊದಲಾದುವುಗಳನ್ನು ವ್ಯಾಪಾ ರೋದ್ಯಮಗಳಂತೆ ಭಾವಿಸಿರುವಂತೆಯೇ, ನೀರಾವರಿಯ ಕೆಲಸಗಳನ್ನು ಪ್ರಾಂತ ಸರಕಾರಗಳು ಭಾವಿಸಬಹುದು. ಪ್ರಾಂತ ಸರಕಾರಗಳಿಗೆ ಈ ಬಾಬಿನಿಂದ ಖಚಿತ ವಾದ ಒಂದು ನಿವ್ವಳ ಆದಾಯವು ಬರುತ್ತಿದೆ. ಇದು ವರ್ಷಂಪ್ರತಿ ಬೆಳೆಯು ತ್ತಲೂ ಇದೆ. ಈ ಆದಾಯ ೧೯೦೧ರಲ್ಲಿ ಎರಡೂ ಮುಕ್ಕಾಲು ಕೋಟಿ ರೂಪಾಯಿ ಗಳಿದ್ದು ಈಗ ಒಂಭತ್ತು ಕೋಟಿ ರೂಪಾಯಿಗಳಷ್ಟಾಗಿದೆ. ಹಲವು ಪ್ರಾಂತಗಳಲ್ಲಿ ದೊಡ್ಡ ನೀರಾವರಿ ಕೆಲಸಗಳನ್ನು ಕೈಗೊಳ್ಳಲು, ಎಷ್ಟೋಬಾರಿ ಸಾರ್ವಜನಿಕ ಸಾಲವೆತ್ತಿ ಮೂಲಧನವನ್ನು ಒದಗಿಸಲಾಗಿದೆ. ಈ ನೀರಾವರಿ ಕೆಲಸಗಳಿಂದ ಈಗ ಬರು ತ್ತಿರುವ ಆದಾಯವು ಅವುಗಳಿಗಾಗಿ ಹಾಕಿರುವ ಮೂಲಧನದ ಮೇಲಿನ ಸಾಧಾರಣ ಬಡ್ಡಿಯನ್ನು ಮೀರಿ ಬರುತ್ತಿದೆಯೆನ್ನಬಹುದು. ಪಂಜಾಬು ಮೊದಲಾದ ಕೆಲವು ಪ್ರಾಂತಗಳಲ್ಲಿನ ದೊಡ್ಡ ನೀರಾವರಿ ಕೆಲಸಗಳಿಗೆ ಒದಗಿಸಿರುವ ಹಣಕ್ಕೆ ಶೇಕಡಾ ಮುವ್ವತ್ತು ನಲವತ್ತರಂತೆ ಬಡ್ಡಿ ಪ್ರತಿಫಲ ದೊರೆಯುತ್ತಿದೆ. ವ್ಯವಸಾಯ ಮುಖ್ಯ ಕಸಬಾದ ಈ ದೇಶದಲ್ಲಿ ಇಂತಹ ಕೆಲಸಗಳು ಹೆಚ್ಚುತ್ತ ಹೋಗುವುದರಿಂದ, ಜನರ ಆರ್ಥಿಕಸ್ಥಿತಿ ಅಭಿವೃದ್ಧಿಗೊಂಡು, ದೇಶದ ಸಂಪತ್ತು ಹೆಚ್ಚುವುದರಲ್ಲಿ ಸಂಶಯವಿಲ್ಲ.

## ಪರಿಶಿಷ್ಟ ತೆರಿಗೆಗಳು

ಪ್ರಾಂತ ಸ್ವಾತಂತ್ರ್ಯ ದೊರೆತಮೇಲೆ ಅಲ್ಲಿಯ ಸರಕಾರಗಳ ಕಾರ್ಯ ಕಲಾಪಗಳು ಬಹಳವಾಗಿ ಹೆಚ್ಚುತ್ತಿವೆ. ಇವುಗಳನ್ನು ನಿರ್ವಹಿಸುವುದಕ್ಕಾಗಿ ಹುಟ್ಟು ವಳಿ ಹೆಚ್ಚಿಸಿಕೊಳ್ಳಬೇಕಾಗಿದೆ. ಅದರಿಂದ ಹೊಗೆಸೊಪ್ಪು, ಪೆಟ್ರೋಲ್, ವಿದ್ಯುಚ್ಛಕ್ತಿ, ಜೀವನೋಪಾಯ ವೃತ್ತಿಗಳು ಇವುಗಳ ಮೇಲೆ ತೆರಿಗೆಗಳನ್ನು ವಿಧಿಸುತ್ತಿದ್ದಾರೆ. ಹಾಗೆಯೇ ವ್ಯಾಪಾರದ ತೆರಿಗೆ, ವಿನೋದಾವಳಿಗಳ ಮೇಲಿನ ತೆರಿಗೆ, ಜೂಜಿನ ತೆರಿಗೆ, ಇವನ್ನೂ ಹಾಕುತ್ತಿದ್ದಾರೆ. ೧೯೩೫-೩೬ರಲ್ಲಿ ಈ ಪರಿಶಿಷ್ಟ ತೆರಿಗೆ ಗಳಿಂದ ಸುಮಾರು ೪೪೬ ಲಕ್ಷ ರೂಪಾಯಿಗಳ ಹುಟ್ಟುವಳಿಯಾಗಿ, ೧೧೭೬ ಲಕ್ಷ ರೂಪಾಯಿಗಳಿಗೆ ಏರಿದೆ. ಇವು ಪರೋಕ್ಷವಾದ ತೆರಿಗೆಗಳು. ಕೇಂದ್ರ ಸರಕಾರಕ್ಕೆ ಸುಂಕದ ಆದಾಯ ಹೇಗೋ, ಪ್ರಾಂತ ಸರಕಾರಗಳಿಗೆ ಪರಿಶಿಷ್ಟ ತೆರಿಗೆಗಳ ಹುಟ್ಟುವಳಿ ಹಾಗೆ ಎಂದು ಹೇಳಬಹುದು.

---

# ಪ್ರಕರಣ ೧೯

## ಕೇಂದ್ರ ಮತ್ತು ಪ್ರಾಂತ ಸರಕಾರಗಳ ವೆಚ್ಚ

ಇಂಡಿಯಾ ದೇಶದಲ್ಲಿ ಕೇಂದ್ರ ಸರಕಾರ ವರ್ಷಂಪ್ರತಿ ಸುಮಾರು ೧೨೦ ಕೋಟಿ ರೂಪಾಯಿಗಳಷ್ಟೂ ಪ್ರಾಂತ ಸರಕಾರಗಳು ಸುಮಾರು ೬೦ ಕೋಟಿ ರೂಪಾಯಿಗಳಷ್ಟೂ ವೆಚ್ಚಮಾಡುತ್ತಿವೆ. * ಇತರ ದೇಶಗಳಂತೆಯೇ ಇಂಡಿಯಾ ದೇಶವೂ, ರಕ್ಷಣೆ, ರಾಜ್ಯಾಡಳಿತ, ನ್ಯಾಯ ಮತ್ತು ಕಾನೂನು ಪಾಲನೆ, ಮೊದಲಾದ ಕೆಲವು ಮುಖ್ಯ ಕರ್ತವ್ಯಗಳಿಗಾಗಿಯೂ, ಸಮಾಜ ಸೇವೆ, ಕೈಗಾರಿಕೆ, ವ್ಯವಸಾಯ ಮುಂತಾದ ದೇಶದ ಸಂಪದಭಿವೃದ್ಧಿ ಕಾರ್ಯಗಳಿಗಾಗಿಯೂ, ತನ್ನ ಆದಾಯವನ್ನು ವೆಚ್ಚಮಾಡುತ್ತದೆ. ಇತರ ದೇಶಗಳಂತೆಯೇ ಇಲ್ಲಿಯು ಸರಕಾರದ ವೆಚ್ಚವೂ ವರ್ಷಂಪ್ರತಿ ಹೆಚ್ಚುತ್ತಿದೆ. ೧೮೬೦ರಲ್ಲಿನ ವೆಚ್ಚದ ಹಣದೊಂದಿಗೆ ಈಗಿನ ವೆಚ್ಚವನ್ನು ಹೋಲಿಸಿದರೆ, ಇದು ಒಂದಕ್ಕೆ ಎಂಟರಷ್ಟು ಹೆಚ್ಚಿದೆ ಎಂಬುದನ್ನು ಕಾಣುತ್ತೇವೆ. ಇದಕ್ಕೆ ಮೂರು ನಾಲ್ಕು ಮುಖ್ಯ ಕಾರಣಗಳು: ೧. ಆಧುನಿಕ ಮಾರ್ಗಗಳನ್ನು ಅನುಸರಿಸಿ ರಕ್ಷಣಾ ಸೌಕರ್ಯಗಳನ್ನು ನಮ್ಮ ದೇಶದಲ್ಲಿ ಕಲ್ಪಿಸಬೇಕಾದ ಪ್ರಸಂಗವೊದಗಿತು. ೨. ಕೇಂದ್ರ ಮತ್ತು ಪ್ರಾಂತ ಸರಕಾರಗಳ ಸಂಪೂರ್ಣ ವಿಧಜನೆಯಾಗಿ ಪ್ರಜಾಪ್ರಭುತ್ವದ ತತ್ವಗಳನ್ನು ಆಡಳಿತ ರೂಪದಲ್ಲಿ ತರಲು ಏರ್ಪಾಡುಗಳಾಗಿ ಆ ರೀತಿ ದೇಶದ ಆಡಳಿತ ನಡೆಯುತ್ತ ಬಂದುದರಿಂದ ಆಡಳಿತದ ಖರ್ಚು ಸ್ವಾಭಾವಿಕವಾಗಿ ಏರುತ್ತ ಬಂತು. ೩. ನಮ್ಮ ದೇಶದಲ್ಲಿ ಸಾರ್ವಜನಿಕ ಸಾಲ ಕ್ರಮೇಣ ಹೆಚ್ಚುತ್ತ ಬಂತು. ಅದರ ಮೇಲಿನ ಬಡ್ಡಿ ಮತ್ತು ಅದನ್ನು ತೀರಿಸುವುದಕ್ಕಾಗಿ ಋಣವಿಮೋಚನ ನಿಧಿಗೆ ಪ್ರತಿವರ್ಷವೂ ಹೆಚ್ಚುಹೆಚ್ಚು ಹಣವನ್ನು ಕೂಡಿಡಬೇಕಾಯಿತು. ೪. ಸರಕಾರದ ಕೆಲಸಗಳೂ ಈಚೆಗೆ ಬಹುಮುಖವಾಗಿ ಬೆಳೆದು, ವಿದ್ಯಾಭ್ಯಾಸ, ವೈದ್ಯ, ಆರೋಗ್ಯದ ಬಾಬುಗಳಿಗೂ, ಕೈಗಾರಿಕೆ, ಮೊದಲಾದ ಸಂಪದಭಿವೃದ್ಧಿ ಬಾಬುಗಳಿಗೂ ಹೆಚ್ಚು ಹಣವನ್ನು ವೆಚ್ಚಮಾಡಬೇಕಾಯಿತು.

ನಮ್ಮ ದೇಶದಲ್ಲಿ ಕೇಂದ್ರ ಮತ್ತು ಪ್ರಾಂತ ಸರಕಾರಗಳು ಹಿಂದೆ ಯಾವ ಬಾಬಿಗೆ ಎಷ್ಟು ವೆಚ್ಚಮಾಡುತ್ತಿದ್ದುವು, ಈಗ ಎಷ್ಟು ವೆಚ್ಚಮಾಡುತ್ತಿವೆ ಎಂಬುದನ್ನು ಮುಂದಿನ ಪಟ್ಟಿ ತಿಳಿಸುತ್ತದೆ.

---

* ೧೯೩೫-೩೬ ರಲ್ಲಿನ ಬಡ್ಜೆಟ್ ಅಂಕಿಗಳನ್ನೂ ಇಲ್ಲಿ ಸೂಚಿಸಿರುತ್ತದೆ. ಈಚಿನ ಯುದ್ಧದ ವರ್ಷಗಳಲ್ಲಿ ಮತ್ತು ನೂತನ ರಾಜ್ಯಾಂಗ ವ್ಯವಸ್ಥೆಯಿಂದ ಉಂಟಾದ ಬದಲಾವಣೆಗಳನ್ನೂ ಪ್ರತ್ಯೇಕವಾದ ಅನುಬಂಧದಲ್ಲಿ ಸೂಚಿಸಿರುತ್ತದೆ.

## ಕೇಂದ್ರ ಮತ್ತು ಪ್ರಾಂತ ಸರಕಾರಗಳ ವೆಚ್ಚ
## ೧೯೧೧ರಿಂದ ೧೯೧೫ರಲ್ಲಿನ ಸರಾಸರಿ

| | ೧೯೧೧-೧೫ ರಲ್ಲಿ ಸರಾಸರಿ (ವರ್ಷದ ವೆಚ್ಚ) ೧೨೪ ಕೋಟಿ ರೂಪಾಯಿಗಳು | | ೧೯೩೦-೩೫ರಲ್ಲಿ ಸರಾಸರಿ (ವರ್ಷದ ವೆಚ್ಚ) | |
|---|---|---|---|---|
| ಬಾಬುಗಳು | | ಮೊಬಲಗು (ಕೋಟಿ ರೂ. ಗಳು) | | ೨೧೦ ಕೋಟಿ ರೂಪಾಯಿಗಳು |
| ರಕ್ಷಣೆ | .... | ೩೦·೫ | .... | ೪೭·೪ |
| ಪೋಲೀಸು | .... | ೭·೪ | .... | ೧೩·೦ |
| ನ್ಯಾಯ ಮತ್ತು ಕಾನೂನು | .... | ೭·೧ | .... | ೭·೮ |
| ಆಡಳಿತ | .... | ೩·೨ | .... | ೧೨·೭ |
| ವಿದ್ಯಾಭ್ಯಾಸ | .... | ೪·೩ | .... | ೧೨·೨ |
| ಆರೋಗ್ಯ | .... | ೩·೫ | .... | ೫·೭ |
| ಕಾಮಗಾರಿ | .... | ೮·೯ | .... | ೮·೯ |
| ವ್ಯವಸಾಯ | .... | ·೮ | ... | ೨·೭ |
| ಋಣ ವಿಮೋಚನೆ | .... | ೨·೩ | .... | ೧೯·೦ |
| ಇತರ | .... | ೫೭·೨ | .... | ೮೨·೦ |

೧೯೨೧ರಿಂದ ಇಂಡಿಯಾ ಸರಕಾರದ ಕೇಂದ್ರ ಮತ್ತು ಪ್ರಾಂತ ಸರಕಾರಗಳ ಕರ್ತವ್ಯ ನಿರ್ವಹಣದಲ್ಲಿ ವಿಭಜನೆಯಾಗಿ, ಹುಟ್ಟುವಳಿಯ ಬಾಬುಗಳಲ್ಲಿ ವಿಭಾಗಕ್ರಮ ತಲೆದೋರಿದಂತೆಯೇ, ವೆಚ್ಚದ ಬಾಬುಗಳಲ್ಲಿಯೂ ಒಂದು ನಿರ್ದಿಷ್ಟವಾದ ಹಂಚಿಕೆಯಾಯಿತು. ಕೇಂದ್ರ ಸರಕಾರದ ನಿರ್ದಿಷ್ಟವಾದ ಆದಾಯದ ಬಾಬುಗಳ ಆಡಳಿತಕ್ಕೆ ತಗಲುವ ವೆಚ್ಚ, ದೇಶದ ಹೊರ ರಕ್ಷಣೆಗಾಗಿರುವ ಸೈನ್ಯದ ಪೋಷಣೆಯ ಖರ್ಚು, ಇಂಡಿಯಾ ಸರಕಾರದ ಸಾರ್ವಜನಿಕ ಸಾಲದ ಮೇಲಣ ಬಡ್ಡಿ, ಅದರ ತೀರ್ವೆಯ ನಿಧಿ, ಅಂಚೆ, ತಂತಿ ಮತ್ತು ರೈಲ್ವೆಗಳ ಆಡಳಿತ, ಇವುಗಳಿಗೆ ತಗಲುವ ಖರ್ಚು ಕೇಂದ್ರ ಸರಕಾರದ ವೆಚ್ಚದ ಬಾಬುಗಳು. ಪ್ರಾಂತ ಸರಕಾರದ ಆದಾಯದ ಬಾಬುಗಳ ಆಡಳಿತಕ್ಕೆ ತಗಲುವ ವೆಚ್ಚ, ಕೈಗಾರಿಕೆ, ವಿದ್ಯಾಭ್ಯಾಸ, ವೈದ್ಯಸಹಾಯ, ನೀರಾವರಿ, ಕಾಮಗಾರಿ ಮೊದಲಾದ ಜನಜೀವನವನ್ನು ಉತ್ತಮಗೊಳಿಸುವ ಬಾಬುಗಳ ನಿರ್ವಾಹ, ಒಳ ರಕ್ಷಣೆಗೆ ಸಂಬಂಧಿಸಿದ ಪೋಲೀಸು, ವ್ಯವಹಾರಸ್ಥಾನಗಳು ಮೊದಲಾದುವುಗಳಿಗಾಗಿ ತಗಲುವ ವೆಚ್ಚ ಪ್ರಾಂತ ಸರಕಾರವು ವಹಿಸತಕ್ಕದ್ದು. ಕೈಗಾರಿಕೆ, ಪ್ರೌಢವಿದ್ಯಾಭ್ಯಾಸ, ವಿಜ್ಞಾನಪರಿಶೋಧನೆ, ಮೊದಲಾದುವುಗಳಿಗೆ ಕೇಂದ್ರ ಮತ್ತು ಪ್ರಾಂತ ಸರಕಾರಗಳೆರಡೂ ಹಣವನ್ನು ಕೊಡುತ್ತವೆ.

ನಮ್ಮ ದೇಶದಲ್ಲಿ ಕೇಂದ್ರ ಮತ್ತು ಪ್ರಾಂತ ಸರಕಾರಗಳು ಯಾವ ಬಾಬಿಗೆ ಎಷ್ಟು ಹಣವನ್ನು ವೆಚ್ಚಮಾಡುತ್ತಿವೆಯೆಂಬುದನ್ನು ಈ ಪಟ್ಟಿಯು ಸೂಚಿಸುತ್ತದೆ.

೧೯೩೫-೩೬ನೇ ಸಾಲಿನ ವ್ಯಯಪಟ್ಟಿ.

ಒಟ್ಟು ವ್ಯಯ

ಕೇಂದ್ರ ೧೨೧.೦೭ ಕೋಟಿ ರೂ. ಪ್ರಾಂತ ೮೮.೬೯ ಕೋಟಿ ರೂ.

| ಬಾಬುಗಳು | ಕೇಂದ್ರ ಮೊಬಲಗು (ಕೋಟಿ ರೂ.ಗಳು) | ಪ್ರಾಂತ ಮೊಬಲಗು (ಕೋಟಿ ರೂ. ಗಳು) |
|---|---|---|
| ಸರಕಾರದ ಹುಟ್ಟುವಳಿಯ ವಸೂಲಾತಿಗಾಗಿ | ೪.೨೨ | ೮.೫೯ |
| ರೈಲ್ವೆ | ೩೨.೦೦ | .... |
| ಅಂಚೆ ಮತ್ತು ತಂತಿ | .೮೦ | .... |
| ನೀರಾವರಿ | .೦೫ | ೬.೭೨ |
| ಸಾಲ | ೧೩.೩೯ | ೩.೭೭ |
| ಆಡಳಿತ | ೪.೮೫ | ೧೦.೩೫ |
| ಪೋಲೀಸು, ಜೈಲು ವಗೈರೆ | .೨೯ | ೧೯.೫೬ |
| ವಿದ್ಯಾಭ್ಯಾಸ | .೨೯ | ೧೧.೯೬ |
| ವೈದ್ಯ | .೨೪ | ೩.೬೧ |
| ಆರೋಗ್ಯ | .೧೬ | ೧.೫೨ |
| ವ್ಯವಸಾಯ ಮತ್ತು ಕೈಗಾರಿಕೆ | .೫೧ | ೨.೮೮ |
| ಕಾಮಗಾರಿ ಕೆಲಸ | ೨.೨೫ | ೮.೦೦ |
| ಸೈನ್ಯ | ೫೦.೧೮ | .... |
| ಇತರ ಬಾಬುಗಳು | ೧೨.೦೦ | ೧೧.೦೦ |

ಮೇಲಿನ ಪಟ್ಟಿಯಲ್ಲಿ ಕಂಡು ಬರುವ ಕೇಂದ್ರ ಮತ್ತು ಪ್ರಾಂತ ಸರಕಾರಗಳ ವೆಚ್ಚದ ಬಾಬುಗಳಲ್ಲಿ ಮುಖ್ಯವಾದ ಕೆಲವನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗುವುದು.

## ರಕ್ಷಣೆ

ಇಂಡಿಯಾ ದೇಶದ ಕೇಂದ್ರ ಸರಕಾರ ತನ್ನ ಹುಟ್ಟುವಳಿಯಲ್ಲಿ ಅರ್ಧ ಭಾಗದಷ್ಟು ಸೈನ್ಯದ ಮೇಲೆ ವೆಚ್ಚ ಮಾಡುತ್ತಿದೆಯೆನ್ನಬಹುದು. ಈ ವೆಚ್ಚ ೧೯೨೧-೨೨ರಲ್ಲಿ ಸುಮಾರು ಎಪ್ಪತ್ತೆಂಟು ಕೋಟಿ ರೂಪಾಯಿಗಳಷ್ಟಿದ್ದು ಕೆಲವು

ವರ್ಷ ಕಡಿಮೆಯಾಗುತ್ತಬಂತು. ಈಗ ನಮ್ಮ ದೇಶದ ರಕ್ಷಣೆಗಾಗಿ ಸೈನ್ಯಕ್ಕಾಗಿ ತಗಲುವ ವೆಚ್ಚ ಸುಮಾರು ೫೦ ಕೋಟಿ ರೂಪಾಯಿಗಳು. ರಕ್ಷಣೆಗಾಗಿ ಸರಿಯಾಗಿ ತರಬೇಕಾದ ಸೈನ್ಯವನ್ನು ಪೋಷಿಸುವುದು ಸರಕಾರದ ಆದ್ಯ ಕರ್ತವ್ಯ. ಆದರೂ ಇಂಡಿಯಾ ಸರಕಾರ ಸೈನ್ಯಕ್ಕಾಗಿ ಮಾಡುತ್ತಿರುವ ವೆಚ್ಚ ಮಿತಿ ಮೀರಿದೆ. ಇಲ್ಲಿರುವ ಸೈನ್ಯ ನಮ್ಮ ರಕ್ಷಣೆಗಿಂತ ಹೆಚ್ಚಾಗಿ ಬ್ರಿಟಿಷ್ ಸಾಮ್ರಾಜ್ಯ ಪಾಲನೆಗಾಗಿ ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಒಂದು ದೃಷ್ಟಿಯಿಂದ ನೋಡಿದರೆ ನಿಜವಾಗಿಯೂ ನಾವು ರಕ್ಷಣೆಯ ಮೇಲೆ ಮಾಡಬೇಕಾದ ವೆಚ್ಚವನ್ನು ಮಾಡುತ್ತಿಲ್ಲ. ನಾವೆ ಮತ್ತು ವಿಮಾನದ ಬಲ ನಮ್ಮ ದೇಶದಲ್ಲಿ ಇಲ್ಲವೆಂದೇ ಹೇಳಬಹುದು. ಯುದ್ಧಕ್ಕೆ ಬೇಕಾದ ವಿಮಾನ, ಮದ್ದು ಗುಂಡು ಮೊದಲಾದ ಸಾಮಗ್ರಿಗಳನ್ನು ತಯಾರಿಸುವುದಕ್ಕಾಗಿ ಎಷ್ಟು ಪ್ರಯತ್ನ ನಡೆಯಬೇಕೋ ಅಷ್ಟು ಆಗಿಲ್ಲ. ಈ ಖರ್ಚು ಅತ್ಯಾವಶ್ಯಕವಾದುದು. ನಾವೆ ಮತ್ತು ವಿಮಾನದ ರಕ್ಷಣೆಗಾಗಿ ಇತರರನ್ನು ನಂಬಿಕೊಂಡಿರದೆ ನಾವೇ ಖರ್ಚು ಮಾಡುತ್ತ ಬಂದರೆ, ಈಗಿನ ಹಣಕ್ಕಿಂತಲೂ ಹೆಚ್ಚಾಗಿಯೇ ನಾವು ವೆಚ್ಚಮಾಡಬೇಕಾದೀತು. ಆದರೆ ಈಗ ಸೈನ್ಯಕ್ಕಾಗಿ ಆಗುತ್ತಿರುವ ವೆಚ್ಚದ ರೀತಿ ಸಮಂಜಸವಾಗಿಲ್ಲದುದರಿಂದ ವೆಚ್ಚ ಮಿತಿಮೀರಿದಂತೆ ಕಂಡುಬರುತ್ತದೆ. ನಮ್ಮ ಸೈನ್ಯದಲ್ಲಿ ಭಾರತೀಯರ ಸಂಖ್ಯೆ ಕಡಿಮೆ. ಪಾಶ್ಚಾತ್ಯ ಸೈನಿಕರಿಗೆ ಒಂದಕ್ಕೆ ನಾಲ್ಕರಷ್ಟು ಸಂಬಳಗಳು. ಇದಕ್ಕೆ ಬದಲಾಗಿ, ಇಲ್ಲಿಯ ಜನರಿಗೆ ಸೈನ್ಯ ಶಿಕ್ಷಣ ಕೊಟ್ಟು ತರಬೇತು ಮಾಡಿದರೆ ಸಂಬಳಗಳ ವೆಚ್ಚ ಕೊಂಚ ಕಡಿಮೆಯಾಗಿ ಆಡಳಿತದ ವೆಚ್ಚವೂ ತಗ್ಗುವುದು. ಹೀಗೆ ಉಳಿಸಿದ ಹಣದಿಂದ ಹೊಸ ವಿಧದ ಯುದ್ಧ ಸಾಮಗ್ರಿಗಳನ್ನು ತಯಾರ್ಮಾಡಿಕೊಂಡು, ಸೈನ್ಯವನ್ನು ವಿಸ್ತರಿಸಿ ಬಲಪಡಿಸಿಕೊಳ್ಳಲು ಸಾಧ್ಯವಾಗುವುದು.

ಕೇಂದ್ರ ಸರಕಾರ ಹೊರಗಣ ಬಾಧೆಯಿಂದ ದೇಶವನ್ನು ರಕ್ಷಿಸುವುದಕ್ಕಾಗಿ ಸೈನ್ಯವನ್ನಿಟ್ಟು ರಕ್ಷಣೆಗಾಗಿ ವೆಚ್ಚಮಾಡುವಂತೆಯೇ, ಪ್ರಾಂತ ಸರಕಾರಗಳೂ, ಒಳ ರಕ್ಷಣೆಗಾಗಿ ಶಾಂತಿ, ಶಿಸ್ತು ಮತ್ತು ಕಾನೂನಿನ ಪಾಲನೆಗಳಿಗಾಗಿ, ಪೋಲೀಸು, ಮೊದಲಾದ ಬಾಬುಗಳಿಗಾಗಿ ವೆಚ್ಚಮಾಡುತ್ತವೆ. ಕೇಂದ್ರ ಮತ್ತು ಪ್ರಾಂತ ಸರಕಾರಗಳು ತಮ್ಮ ದೇಶದ ಒಳಗಿನ ಮತ್ತು ಹೊರಗಣ ರಕ್ಷಣೆಗಾಗಿ ಒಟ್ಟು ವೆಚ್ಚದಲ್ಲಿ ಸುಮಾರು ಶೇಕಡ ೪೩ರಷ್ಟು ಹಣವನ್ನು ಖರ್ಚುಮಾಡುತ್ತವೆ. ಈ ಬಾಬಿಗಾಗಿ ಅಮೇರಿಕದ ಸಂಯುಕ್ತ ಸಂಸ್ಥಾನಗಳು ಶೇ. ೨೦ರಷ್ಟು, ಇಂಗ್ಲೆಂಡ ಶೇ. ೨೫, ಫ್ರಾನ್ಸ ಶೇ. ೨೦ ಮತ್ತು ಜಪಾನ್ ಶೇ. ೪೨ ರಷ್ಟು ವೆಚ್ಚಮಾಡುತ್ತವೆ. ಇದರಿಂದ ಇತರ ದೇಶಗಳಲ್ಲಿ, ಇಂಡಿಯಾ ದೇಶಕ್ಕಿಂತ ಕಡಮೆ ಮೊಬಲಗನ್ನು ರಕ್ಷಣೆಯ ಬಾಬಿಗಾಗಿ ವೆಚ್ಚಮಾಡುತ್ತಿದೆಯೆಂದು ಅಭಿಪ್ರಾಯ ಪಡಬಾರದು. ಆ ದೇಶಗಳು, ತಮ್ಮ ಒಟ್ಟು ವೆಚ್ಚದಲ್ಲಿ ಶೇಕಡಾ ಕಡಿಮೆರೀತಿಯ ಮೊಬಲಗನ್ನು ಖರ್ಚುಮಾಡಿದರೂ, ಆ ಮೊಬಲಿಗಿನ ಮೊತ್ತ ಹೇರಳವಾದುದು. ೧೯೩೯ ನೇ

ಇಸ್ವಿಯಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಗಳು ಸುಮಾರು ೪೭೦ ಕೋಟಿ ರೂಪಾಯಿಗಳನ್ನೂ, ಇಂಗ್ಲೆಂಡ್ ೧೭೩ ಕೋಟಿ ರೂಪಾಯಿಗಳನ್ನೂ, ಫ್ರಾನ್ಸ್ ೯೯ ಕೋಟಿ ರೂಪಾಯಿಗಳನ್ನೂ, ಜಪಾನ್ ೧೭೯ ಕೋಟಿ ರೂಪಾಯಿಗಳನ್ನೂ, ಇಂಡಿಯಾ ದೇಶ ಕೇವಲ ೫೦ ಕೋಟಿ ರೂಪಾಯಿಗಳನ್ನೂ ಈ ಬಾಬಿಗಾಗಿ ವೆಚ್ಚಮಾಡಿವೆ. ಆದುದರಿಂದ ಇಂಡಿಯಾದಂತಹ ದೊಡ್ಡ ರಾಷ್ಟ್ರವನ್ನು ಒಳಗಣ ಮತ್ತು ಹೊರಗಣ ದಾಂಧಲೆಗಳಿಂದ ಪಾರುಮಾಡಿ ದೇಶದಲ್ಲಿ ಶಾಂತಿ ಮತ್ತು ಸುಭಿಕ್ಷಗಳು ನೆಲಸುವಂತೆ ಮಾಡಬೇಕಾದರೆ ಇಷ್ಟು ಹಣವನ್ನು ಸೈನ್ಯದ ಮೇಲೆ ವೆಚ್ಚಮಾಡುವುದು ಅನುಚಿತವಿಲ್ಲ.

## ಆಡಳಿತ

ಇಂಡಿಯಾ ದೇಶದಲ್ಲಿ ಸರಕಾರದ ಆಡಳಿತಕ್ಕಾಗಿ ಎಂದರೆ ಬೇರೆಬೇರೆ ಇಲಾಖೆಗಳ ನಿರ್ವಾಹಕ್ಕಾಗಿ ಕೇಂದ್ರ ಮತ್ತು ಪ್ರಾಂತ ಸರಕಾರಗಳು ಸುಮಾರು ಇಪ್ಪತ್ತೆಂಟು ಕೋಟಿ ರೂಪಾಯಿಗಳನ್ನು ವೆಚ್ಚ ಮಾಡುತ್ತವೆ. ಇದರಲ್ಲಿ, ಸರಕಾರದ ಹುಟ್ಟುವಳಿಯನ್ನು ವಸೂಲ್ಮಾಡುವ ಆಡಳಿತಕ್ಕಾಗಿ ಸುಮಾರು ಹದಿಮೂರು ಕೋಟಿ ರೂಪಾಯಿಗಳು ವೆಚ್ಚವಾಗುತ್ತವೆ. ಇನ್ನು ಉಳಿದುದು ಸಾಮಾನ್ಯ ಆಡಳಿತಕ್ಕಾಗಿ. ಇದರಲ್ಲಿ ದೇಶದ ಒಳ ಮತ್ತು ಹೊರ ರಕ್ಷಣೆಗೆ ಬೇಕಾದ ಸೈನ್ಯ, ಮತ್ತು ಪೋಲೀಸ್ ಮೊದಲಾದುವುಗಳ ಆಡಳಿತಕ್ಕಾಗಿ ವೆಚ್ಚವಾಗುವ ಮೊಬಲಗು ಸೇರಿಲ್ಲ. ಸಾಮಾನ್ಯ ಆಡಳಿತಕ್ಕೆ ವೆಚ್ಚವಾಗುವ ೧೫ ಕೋಟಿ ರೂಪಾಯಿಗಳಲ್ಲಿ ಬಹುಭಾಗ ಇಲಾಖೆಗಳ ಅಧಿಕಾರಿಗಳು ಮತ್ತು ನೌಕರರಿಗೆ ಕೊಡುವ ವೇತನಗಳಿಗಾಗಿ ವೆಚ್ಚವಾಗುತ್ತದೆ. ವೇತನಗಳಿಗಾಗಿ ಬಹು ಹೆಚ್ಚು ಹಣ ವೆಚ್ಚವಾಗುತ್ತಿದೆಯೆಂದೂ ಇಂಡಿಯಾ ಸಿವಿಲ್ ಸರ್ವಿಸ್, ಮತ್ತು ಪ್ರಾಂತಗಳ ಸಿವಿಲ್ ಸರ್ವಿಸ್ ಅಧಿಕಾರಗಳ ವೇತನವಂತೂ ಮಿತಿ ಮೀರಿಹೋಗಿದೆಯೆಂದೂ ಜನಸಾಮಾನ್ಯದ ಅಭಿಪ್ರಾಯ. ನಮ್ಮ ದೇಶಕ್ಕಿಂತ ಆರ್ಥಿಕ ಸ್ಥಿತಿಯಲ್ಲಿ ಮುಂದುವರೆದಿರುವ, ಇತರದೇಶಗಳಲ್ಲಿ, ನೌಕರರ ವೇತನ ಇಂಡಿಯಾದೇಶದಲ್ಲಿರುವಂತಿಲ್ಲ. ನಮ್ಮ ದೇಶದ ಎರಡರಷ್ಟು ಸರಾಸರಿ ಆದಾಯವುಳ್ಳ ಜಪಾನಿನ ಮುಖ್ಯಮಂತ್ರಿಯ ವೇತನ ತಿಂಗಳಿಗೆ ೬೨೨ ರೂಪಾಯಿಗಳು. ಅಮೆರಿಕದ ಸಂಯುಕ್ತ ಸಂಸ್ಥಾನಗಳ ಸರಾಸರಿ ಆದಾಯ ನಮಗಿಂತ ಇಪ್ಪತ್ತೆರಡರಷ್ಟು ಹೆಚ್ಚಾಗಿದೆ. ಅಲ್ಲಿಯ ಅಧ್ಯಕ್ಷರು ತಿಂಗಳಿಗೆ ೧೭,೦೬೨ ರೂಪಾಯಿ ಸಂಬಳವನ್ನು ತೆಗೆದುಕೊಳ್ಳುತ್ತಾರೆ. ಇಂಡಿಯಾದೇಶದ ವೈಸರಾಯರವರ ಸಂಬಳ ೨೧,೩೩೩ ರೂಪಾಯಿಗಳು. ಗ್ರೇಟ್ ಬ್ರಿಟನ್ನಿನಲ್ಲಿ ಇಂಡಿಯಾದೇಶದ ಹದಿನಾಲ್ಕರಷ್ಟು ಆದಾಯವಿದ್ದರೂ ಅಲ್ಲಿಯ ಮುಖ್ಯ ಮಂತ್ರಿಯ ವೇತನ ಕೇವಲ ೧೦ ಸಾವಿರ ರೂಪಾಯಿಗಳು. ಸರಕಾರದ ಮೇಲ್ದರ್ಜೆಯ ಅಧಿಕಾರಗಳ ವೇತನದ ಪ್ರಮಾಣ ಮಿತಿಮೀರಿರುವುದರಿಂದಲೂ, ಪರದೇಶದ ಜನರನ್ನು ಅಧಿಕಾರ ಸ್ಥಾನಗಳಿಗೆ ಬಹಳವಾಗಿ ನಿಯಮಿಸುತ್ತ ಬರುತ್ತಿರುವುದರಿಂದಲೂ, ಈ ವೆಚ್ಚ ಏರಿರುತ್ತದೆ. ಇದು ಒಂದು ದೃಷ್ಟಿ. ಮೇಲಿನದರ್ಜೆಯ ನೌಕರರ ವೇತನಗಳನ್ನು ಕಡಿಮೆಮಾಡಿ, ಕೆಳಗಣ ದರ್ಜೆಯ ನೌಕರರ ಸಂಬಳಗಳನ್ನು ಹೆಚ್ಚು ಮಾಡು

ಬೇಕೆಂದು ಜನರು ಅಭಿಪ್ರಾಯಪಡುವುದು ಸಹಜ. ಆದರೆ ಅಧಿಕಾರವರ್ಗದ ವೇತನಗಳಿಗಾಗಿ ಸರಕಾರ ಮಿತಿಮೀರಿ ಹಣವನ್ನು ವೆಚ್ಚಮಾಡುತ್ತಿಲ್ಲವೆಂಬುದನ್ನು, ನಮ್ಮ ದೇಶದ ಆಡಳಿತಯಂತ್ರ ಎಷ್ಟು ಸುಸೂತ್ರವಾಗಿ ನಡೆಯುತ್ತಿದೆಯೆಂಬುದನ್ನು ತಿಳಿದಿರುವವರೆಲ್ಲರೂ ಒಪ್ಪುತ್ತಾರೆ. ಪ್ರಜಾರಕ್ಷಣಾಕಾರ್ಯಗಳನ್ನೂ ದೇಶಾಭ್ಯುದಯ ಕಾರ್ಯಗಳನ್ನೂ ಆತ್ಮಸಾಕ್ಷಿಯಾಗಿ ಅವು ಫಲಪ್ರದವಾಗುವಂತೆ ಮಾಡಬೇಕಾದರೆ, ಆ ಕಾರ್ಯಗಳನ್ನು ನಿರ್ವಹಿಸುವವರಿಗೆ ಅತಿಶಯವಾದ ಮೇಧಾಶಕ್ತಿಯೂ, ಆರ್ಜವವೂ ಇರಬೇಕು. ಈ ಗುಣಗಳು ದೈವದತ್ತವೂ, ಸಂಸ್ಕಾರಜನ್ಯವೂ ಆದರೂ, ಅವರಿಗೆ ಇತರ ಯೋಚನೆಗಳೂ ತೊಂದರಗಳೂ ಇಲ್ಲದಂತಿರಬೇಕಾದರೆ, ಅವರಿಗೆ ಬೇಕಾದ ಸೌಲಭ್ಯಗಳನ್ನು ಕಲ್ಪಿಸಿಕೊಳ್ಳಲು ತಕ್ಕ ವೇತನಗಳನ್ನು ಕೊಡದೆ ಮಾರ್ಗವಿಲ್ಲ. ಅಧಿಕಾರವರ್ಗಕ್ಕೆ ನಮ್ಮ ದೇಶದವರನ್ನೇ ನಿಯಮಿಸುವುದರಿಂದಲೂ ಕೆಲವು ಕಡೆ ವೇತನಪ್ರಮಾಣಗಳನ್ನು ತಗ್ಗಿಸುವುದರಿಂದಲೂ ಈ ವೆಚ್ಚದಲ್ಲಿ ಸ್ವಲ್ಪಭಾಗವನ್ನು ಉಳಿಸುವುದು ಸಾಧ್ಯ. ಇದರಿಂದ ಜನಸಾಮಾನ್ಯಕ್ಕೆ ತಾತ್ಕಾಲಿಕವಾದ ತೃಪ್ತಿಯಾಗುವುದೂ ನಿಜ. ಆದರೆ ಅನೇಕವೇಳೆ ರಿಟ್ರೆಂಚ್‌ಮೆಂಟ್ ಕಮಿಟಿಗಳು ಹೇಳಿರುವಂತೆ, ಇದರಿಂದ ಹೆಚ್ಚು ಹಣವೂ ಉಳಿದು ಇಂದಿನಷ್ಟೇ ಶಿಸ್ತಿನಿಂದ ಸರ್ಕಾರದ ಕೆಲಸಗಳು ಯಂತ್ರದಂತೆ ಸಲೀಸಾಗಿ ನಡೆಯುವುದೆಂದು ನಿರೀಕ್ಷಿಸುವುದು ಮಾತ್ರ ಆಗದ ಕೆಲಸ. ಆದುದರಿಂದ, ಆಡಳಿತ ನಿರ್ವಾಹ ದೃಷ್ಟಿಯಿಂದ ಈ ವೆಚ್ಚವನ್ನು ತಗ್ಗಿಸುವುದು ಕ್ಷೇಮಕರವೇ ಎಂಬುದನ್ನು ಜನರು ಪುನಃ ವಿಮರ್ಶಿಸಬೇಕು.

ಇನ್ನು ಉಳಿದ ವೆಚ್ಚವೆಂದರೆ, ಸಮಾಜ ಸೇವೆ ಮತ್ತು ದೇಶದ ಸಂಪದಭಿವೃದ್ಧಿಕಾರ್ಯಗಳಿಗಾಗಿ ತಗಲುವ ಹಣ.

ವಿದ್ಯೆ, ಆರೋಗ್ಯ, ಸಹಕಾರ, ನಿರುದ್ಯೋಗ ನಿವಾರಣೆ, ಬಡತನದ ಪರಿಹಾರ, ವೃದ್ಧಾಪ್ಯವೇತನ, ಇವುಗಳಿಗಾಗಿ ಮಾಡುವ ಖರ್ಚು ಸಮಾಜ ಸೇವೆಯ ವೆಚ್ಚವೆಂದು ಭಾವಿಸಬೇಕು. ಈ ಬಾಬುಗಳಿಗಾಗಿ ತಗಲುವ ವೆಚ್ಚವು ಎಲ್ಲ ದೇಶಗಳಲ್ಲಿಯೂ ಒಂದೇ ವಿಧವಾಗಿರುವುದಿಲ್ಲ. ಇಂಗ್ಲೆಂಡ್, ಅಮೆರಿಕ ಮುಂತಾದ ಕೆಲವು ಪಾಶ್ಚಾತ್ಯದೇಶಗಳಲ್ಲಿ ಜನರು ವಿದ್ಯಾವಂತರಾಗಿ, ಸ್ವಾವಲಂಬಿಗಳಾಗಿದ್ದಾರೆ. ನಮಗಿಂತ ಅಲ್ಲಿ ಹೆಚ್ಚುಮಂದಿ ಧನಿಕರಿದ್ದಾರೆ. ಅವರು ಪಾಠಶಾಲೆಗಳಿಗೂ, ವೈದ್ಯಮಂದಿರಗಳಿಗೂ, ಕೋಟ್ಯಾಂತರ ರೂಪಾಯಿಗಳನ್ನು ದಾನ ಮಾಡಿದ್ದಾರೆ. ಹೀಗೆ ಅಲ್ಲಿಯ ಜನರೇ ಪಾಠಶಾಲೆಗಳನ್ನೂ ಆಸ್ಪತ್ರೆಗಳನ್ನೂ ಏರ್ಪಡಿಸಿ ಕೊಂಡಿರುವುದರಿಂದ, ಆ ಸರಕಾರಗಳು ವಿದ್ಯೆ, ಆರೋಗ್ಯ, ವೈದ್ಯಸಹಾಯ— ಇವುಗಳಿಗಾಗಿ ಹೆಚ್ಚುಹಣವನ್ನು ವೆಚ್ಚಮಾಡುತ್ತಿಲ್ಲ. ನಿರುದ್ಯೋಗ, ಬಡತನ, ಮತ್ತು ಮುಪ್ಪಿನಕಾಲದ ಜೀವನ, ಇವುಗಳಿಗಾಗಿ ಬೇಕಾದ ವೆಚ್ಚ ಆ ದೇಶಗಳಲ್ಲಿ ಹೇರಳವಾಗಿದೆ. ನಮ್ಮ ದೇಶದಲ್ಲಿರುವಂತೆ ಅವಿಭಕ್ತ ಕುಟುಂಬದ ಸಹಾಯವಾಗಲಿ, ಧರ್ಮ ಸಂಸ್ಥೆಗಳಾಗಲಿ, ಅಲ್ಲಿಯವರಿಗಿಲ್ಲ. ನಮ್ಮಂತೆ ಅವರು ಅಲ್ಪಾಯುಗಳಲ್ಲ. ಮುದುಕರು ವಿಶೇಷವಾಗಿದ್ದಾರೆ. ಅವರ ಪೋಷಣೆಯನ್ನೂ, ನಿರುದ್ಯೋಗ ಮತ್ತು ಬಡತನ ಮೊದಲಾದ ಕಷ್ಟಗಳನ್ನು ನಿವಾರಿಸುವುದನ್ನೂ, ಸರಕಾರದವರು ಮುಖ್ಯ ಕರ್ತವ್ಯ

ವಾಗಿ ಭಾವಿಸಬೇಕೆಂಬುದು ಆ ಜನರ ಅಭಿಪ್ರಾಯ. ಈ ಕಾರಣಗಳಿಂದ ಸಮಾಜ ಸೇವೆಯ ಖರ್ಚು ಆ ದೇಶಗಳಲ್ಲಿ ಬಹಳ ಹೆಚ್ಚಿದೆ. ನಮ್ಮ ದೇಶದಲ್ಲಾದರೋ ನಿರುದ್ಯೋಗವೂ ದಾರಿದ್ರ್ಯವೂ ಮಿತಿಮೀರಿದ್ದರೂ, ಜನಗಳ ಮೌಢ್ಯ, ಸಮಾಜದ ಬಡತನ, ಅವಿಭಕ್ತ ಕುಟುಂಬದಿಂದ ದೊರೆಯುವ ಸಹಾಯ ಮತ್ತು ಸರಕಾರದ ಔದಾಸೀನ್ಯಗಳಿಂದ ಸಮಾಜದ ಸೇವೆಯ ಬಾಬುಗಳಿಗಾಗಿ ಎಷ್ಟು ವೆಚ್ಚವಾಗಬೇಕೋ ಅಷ್ಟು ಆಗುತ್ತಿಲ್ಲ.

ನಮ್ಮ ದೇಶದಲ್ಲಿ ಕೇಂದ್ರ ಮತ್ತು ಪ್ರಾಂತ ಸರಕಾರಗಳು ೧೮ ಕೋಟಿ ರೂಪಾಯಿಗಳಷ್ಟು ವಿದ್ಯಾಭ್ಯಾಸ, ವೈದ್ಯ, ಮತ್ತು ಆರೋಗ್ಯಶಾಖೆಗಳಿಗಾಗಿ ವೆಚ್ಚ ಮಾಡುತ್ತವೆ. ಇದರಲ್ಲಿ ಕೇಂದ್ರ ಸರಕಾರ ಕೇವಲ ೬೦ ಲಕ್ಷ ರೂಪಾಯಿಗಳಷ್ಟು ವೆಚ್ಚಮಾಡುತ್ತದೆ. ಇವು ಪ್ರಾಂತಗಳು ನಿರ್ವಹಿಸಬೇಕಾದ ಬಾಬುಗಳಾದ್ದರಿಂದ ಪ್ರಾಂತ ಸರಕಾರಗಳೇ ಇದಕ್ಕಾಗಿ ಹೆಚ್ಚುಹಣವನ್ನು ವೆಚ್ಚಮಾಡುತ್ತವೆ. ಎಲ್ಲ ಪ್ರಾಂತಗಳೂ ಈ ಬಾಬುಗಳಿಗೆ ಒಂದೇ ಸಮನಾಗಿ ವೆಚ್ಚಮಾಡುತ್ತಿಲ್ಲ. ಪ್ರಾಂತಗಳ ವಿಸ್ತೀರ್ಣ ಮತ್ತು ಅಲ್ಲಿಯ ಹುಟ್ಟುವಳಿಗಳಲ್ಲಿ ವ್ಯತ್ಯಾಸವಿರುವಂತೆಯೇ ಈ ಬಾಬಿಗಾಗಿ ವೆಚ್ಚವಾಗುವ ಮೊಬಲಗಿನಲ್ಲಿಯೂ ವ್ಯತ್ಯಾಸವಾಗುತ್ತದೆ.

೧೮೫೪ನೆಯ ವರುಷದವರೆಗೆ ನಮ್ಮ ದೇಶದಲ್ಲಿ ವಿದ್ಯಾಭ್ಯಾಸಕ್ಕಾಗಿಯೇ ಮೀಸಲಾಗಿ ಯಾವ ಹಣವನ್ನೂ ತೆಗೆದಿಡುತ್ತಿರಲಿಲ್ಲ. ೧೮೫೯ರಿಂದ ಪ್ರಾಂತಗಳಲ್ಲಿ ವಿದ್ಯಾಭ್ಯಾಸದ ಸೆಸ್ಸನ್ನು ವಸೂಲ್ಮಾಡಿ, ಅದನ್ನು ವಿದ್ಯಾಭ್ಯಾಸದ ಶಾಖೆಗಾಗಿ ಉಪಯೋಗಿಸುತ್ತಾ ಬಂದರು. ೧೮೬೬-೬೭ರ ವರೆಗೂ ನಮ್ಮ ದೇಶದಲ್ಲಿ ವರ್ಷ ಒಂದಕ್ಕೆ ಶಿಕ್ಷಣಕ್ಕಾಗಿ ಕೇವಲ ೭೭ ಲಕ್ಷ ರೂಪಾಯಿಗಳು ಮಾತ್ರ ವೆಚ್ಚವಾಗುತ್ತಿತ್ತು. ೧೯೩೫-೩೬ರಲ್ಲಿ ಕೇಂದ್ರ ಮತ್ತು ಪ್ರಾಂತ ಸರಕಾರಗಳು ಶಿಕ್ಷಣದ ವ್ಯವಸ್ಥೆಗಾಗಿ ಸುಮಾರು ಹನ್ನೆರಡೂವರೆ ಕೋಟಿ ರೂಪಾಯಿಗಳನ್ನು ವೆಚ್ಚಮಾಡುತ್ತಿವೆ. ಎಂದರೆ ಒಟ್ಟು ವೆಚ್ಚದಲ್ಲಿ ಶೇಕಡ ಐದರಷ್ಟು ಖರ್ಚಾಗುತ್ತಿದೆ ಎನ್ನಬಹುದು.

## ವೈದ್ಯ ಮತ್ತು ಆರೋಗ್ಯ

ವೈದ್ಯ ಮತ್ತು ಆರೋಗ್ಯದ ಶಾಖೆಗಳಿಗಾಗಿ ನಾವು ವೆಚ್ಚಮಾಡುತ್ತಿರುವುದು ಇದಕ್ಕಿಂತ ಅಲ್ಪ. ಕೇಂದ್ರ ಮತ್ತು ಪ್ರಾಂತ ಸರಕಾರಗಳು ಇವುಗಳಿಗಾಗಿ ಸುಮಾರು ಐದೊವರೆ ಕೋಟಿ ರೂಪಾಯಿಗಳಷ್ಟು ವೆಚ್ಚಮಾಡುತ್ತವೆ. ಇದು ಒಟ್ಟು ವೆಚ್ಚದಲ್ಲಿ ಶೇಕಡ ಎರಡರಷ್ಟು. ಇಂಡಿಯಾ ದೇಶದಲ್ಲಿನ ಜನರ ಆಯುಃಪ್ರಮಾಣ ಸರಾಸರಿ ೨೩ಕ್ಕೆ ಇಳಿದಿದೆ. ಇಂಗ್ಲೆಂಡ್ ಮತ್ತು ವೇಲ್ಸ್ ದೇಶಗಳವರ ಆಯುಃಪರಿಮಿತಿ ಸರಾಸರಿ ೫೫ ವರ್ಷಗಳು. ನಮ್ಮ ದೇಶದ ಜನರು ಆಹಾರ ಸಾಲದೆ ನಶಿಸುತ್ತಿರುವುದಲ್ಲದೆ, ಮಲೇರಿಯಾ ಮೊದಲಾದ ವ್ಯಾಧಿಗಳಿಂದಲೂ, ಸಾಂಕ್ರಾಮಿಕ ಜಾಡ್ಯಗಳಿಂದಲೂ ನರಳುತ್ತಿದ್ದಾರೆ. ಇವು ನಿವಾರಣೆಯಾಗಿ ಜನರು ಆರೋಗ್ಯವಂತರಾಗಿ, ದೃಢಕಾಯರಾಗಿರಬೇಕಾದರೆ ತಕ್ಕ ವೈದ್ಯ ಮತ್ತು

ಆರೋಗ್ಯದ ಸೌಕರ್ಯಗಳನ್ನು ಕಲ್ಪಿಸಬೇಕು. ಜನರಿಗೆ ಸುಲಭವಾಗಿ ಔಷಧಿ ಮೊದಲಾದ ಸೌಕರ್ಯಗಳು ದೊರೆವಂತಾಗಬೇಕು. ಪುಷ್ಟಿಕರವಾದ ಆಹಾರ ಪದಾರ್ಥಗಳನ್ನು ಜನಸಾಮಾನ್ಯವು ಉಪಯೋಗಿಸುವುದಕ್ಕೆ ಅವಕಾಶಗಳುಂಟಾಗಬೇಕು.

## ಸಂಪದಭಿವೃದ್ಧಿಯ ಬಾಬುಗಳು

ಕೇಂದ್ರ ಮತ್ತು ಪ್ರಾಂತ ಸರಕಾರಗಳ ವಿಭಜನೆಯಾಗುವುದಕ್ಕೆ ಹಿಂದಿನಿಂದಲೂ ಇಂಡಿಯಾ ಸರಕಾರ, ತನ್ನ ಆದಾಯದಿಂದಲೂ, ಮತ್ತು ಸಾಲ ಮಾಡಿಯೂ, ದೇಶದ ಸಂಪತ್ತನ್ನು ಹೆಚ್ಚುಮಾಡಬಲ್ಲ ರೈಲ್ವೆ, ನೀರಾವರಿ ಮತ್ತು ರಸ್ತೆಗಳ ನಿರ್ಮಾಣ ಮೊದಲಾದ ಸಂಪದಭಿವೃದ್ಧಿ ಕಾರ್ಯಗಳಿಗಾಗಿ ಹಣವನ್ನು ವೆಚ್ಚ ಮಾಡುತ್ತಿತ್ತು. ಈಚೆಗೆ, ಇದೇ ರೀತಿಯಲ್ಲಿ ಪ್ರಾಂತ ಸರಕಾರಗಳು ತಮ್ಮ ಪ್ರಜೆಗಳ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವುದಕ್ಕಾಗಿ, ಕೆಲವು ಕೈಗಾರಿಕೆಗಳನ್ನು ವ್ಯಾಪಾರೋದ್ಯಮಗಳನ್ನು ಕೈಗೊಂಡು, ವ್ಯವಸಾಯದ ಬೆಳವಣಿಗೆಗಾಗಿ ಹೊಸ ವಿಧಾನಗಳನ್ನು ಕಲ್ಪಿಸಿಯೂ, ನೀರಾವರಿ ಮತ್ತು ರಸ್ತೆ ಕೆಲಸಗಳನ್ನು ಕೈಗೊಂಡೂ ತಮ್ಮ ಆದಾಯದಲ್ಲಿ ಸ್ವಲ್ಪಭಾಗವನ್ನು ವೆಚ್ಚಮಾಡುತ್ತಿವೆ. ಈ ಸಂಪದಭಿವೃದ್ಧಿ ಕಾರ್ಯಗಳಿಗಾಗಿ ಪ್ರಾಂತ ಸರಕಾರಗಳು ಸುಮಾರು ಇಪ್ಪತ್ತು ಕೋಟಿ ರೂಪಾಯಿಗಳನ್ನು ವೆಚ್ಚ ಮಾಡುತ್ತಿವೆಯೆನ್ನಬಹುದು.

ನಮ್ಮ ದೇಶದಲ್ಲಿ ಶೇಕಡ ೭೦ರಷ್ಟು ಜನರು ವ್ಯವಸಾಯವನ್ನು ಅವಲಂಬಿಸಿ ಜೀವನ ನಡೆಸತಕ್ಕವರು. ಇಷ್ಟಾದರೂ ಜನರ ಜೀವನಾಧಾರವಾದ ವ್ಯವಸಾಯದ ಅಭಿವೃದ್ಧಿಗಾಗಿ ಬೇಕಾದಷ್ಟು ಹಣವನ್ನು ನಾವು ವೆಚ್ಚ ಮಾಡುತ್ತಿಲ್ಲ. ವ್ಯವಸಾಯಕ್ಕಾಗಿ ನಾವು ಒಟ್ಟು ವೆಚ್ಚದಲ್ಲಿ ಶೇಕಡಾ ಒಂದರಷ್ಟು ಮಾತ್ರ ಖರ್ಚು ಮಾಡುತ್ತಿದ್ದೇವೆ. ವ್ಯವಸಾಯಶಾಖೆ ನಮ್ಮ ದೇಶದಲ್ಲಿ ಆರಂಭವಾದುದೇ ೧೯೦೫ರಲ್ಲಿ. ವ್ಯವಸಾಯ ಶಾಸ್ತ್ರೀಯವಾಗಿ, ಸುಲಭವಾಗಿ ಫಲಕಾರಿಯಾಗಿ ನಡೆಯಲು ಸರಕಾರ ಸಂಶೋಧನಾ ಕ್ಷೇತ್ರಗಳನ್ನೂ, ವ್ಯವಸಾಯ ಶಾಲೆಗಳನ್ನೂ, ಬೀಜಾವರಿ ಪದಾರ್ಥಗಳನ್ನು ಒದಗಿಸುವ ಅಂಗಡಿಗಳನ್ನೂ ಸ್ಥಾಪಿಸಿ, ಸಹಾಯಮಾಡುತ್ತಿದೆ. ಆದರೂ ಈ ತೆರನಾದ ಕಾರ್ಯ ಇನ್ನೂ ಬಹುಮುಖವಾಗಿ ಬೆಳೆಯಬೇಕು.

ವ್ಯವಸಾಯ ಶಾಖೆಯಂತೆಯೇ ಕೈಗಾರಿಕೆಯ ಇಲಾಖೆಯೂ ಕೂಡ ನಮ್ಮ ದೇಶದಲ್ಲಿ ಈಚೆಗೆ ಹುಟ್ಟಿ ಬೆಳೆದದ್ದು. ಇದಕ್ಕಾಗಿ ವರ್ಷಂಪ್ರತಿ ಆಗುತ್ತಿರುವ ವೆಚ್ಚ ಶೇಕಡ ·೪. ಈಚೆಗೆ ಕೇಂದ್ರ ಮತ್ತು ಪ್ರಾಂತ ಸರಕಾರಗಳು ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕೂ, ಗ್ರಾಮ ಕೈಗಾರಿಕೆಗಳಿಗೆ ಪ್ರೋತ್ಸಾಹಿಸುವುದಕ್ಕೂ ಹಣ ವೆಚ್ಚ ಮಾಡುತ್ತಿವೆ. ಅಲ್ಲದೆ ಕೈಗಾರಿಕೆಗಳಿಗೆ ಆವಶ್ಯಕವಾದ ಸಂಶೋಧನಾ ಕಾರ್ಯಗಳಿಗಾಗಿಯೂ ಸ್ವಲ್ಪ ಹಣ ವೆಚ್ಚಮಾಡುತ್ತವೆ. ಈ ಬಾಬಿನ ವೆಚ್ಚವೂ ಹೆಚ್ಚಬೇಕು.

ಪಾಶ್ಚಾತ್ಯ ದೇಶಗಳಂತೆ ನಾವು ದರಿದ್ರರಿಗೆ ಸಹಾಯ, ನಿರುದ್ಯೋಗ ನಿವಾರಣೆ, ವೃದ್ಧಾಪ್ಯ ವೇತನ, ಕ್ಷಾಮ ನಿವಾರಣೆ, ರೋಗಗ್ರಸ್ತರಿಗಾಗಿ ವಿಮೆ, ಇವುಗಳಿಗಾಗಿ ಏನೇನೂ ವೆಚ್ಚ ಮಾಡುತ್ತಿಲ್ಲ. ಇದಕ್ಕೆ ವೆಚ್ಚಮಾಡಲು ನಮ್ಮಲ್ಲಿ ಹಣವಿಲ್ಲದಿರುವುದೇ ಕಾರಣ.

ಸರಕಾರಕ್ಕೆ ಹಣ ಬೇಕಾದರೆ ಜನರ ಮೇಲೆ ತೆರಿಗೆ ಹಾಕಬೇಕು. ತೆರಿಗೆ ಕೊಡಬೇಕಾದರೆ ಪ್ರಜೆಗಳಿಗೆ ಚೈತನ್ಯವಿರಬೇಕು. ನಮ್ಮ ದೇಶದಲ್ಲಿ ಪ್ರಜೆಗಳ ಸರಾಸರಿ ಆದಾಯ ಬಹು ಅಲ್ಪ. ಅವರ ಜೀವನಕ್ಕಾಗಿ ಸಾಕಾಗುವಷ್ಟು ಕೂಡ ಅವರಿಗೆ ಆದಾಯವಿಲ್ಲ. ದೇಶದ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲು ಪ್ರಜೆಗಳಿಗೆ ಬೇಕಾದ ಶಕ್ತಿ ಸಾಹಸಗಳಿಲ್ಲ. ಪ್ರಜೆಗಳೇ ಯಾವುದಾದರೂ ಹೊಸ ಕೈಗಾರಿಕೆಗಳನ್ನೂ ಉದ್ಯಮಗಳನ್ನೂ ಪ್ರಾರಂಭಿಸಲು ಸಾಮರ್ಥ್ಯ ಸಾಲದು. ದೇಶದ ಸ್ಥಿತಿ ಹೀಗಿರುವಾಗ ಜನರಲ್ಲಿ ಉತ್ಸಾಹ ತುಂಬಿ, ಅವರಿಗೆ ಬೇಕಾದ ಚೈತನ್ಯವನ್ನೂ ಅವಕಾಶಗಳನ್ನೂ ಕಲ್ಪಿಸಿಕೊಟ್ಟು ದೇಶದಲ್ಲಿ ಸಂಪತ್ತು ಬೆಳೆಯುವಂತೆ ಮಾಡಬೇಕಾದ ಭಾರ ಸರಕಾರದ್ದು. ಇಂತಹ ಕಾರ್ಯಗಳನ್ನು ಸರಕಾರವೇ ಕೈಗೊಂಡು ಈ ವಿಧವಾದ ಬಾಬುಗಳಿಗೆ ಹೆಚ್ಚು ಹಣ ವೆಚ್ಚಮಾಡಿ ದೇಶದಲ್ಲಿ ಒಂದು ಹೊಸ ಜೀವನ ಉದಯಿಸುವಂತೆ ಮಾಡಬೇಕು. ನೀರಾವರಿ ಕೆಲಸಗಳು, ಶಾಸ್ತ್ರೀಯವಾದ ವ್ಯವಸಾಯ, ವಿದ್ಯಾಭ್ಯಾಸ, ಆರೋಗ್ಯ, ಇವೇ ಮೊದಲಾದ ಆರ್ಥಿಕಾಭಿವೃದ್ಧಿ, ಮತ್ತು ಸಮಾಜ ಸೇವಾ ಕಾರ್ಯಗಳಿಗಾಗಿ, ಪ್ರಜೆಗಳಿಂದಲೇ ಹಣ ಎತ್ತಿ ಅದನ್ನು ವೆಚ್ಚಮಾಡುವ ನೀತಿಯನ್ನು ಸರಕಾರ ಅನುಸರಿಸುವುದು ಸಾಧ್ಯ. ಸಂಪದಭಿವೃದ್ಧಿ ಕಾರ್ಯಗಳು ದೇಶದಲ್ಲಿ ಹೆಚ್ಚಿದಂತೆಲ್ಲಾ ಜನರ ಆದಾಯ ಹೆಚ್ಚಿ ಅವರಿಗೆ ತೆರಿಗೆ ಕೊಡುವ ಸಾಮರ್ಥ್ಯವೂ ಹೆಚ್ಚುತ್ತದೆ. ಅವರ ಆದಾಯವನ್ನು ಮೊದಲು ಹೆಚ್ಚುವಂತೆ ಮಾಡಿದರೆ ಅವರಿಂದ ಹೆಚ್ಚು ತೆರಿಗೆ ವಸೂಲ್ಮಾಡುವುದು ಸುಲಭ.

ಸಮಾಜ ಸೇವೆ ಮತ್ತು ಸಂಪದಭಿವೃದ್ಧಿ ಕಾರ್ಯಗಳಿಗಾಗಿ ಆಗುತ್ತಿರುವ ವೆಚ್ಚ ಸಾಲದು. ಅಷ್ಟೇ ಅಲ್ಲ. ಈಗ ಆಗುತ್ತಿರುವ ವೆಚ್ಚದ ರೀತಿ ಇಂಡಿಯಾದೇಶದ ಎಲ್ಲ ಪ್ರಾಂತಗಳೂ ಒಂದೇ ರೀತಿಯಲ್ಲಿ ಮುಂದುವರಿಯುವುದಕ್ಕೆ ಸಾಧಕವಾಗಿಲ್ಲ. ಈ ವೆಚ್ಚವನ್ನು ದೂರ ದೃಷ್ಟಿಯಿಂದ ಒಂದು ಕ್ರಮವನ್ನು ಅನುಸರಿಸಿ ಮಾಡುತ್ತಿಲ್ಲ. ಕೆಲವು ಪ್ರಾಂತಗಳಿಗೆ ವರಮಾನಕ್ಕಿಂತ ಖರ್ಚೇ ಹೆಚ್ಚಾಗಿರುವುದರಿಂದ ಈ ಬಾಬುಗಳಿಗೆ, ಅವು ಸಾಕಷ್ಟು ಹಣ ವೆಚ್ಚಮಾಡಲು ಅವಕಾಶವಿಲ್ಲದೆ ಇದೆ. ಪ್ರಾಂತ ಸರಕಾರಗಳ ಆದಾಯದ ಬಾಬುಗಳಾದ ಭೂಕಂದಾಯ, ಅಬ್ಕಾರಿ, ಸ್ಟಾಂಪು ಮೊದಲಾದುವು, ಬೆಳೆಯದ ಬಾಬುಗಳು ವೆಚ್ಚದ ಬಾಬುಗಳು ದಿನೇ ದಿನೇ ಬೆಳೆಯುವ ಬಾಬುಗಳು. ಕೇಂದ್ರ ಸರಕಾರಕ್ಕೆ ಮೀಸಲಾದ, ಆದಾಯದ ತೆರಿಗೆ, ಸುಂಕ ಮೊದಲಾದುವುಗಳಿಂದ ಹೆಚ್ಚು ಉತ್ಪತ್ತಿಯಾಗುತ್ತದೆ. ಅದರ ಖರ್ಚು ಬಾಬುಗಳು ಪ್ರಾಂತ ಸರಕಾರಗಳಂತೆ ಬೆಳೆಯುವುವಲ್ಲ. ಆದುದರಿಂದ, ಪ್ರಾಂತ ಸರಕಾರಗಳೂ ಸಮಾಜ ಸೇವೆ, ಮತ್ತು ಆರ್ಥಿಕಾಭಿವೃದ್ಧಿ ಕಾರ್ಯಗಳನ್ನು ಹೆಚ್ಚು

ಹೆಚ್ಚಾಗಿ ಕೈಗೊಂಡು ಸಾರ್ವಜನಿಕವೆಚ್ಚ ಸಮಾಜದ ಪರಮ ಹಿತತತ್ತ್ವವನ್ನು ಅನುಸರಿಸಬೇಕಾದರೆ, ಕೆಲವು ಮಾರ್ಪಾಡುಗಳಾಗಬೇಕು. ಇವುಗಳಲ್ಲಿ, ಕೇಂದ್ರ ಮತ್ತು ಪ್ರಾಂತ ಸರಕಾರಗಳ ಆಯವ್ಯಯ ಸಂಬಂಧ ಒಂದನ್ನೊಂದು ಹೊಂದಿಕೊಂಡು ಹೋಗುವುದು ಮುಖ್ಯವಾದ ಅಂಶ.

# ಪ್ರಕರಣ ೨೦

## ಕೇಂದ್ರ ಮತ್ತು ಪ್ರಾಂತ ಸರಕಾರಗಳ ಹಣಕಾಸಿನ ಸಂಬಂಧ *

೧೮೭೧ನೆಯ ಇಸವಿಯವರೆಗೂ ನಮ್ಮ ದೇಶದ ಎಲ್ಲ ವಿಧವಾದ ಆದಾಯ ವೆಚ್ಚಗಳನ್ನೂ ಕೇಂದ್ರಸರಕಾರವೇ ನಡೆಸುತ್ತಿತ್ತು. ಪ್ರಾಂತಗಳಿಗೆ ಸಂಬಂಧಪಟ್ಟ ವೆಚ್ಚಗಳಲ್ಲಿ ಪ್ರತಿಯೊಂದು ಅಂಶವನ್ನೂ ಕೇಂದ್ರಸರಕಾರವೇ ತನಿಖೆ ಮಾಡುತ್ತಿತ್ತು. ಈ ವಿಧವಾದ ಅಧಿಕಾರ ಏಕೀಭೂತವಾಗಿರುವುದು ಉಚಿತವಲ್ಲವೆಂದೂ, ಪ್ರಾಂತ ಸರಕಾರಗಳೂ, ತಮ್ಮ ಆದಾಯವನ್ನು ಹೆಚ್ಚು ಮಾಡಿಕೊಂಡು ಅದಷ್ಟು ಮಿತದಿಂದ ಅದನ್ನು ವೆಚ್ಚಮಾಡುವುದು ಸಾಧುವೆಂದೂ ಯೋಚಿಸಿ ಲಾರ್ಡ್ ಮೇಯೋ ಅವರು ೧೮೭೧ರಲ್ಲಿ ಪ್ರಾಂತಗಳ ಹಣಕಾಸಿನ ವ್ಯವಸ್ಥೆ ಮಾಡಿದರು. ಇದರ ಪ್ರಕಾರ ಆಯಾ ಪ್ರಾಂತಗಳಿಗೆ ಮಾತ್ರ ಸೇರಿದ, ಸ್ಥಳೀಯ ವಿದ್ಯಮಾನಗಳನ್ನು ಅನುಸರಿಸಿ ಮಾಡಬೇಕಾದ ವೆಚ್ಚವನ್ನು ಪ್ರಾಂತ ಸರಕಾರಗಳು ಮಾಡುವಂತಾಯಿತು. ಆಯಾ ಶಾಖೆಗಳಿಂದ ಉತ್ಪನ್ನವಾಗುತ್ತಿದ್ದ ಹುಟ್ಟುವಳಿಯ ಜತೆಗೆ ಕೇಂದ್ರ ಸರಕಾರವೂ, ಪ್ರಾಂತಗಳಿಗೆ ಸಹಾಯ ದ್ರವ್ಯವನ್ನು ಪ್ರತಿ ವರ್ಷವೂ ಕೊಡುತ್ತಿತ್ತು. ಇಷ್ಟಾದರೂ ಪ್ರಾಂತ ಸರಕಾರಗಳ ವೆಚ್ಚಕ್ಕೆ ಸಾಕಾಗುತ್ತಿರಲಿಲ್ಲ. ಹೀಗೆ ಸಾಲದೆ ಹೋದ ಹಣವನ್ನು ಪ್ರಾಂತ ಸರಕಾರಗಳು ಅಲ್ಲಿಗೆ ಅನ್ವಯಿಸುವಂತೆ ಕೆಲವು ತೆರಿಗೆಗಳನ್ನು ಹಾಕಿ, ಉತ್ಪತ್ತಿ ಮಾಡಿಕೊಳ್ಳಬೇಕಾಯಿತು. ಹಣಕಾಸಿನ ಪೂರ್ಣಾಧಿಕಾರ ಒಂದೇಕಡೆ ಕೇಂದ್ರೀಕೃತವಾಗಿದ್ದುದು ಸಡಿಲುತ್ತ ಬಂತು. ಇದು ೧೮೭೭, ೧೮೮೨, ೧೯೦೪ ಮತ್ತು ೧೯೧೨ರಲ್ಲಿ ನಡೆದ ವ್ಯವಸ್ಥೆಗಳ ಮೂಲಕ ಸ್ವಲ್ಪ ಬದಲಾವಣೆ ಹೊಂದಿತು.

ಮಾಂಟೆಗ್ಯೂ ಛೆಲ್ಮ್ಸ್‌ಫರ್ಡ್ ಸುಧಾರಣೆಗಳು ಜಾರಿಗೆ ಬರುವುದಕ್ಕೆ ಮೊದಲು, ಇಂತಹ ಪ್ರಾಂತಕ್ಕೇ ಸೇರತಕ್ಕದ್ದು ಎಂದು ನಿರ್ದಿಷ್ಟವಾಗಿ ಹೇಳಲಾಗದ ಅಫೀಂ, ರೈಲ್ವೆ, ಸುಂಕ, ಉಪ್ಪು, ಅಂಚೆ ಮತ್ತು ತಂತಿ ಈ ಬಾಬುಗಳನ್ನು ಈಗಿನ ಕೇಂದ್ರ ಸರಕಾರದ ಸ್ಥಾನದಲ್ಲಿದ್ದ ಸಾರ್ವಭೌಮ ಸರಕಾರ ತನ್ನ ಆದಾಯದ ಬಾಬುಗಳನ್ನಾಗಿಟ್ಟುಕೊಂಡಿತ್ತು. ಇನ್ನುಳಿದ ಅರಣ್ಯ, ಅಬ್ಕಾರಿ, ರಿಜಿಸ್ಟ್ರೇಷನ್,

* ಈ ಪ್ರಕರಣ ಮತ್ತು ಮುಂದಿನ ಐದು ಪ್ರಕರಣಗಳಲ್ಲಿ ವಿವರಿಸಿರುವ ವಿಷಯಗಳು ೧೯೪೭ರಲ್ಲಿ ದೊರೆತ ರಾಜಕೀಯ ಸ್ವಾತಂತ್ರ್ಯ ಮತ್ತು ಈಚಿನ ನೂತನ ರಾಜ್ಯಾಂಗದ ರಚನೆ ನಿಯಮಗಳಿಂದ ಸಂಪೂರ್ಣವಾಗಿ ಬದಲಾಯಿಸಲ್ಪಟ್ಟಿವೆ. ಆದಾಯ, ವೆಚ್ಚ ಮತ್ತು ಸಾಲಸೋಲಗಳಿಗೆ ಸಂಬಂಧಪಟ್ಟ ಅಂಕಿ ಅಂಶಗಳಲ್ಲಿ ಯುದ್ಧ ಮತ್ತು ಈಚಿನ ರಾಜಕೀಯ ಸನ್ನಿವೇಶದಿಂದ ಉಂಟಾದ ಬದಲಾವಣೆಗಳನ್ನು ಪ್ರತ್ಯೇಕವಾಗಿ ಸೂಚಿಸಿದೆ.

ವಿದ್ಯಾಭ್ಯಾಸ, ನ್ಯಾಯ ಈ ಶಾಖೆಗಳಿಂದ ಬರುವ ಹುಟ್ಟುವಳಿ ಪ್ರಾಂತ ಸರಕಾರಗಳ ಆದಾಯವಾಗಿತ್ತು. ಭೂಕಂದಾಯ, ಆದಾಯ ತೆರಿಗೆ, ಅಬ್ಕಾರಿ, ನೀರಾವರಿ, ಸ್ಟಾಂಪು, ಈ ಬಾಬುಗಳಿಂದ ಬಂದ ಹುಟ್ಟುವಳಿಯನ್ನು ಈ ಎರಡು ಸರಕಾರಗಳವರೂ ಹಂಚಿಕೊಳ್ಳುತ್ತಿದ್ದರು.

ವೆಚ್ಚದ ಬಾಬಿನಲ್ಲಿಯೂ, ಹೆಚ್ಚು ಕಡಿಮೆ ಇದೇ ವಿಧವಾದ ನೀತಿಯನ್ನೇ ಅನುಸರಿಸಲಾಗಿತ್ತು. ಆಯಾ ಸ್ಥಳೀಯ ವಿದ್ಯಮಾನಗಳನ್ನು ಅನುಸರಿಸಿ ನಡೆಸಬೇಕಾದ ವೆಚ್ಚವೆಲ್ಲವೂ, ಪ್ರಾಂತ ಸರಕಾರಗಳಿಗೆ ಸೇರಿತ್ತು. ಇಡಿ ಇಂಡಿಯಾ ದೇಶಕ್ಕೆ ಅನ್ವಯಿಸುವ ವೆಚ್ಚ ಸಾರ್ವಭೌಮ ಸರಕಾರಕ್ಕೆ ಸೇರಿತ್ತು. ಆದರೆ ಕ್ಷಾಮ ನಿವಾರಣೆ ಮೊದಲಾದವುಗಳಿಗಾಗಿ ಆಯಾ ಪರಿಸ್ಥಿತಿಗೆ ತಕ್ಕಂತೆ ಕೇಂದ್ರ ಮತ್ತು ಪ್ರಾಂತ ಸರಕಾರಗಳು ಎರಡೂ ಸೇರಿ ವೆಚ್ಚಮಾಡುತ್ತಿದ್ದುವು.

೧೯೧೯ನೆಯ ಇಸವಿಯ ಸುಧಾರಣೆಗಳ ಪರಿಣಾಮವಾಗಿ ಕೇಂದ್ರ ಮತ್ತು ಪ್ರಾಂತ ಸರಕಾರಗಳಿಗೆ ಹಣಕಾಸಿನ ವಿಷಯದಲ್ಲಿ, ಒಂದು ಖಚಿತವಾದ ವ್ಯವಸ್ಥೆ ಏರ್ಪಟ್ಟಿತು. ಕೆಲವು ಆದಾಯದ ಬಾಬುಗಳಿಂದ ಬಂದ ಹುಟ್ಟುವಳಿಯನ್ನು ಕೇಂದ್ರ ಮತ್ತು ಪ್ರಾಂತ ಸರಕಾರಗಳು ಹಂಚಿಕೊಳ್ಳುತ್ತಿದ್ದ ಪದ್ಧತಿ ಹೋಗಿ ಹೊಸ ವಿಭಾಗ ಏರ್ಪಟ್ಟಿತು. ಇದರಿಂದ—

1. ಅಫೀಮು, ಉಪ್ಪು, ಸುಂಕ, ಆದಾಯ ತೆರಿಗೆ, ರೈಲ್ವೆ, ಅಂಚೆ ಮತ್ತು ತಂತಿ, ಸೈನ್ಯ, ಈ ಬಾಬುಗಳಿಂದ ಬರುವ ಆದಾಯ ಕೇಂದ್ರ ಸರಕಾರದ್ದೆಂದೂ,

2. ಭೂಕಂದಾಯ, ನೀರಾವರಿ, ಸ್ಟಾಂಪು, ರಜಿಸ್ಟ್ರೇಷನ್, ಅಬ್ಕಾರಿ, ಅರಣ್ಯ, ಈ ಬಾಬುಗಳಿಂದ ಬರುವ ಆದಾಯ, ಪ್ರಾಂತ ಸರಕಾರಗಳಿಗೆ ಸೇರಿದುವೆಂದೂ, ತೀರ್ಮಾನವಾಯಿತು.

ಹಾಗೆಯೇ ರಕ್ಷಣೆ, ಇಂಡಿಯಾ ದೇಶದ ಆಡಳಿತ, ರೈಲ್ವೆ ಮೊದಲಾದುವುಗಳ ವೆಚ್ಚ, ಕೇಂದ್ರ ಸರಕಾರಕ್ಕೂ, ವಿದ್ಯಾಭ್ಯಾಸ, ವೈದ್ಯ, ಪೋಲಿಸ್, ನ್ಯಾಯ ಮುಂತಾದುವುಗಳ ವೆಚ್ಚ ಪ್ರಾಂತ ಸರಕಾರಗಳಿಗೂ ಸೇರಿದವುಗಳೆಂದು ನಿಷ್ಕರ್ಷೆಯಾಯಿತು.

ಈ ರೀತಿ ಕೆಲವು ಆದಾಯದ ಬಾಬುಗಳನ್ನು ಪೂರ್ಣವಾಗಿ ಪ್ರಾಂತ ಸರಕಾರಗಳಿಗೇ ಬಿಟ್ಟುಕೊಟ್ಟಿದ್ದರಿಂದ, ಕೇಂದ್ರ ಸರಕಾರದ ಆದಾಯ ವೆಚ್ಚಕ್ಕಿಂತ ಕಡಮೆಯಾಯಿತು. ಈ ವೆಚ್ಚದ ಹಣವನ್ನು ಸರಿಪಡಿಸಿಕೊಳ್ಳಲು ಸಲಹೆ ಕೊಡುವುದಕ್ಕಾಗಿ ಒಂದು ಸಮಿತಿ ಏರ್ಪಟ್ಟಿತು. ಈ ಸಮಿತಿ (Meston Committee) ವೆಚ್ಚದ ಹಣವನ್ನು ಸರಿಪಡಿಸಲು, ಪ್ರಾಂತ ಸರಕಾರಗಳು ಕೇಂದ್ರ ಸರಕಾರಕ್ಕೆ ಮೊದಲು ಸಹಾಯ ದ್ರವ್ಯಗಳನ್ನು ಸಲ್ಲಿಸಬೇಕೆಂದು ಸಲಹೆಕೊಟ್ಟಿತು. ಆಗ ಪ್ರಾಂತ ಸರಕಾರಗಳು ತಮ್ಮ ವೆಚ್ಚ ಮುಗಿದ ಮೇಲೆ ಉಳಿದ ಹಣವನ್ನು ಕೇಂದ್ರ ಸರಕಾರಕ್ಕೆ ಸಹಾಯ ರೂಪವಾಗಿ ಕೊಡಬೇಕು, ಅವರು ಕೊಡುವ ಸಹಾಯ ದ್ರವ್ಯದ ಪ್ರಮಾಣವನ್ನು ಅನುಸರಿಸಿ ಮುಂದೆ ಆ ಸರಕಾರಗಳು ಎಷ್ಟು ಮಾತ್ರ ಕೇಂದ್ರ ಸರಕಾರಕ್ಕೆ ಸಹಾಯವನ್ನೆಸಗಬಲ್ಲವು, ಎಂಬುದನ್ನು ನಿರ್ಧರಿಸ

ಬೇಕು ಎಂದು ಆ ಸಮಿತಿಯವರು ಸಲಹೆಯಿತ್ತರು. ಈ ಸಲಹೆಗಳಿಗೆ ಜನರ ಬೆಂಬಲ ದೊರೆಯಲಿಲ್ಲ. ಹೀಗೆ ಪ್ರಾಂತ ಸರಕಾರಗಳು, ಕೇಂದ್ರ ಸರಕಾರಕ್ಕೆ ಸಹಾಯ ದ್ರವ್ಯ ಸಲ್ಲಿಸುವ ಪದ್ಧತಿಯನ್ನು ನಿಲ್ಲಿಸಬೇಕೆಂದು ಜನರು ಒತ್ತಾಯ ಮಾಡಿದರು. ಆ ಸಮಯಕ್ಕೆ ಸರಿಯಾಗಿ ಕೇಂದ್ರ ಸರಕಾರದ ಹಣಕಾಸಿನ ಸ್ಥಿತಿಯು ಸ್ವಲ್ಪ ಉತ್ತಮಗೊಂಡಿತ್ತು. ಈ ಸಹಾಯ ದ್ರವ್ಯದ ಮೊತ್ತ ೧೯೨೫-೨೬ ರಿಂದ ಕಡಿಮೆಯಾಗುತ್ತ ಬಂದು, ೧೯೨೮-೨೯ರಲ್ಲಿ ಪ್ರಾಂತ ಸರಕಾರಗಳು ಕೇಂದ್ರ ಸರಕಾರಕ್ಕೆ ಸಹಾಯ ದ್ರವ್ಯ ಸಲ್ಲಿಸುವ ಪದ್ಧತಿ ಕೊನೆಗಂಡಿತು.

ಬೊಂಬಾಯಿ ಮತ್ತು ಬಂಗಾಳಾ ಪ್ರಾಂತಗಳಲ್ಲಿ ಅನೇಕ ಕೈಗಾರಿಕೆಗಳು ಆರಂಭವಾಗಿದ್ದುವು. ಅಲ್ಲಿಯ ಜನರು ವ್ಯಾಪಾರೋದ್ಯಮಗಳನ್ನು ಕೈಗೊಂಡಿದ್ದರು. ವ್ಯವಸಾಯಕ್ಕಿಂತಲೂ ಕೈಗಾರಿಕೆ ಮತ್ತು ವ್ಯಾಪಾರಗಳಿಗೇ ಹೆಚ್ಚು ಪ್ರಾಮುಖ್ಯ ವಿದ್ದುದರಿಂದ ಅಲ್ಲಿಯ ಸರಕಾರಗಳ ಆದಾಯ ಕಡಿಮೆಯಾಗುತ್ತ ಬಂತು. ಆದಾಯ ತೆರಿಗೆ, ಸುಂಕ ಮೊದಲಾದ ಬಾಬುಗಳ ಹುಟ್ಟುವಳಿ ಕೇಂದ್ರ ಸರಕಾರಕ್ಕೆ ಹೋಗು ತ್ತಿದ್ದುದರಿಂದ, ಕೈಗಾರಿಕೆ ಮತ್ತು ವ್ಯಾಪಾರ ಪ್ರಧಾನವಾಗುಳ್ಳ ಪ್ರಾಂತಗಳ ಆದಾಯ ಕಡಮೆಯಾಗಲು ಕಾರಣವಾಯಿತು. ಆ ಪ್ರಾಂತಗಳ ಸರಕಾರಗಳಿಗೆ, ಕ್ಷಣೇಕ್ಷಣೇ ವಿಸ್ತಾರವಾಗುತ್ತಿರುವ ಕಾರ್ಯಗಳಿಗಾಗಿ ವೆಚ್ಚಮಾಡಲು ಅವಕಾಶವಿಲ್ಲ ದಂತಾಯಿತು. ಇವು ನಿರಂತರವಾಗಿ ಮಾಡಿದ ಪ್ರತಿಭಟನೆಯ ಪರಿಣಾಮವಾಗಿ ಆದಾಯದ ತೆರಿಗೆಯಲ್ಲಿನ ಹುಟ್ಟುವಳಿಯ ಅಲ್ಪ ಭಾಗವನ್ನು ಕೇಂದ್ರ ಸರಕಾರವು ಆ ಪ್ರಾಂತ ಸರಕಾರಗಳಿಗೆ ಕೊಡಲು ಒಪ್ಪಿಕೊಂಡಿತು.

ಈ ಬದಲಾವಣೆಗಳ ಪರಿಣಾಮವಾಗಿ ೧೯೨೧ ರಿಂದ ೧೯೩೩ರ ವರೆಗಿನ ಹನ್ನೆರಡು ವರ್ಷಗಳಲ್ಲಿ ಪ್ರಾಂತಗಳ ಆದಾಯ ಸುಮಾರು ೨೩.೮ ಕೋಟಿ ರೂಪಾಯಿ ಗಳಷ್ಟು ಕಡಮೆಯಾಯಿತು. ಇದೇ ಕಾಲದಲ್ಲಿ ಕೇಂದ್ರ ಸರಕಾರಕ್ಕೆ ಖರ್ಚು ಕಳೆದು ೧೦ ಕೋಟಿ ರೂಪಾಯಿಗಳಷ್ಟು ಉಳಿತಾಯವಾಯಿತು. ಪ್ರಾಂತಗಳ ಹಣಕಾಸಿನ ಸ್ಥಿತಿ ಹೀಗಾಗಿ, ಆ ಸರಕಾರಗಳು ದೇಶದ ಆಡಳಿತವನ್ನು ನಿರ್ವಹಿಸುವ ಬಾಬುಗಳಿಗೆ ಬೇಕಾಗುವ ವೆಚ್ಚವನ್ನು ಸರಿಯಾಗಿ ಒದಗಿಸಬೇಕಾಗಿಬಂದು, ಹಣ ಸಾಲದೆ ನಿರೀಕ್ಷಿಸಲ್ಪಟ್ಟ ದೇಶಾಭ್ಯುದಯ ಕಾರ್ಯಗಳನ್ನು ಪೂರ್ಣವಾಗಿ ನೆರವೇರಿಸಲು ಅವಕಾಶವಿಲ್ಲದೆ ಹೋಯಿತು.

೧೯೩೫ನೇ ಇಸವಿಯ ಸುಧಾರಣೆಗಳ ಪರಿಣಾಮವಾಗಿ ಕೇಂದ್ರ ಮತ್ತು ಪ್ರಾಂತ ಸರಕಾರಗಳ ಸ್ವರೂಪ ಮತ್ತು ಅಧಿಕಾರವು ಬದಲಾವಣೆಗೊಂಡಂತೆಯೇ ಅವುಗಳಿಗೆ ಆಯವ್ಯಯ ಪರಿಸ್ಥಿತಿಯಲ್ಲಿ, ಇರುವ ಅನ್ಯೋನ್ಯ ಸಂಬಂಧವೂ ವ್ಯತ್ಯಾಸ ಹೊಂದಿದೆ. ಈ ಸುಧಾರಣೆಗಳ ಪರಿಣಾಮವಾಗಿ ಕೇಂದ್ರ ಸರಕಾರಕ್ಕೂ ಪ್ರಾಂತ ಸರಕಾರಗಳಿಗೂ, ಅಥವಾ ಮುಂದೆ ಬರಲಿರುವ ಸಂಯುಕ್ತ ಸರಕಾರಕ್ಕೂ, ಅದರ ಅಂಗ ಸರಕಾರಗಳಿಗೂ, ಇರುವ ಹಣಕಾಸಿನ ಸಂಬಂಧಗಳನ್ನು ಮತ್ತು ಸಮಸ್ಯೆಗಳನ್ನು ಪರಿಶೀಲಿಸಿ ವರದಿಮಾಡಲು ಅನೇಕ ಕಮಿಟಿಗಳೂ, ಕಮಿಷನ್ನುಗಳೂ ಏರ್ಪಾಟಾಗಿ ಸಲಹೆಗಳನ್ನು ಕೊಟ್ಟಿವೆ. ಇವುಗಳಲ್ಲಿ ಸೈಮನ್ ಕಮಿಷನ್ನಿಗೆ ಸಂಬಂಧಿ

ಸಿದ ಲೇಯ್‌ಟನ್ (Layton) ರಿಪೋರ್ಟು, ಫೆಡರಲ್ ಫೈನಾನ್ಸ್ ಸಬ್ ಕಮಿಟಿಯ ವರದಿ ಮತ್ತು ಪೆರ್ಸಿ ಕಮಿಟಿಯ ವರದಿಗಳು ಮುಖ್ಯವಾದುವುಗಳು. ಈ ವರದಿಗಳಲ್ಲಿ ಅಡಕವಾಗಿರುವ ಸಲಹೆಗಳಲ್ಲಿ ಬಹುಭಾಗವು ೧೯೩೫ನೆಯ ಇಸವಿಯ ಇಂಡಿಯಾ ಮಸೂದೆಯಲ್ಲಿ ಗರ್ಭಿತವಾಗಿದೆ.

ಮಾಂಟೆಗ್ಯೂ ಛೆಲ್ಮ್ಸಫರ್ಡ್ ಸುಧಾರಣೆಗಳಿಂದ ಹಣಕಾಸಿನ ವಿಷಯದಲ್ಲಿ ಕೆಲವು ಪ್ರಾಂತಗಳಿಗೆ ಒದಗಿದ್ದ ಕುಂದು ಕೊರತೆಗಳೂ, ಕೇಂದ್ರ ಮತ್ತು ಪ್ರಾಂತ ಸರಕಾರಗಳಿಗಿದ್ದ ಆಯವ್ಯಯ ಸಂಬಂಧದಲ್ಲಿನ ನ್ಯೂನತೆಗಳೂ, ೧೯೩೫ರಲ್ಲಿ ದೊರೆತ ಹೊಸ ರಾಜ್ಯಾಂಗ ವ್ಯವಸ್ಥೆಯಿಂದ ಸ್ವಲ್ಪಮಟ್ಟಿಗೆ ನಿವಾರಣೆಯಾಯಿತೆನ್ನಬಹುದು. ಈ ವ್ಯವಸ್ಥೆಯಿಂದ ಕೇಂದ್ರ ಮತ್ತು ಪ್ರಾಂತ ಸರಕಾರಗಳ ವೆಚ್ಚ ಹೆಚ್ಚಿತು. ಕೇಂದ್ರ ಮತ್ತು ಪ್ರಾಂತ ಸರಕಾರಗಳ ಕರ್ತವ್ಯಗಳನ್ನು ನಿರ್ವಹಿಸಲು ಬೇಕಾದ ವೆಚ್ಚಕ್ಕೆ ತಕ್ಕಂತೆ, ಆದಾಯದ ಬಾಬುಗಳನ್ನು ಈ ಕೆಳಗೆ ಕಂಡಂತೆ ಪುನರ್ವಿಭಾಗ ಮಾಡಲಾಯಿತು.

1. ಆಮದು ಸುಂಕ—ಹೊರ ಸುಂಕ, (ವಿದೇಶ ಪದಾರ್ಥಗಳ ಮೇಲಿನ ತೆರಿಗೆ) ರೈಲ್ವೆ, ಅಂಚೆ ಮತ್ತು ತಂತಿ, ಮೊದಲಾದ ವ್ಯಾಪಾರೋದ್ಯಮಗಳಿಂದ ಬರುವ ಲಾಭ, ಕಂಪೆನಿಗಳ ಮೇಲಿನ ತೆರಿಗೆ (Corporation Tax), ಟಂಕಸಾಲೆ ಮತ್ತು ರಿಸರ್ವ್ ಬ್ಯಾಂಕ್‌ಗಳಿಂದ ಬರುವ ಆದಾಯ, ಇವು ಪೂರ್ತ ಕೇಂದ್ರ ಸರಕಾರಕ್ಕೇ ಸೇರತಕ್ಕ ಆದಾಯದ ಬಾಬುಗಳು.

2. ಭೂಕಂದಾಯ, ಅಬ್ಕಾರಿ, ವ್ಯಾಪಾರದ ದಸ್ತಾವೇಜುಗಳಿಗೆ ಸಂಬಂಧ ಪಡದಿರುವ ಸ್ಟ್ಯಾಂಪು, ಅರಣ್ಯ, ಇತರ ವ್ಯಾಪಾರೋದ್ಯಮಗಳಿಂದ ಬರುವ ಲಾಭ, ವ್ಯವಸಾಯದಿಂದ ಉತ್ಪನ್ನವಾಗುವ ಆದಾಯದ ಮೇಲಿನ ತೆರಿಗೆ, ಇವು ಪೂರ್ತ ಪ್ರಾಂತ ಸರಕಾರಗಳಿಗೇ ಸೇರತಕ್ಕ ಆದಾಯ ಬಾಬುಗಳು.

3. ಹುಂಡಿಗಳು, ಚೆಕ್ಕು, ಇವೇ ಮೊದಲಾದ, ದಸ್ತಾವೇಜಿನ ವ್ಯಾಪಾರ ಸ್ಟ್ಯಾಂಪು, ಭೂಸ್ಥಿತಿಯನ್ನುಳಿದು ಇತರ ಆಸ್ತಿಗಳ ಮೇಲೆ ಪಕ್ಕಿನ ತೆರಿಗೆ, ಒಳಸುಂಕ, ಜಾತ್ರೆಮತ್ತು ಪರಿಷೆ ಮೇಲಿನ ತೆರಿಗೆಗಳು,—ಇವುಗಳು ಸಂಯುಕ್ತ ಸರಕಾರದ ಅಧಿಕಾರಕ್ಕೆ ಒಳಪಟ್ಟಿವೆ. ಈ ಸರಕಾರವೇ ಇವುಗಳನ್ನು ವಸೂಲ್ಮಾಡಿ ಖರ್ಚು ಕಳೆದು ಉಳಿದ ಹಣವನ್ನು ಆ ತೆರಿಗೆಗಳನ್ನು ವಿಧಿಸಿರುವ ಪ್ರಾಂತಗಳಿಗೆ ಸಂದಾಯ ಮಾಡತಕ್ಕದ್ದು.

4. ರಫ್ತು ಸುಂಕ, ಉಪ್ಪಿನಮೇಲಿನ ತೆರಿಗೆ, ಅಬ್ಕಾರಿ ಸುಂಕ, ಇವುಗಳ ಮೇಲಿನ ಅಧಿಕಾರ ಸಂಯುಕ್ತ ಸರಕಾರದ್ದು. ಆದರೆ ಇದರಿಂದ ಬರುವ ಆದಾಯವನ್ನು ಪೂರ್ತ ಅಥವಾ ಒಂದು ನಿರ್ದಿಷ್ಟವಾದ ಭಾಗದಷ್ಟು ಹಣವನ್ನು ಅಂಗ ಸರಕಾರಗಳಿಗೆ ಸಂಯುಕ್ತ ಸರಕಾರ ಕೊಡಬಹುದು.

5. ಸುಂಕದಿಂದ ಉತ್ಪತ್ತಿಯಾಗುವ ಹುಟ್ಟುವಳಿಯನ್ನು ಕೇಂದ್ರ ಮತ್ತು ಅಂಗ ಸರಕಾರಗಳು ಪಡೆಯಲು ಆಗಿರುವ ವಿಭಜನೆಯಂತೆ, ಆದಾಯ ತೆರಿಗೆಯ ಹಂಚಿಕೆಯ ವಿಷಯದಲ್ಲಿಯೂ ಕೆಲವು ವಿಶೇಷ ನಿಯಮಗಳು ಏರ್ಪಟ್ಟಿವು. ಇದರಿಂದ

(i) ಚೀಫ್ ಕಮಿಷನರ ಅಧಿಕಾರಕ್ಕೆ ಒಳಪಟ್ಟ ಪ್ರಾಂತಗಳಿಗೆ ಸೇರಿದ ಆದಾಯದಮೇಲಿನ ತೆರಿಗೆಯ ಹುಟ್ಟುವಳಿ ಪೂರ್ತಿ ಸಂಯುಕ್ತ ಸರಕಾರಕ್ಕೆ ಸೇರುತ್ತದೆ.

(ii) ಆದಾಯದ ತೆರಿಗೆ ಜಾರಿಯಲ್ಲಿರುವ ಇತರ ಪ್ರಾಂತಗಳು ಮತ್ತು ಸಂಸ್ಥಾನಗಳಿಗೆ, ಈ ಬಾಬಿನ ಹುಟ್ಟುವಳಿಯಲ್ಲಿ ಶೇ. ೫೦ ರಿಂದ ೭೫ರವರೆಗಿನ ಭಾಗವನ್ನು ಕೇಂದ್ರ ಸರಕಾರ ಕೊಡಲು ಅವಕಾಶವಿದೆ. ಆದರೆ ಸಂಯುಕ್ತ ಶಾಸನ ಸಭೆ ಯಾವ ಸಮಯದಲ್ಲಾದರೂ, ಈ ತೆರಿಗೆಯನ್ನು ಹೆಚ್ಚಿಸುವುದಕ್ಕೂ, ಪ್ರಾಂತ ಮತ್ತು ಸಂಸ್ಥಾನಗಳಿಗೆ ಸಲ್ಲಿಸಬೇಕಾದ ಹಣವನ್ನು ನಿಲ್ಲಿಸುವುದಕ್ಕೂ ಅಧಿಕಾರಪಡೆದಿದೆ.

ಹೊಸ ಸುಧಾರಣೆಗಳಿಂದ ಕೇಂದ್ರ ಮತ್ತು ಪ್ರಾಂತಸರಕಾರಗಳ ಆಯವ್ಯಯ ಸ್ಥಿತಿಯಲ್ಲಿ ಒದಗಬಹುದಾದ ವಿಚಾರಗಳನ್ನು ವಿಮರ್ಶೆಮಾಡಿ ಪ್ರಾಂತ ಸರಕಾರಗಳು ಯಾವರೀತಿ ಆಯವ್ಯಯ ಸ್ವಾತಂತ್ರ್ಯವನ್ನು ಪಡೆಯ ಬಹುದು, ಇದರಿಂದ, ಪ್ರಾಂತ ಮತ್ತು ಕೇಂದ್ರ ಸರಕಾರಗಳಿಗೆ ಇರಬೇಕಾದ ಹಣಕಾಸಿನ ಸಂಬಂಧ, ಹೇಗಿರಬೇಕು, ಎಂಬುದನ್ನು ತಿಳಿಸಲು ೧೯೩೫ನೆಯ ಡಿಶಂಬರಿನಲ್ಲಿ ಸರ್ ಓಟೋ ನೇಮಿಯರ್ ಎಂಬ ಬ್ರಿಟಿಷ್ ಖಜಾನೆಯ ಅಧಿಕಾರಿ ಯೊಬ್ಬರನ್ನು ನೇಮಿಸಿದರು. ಅವರು ಕೇಂದ್ರ ಮತ್ತು ಪ್ರಾಂತ ಸರಕಾರಗಳಿಗೆ ಹಣಕಾಸಿನ ವಿಷಯದಲ್ಲಿ, ಅದರಲ್ಲೂ ಆದಾಯ ತೆರಿಗೆಯ ವಿಷಯದಲ್ಲಿ ಇರಬೇಕಾದ ಅನ್ಯೋನ್ಯ ಸಂಬಂಧವನ್ನು ಕುರಿತು ವಿಶದವಾಗಿ ಒಂದು ವರದಿಯನ್ನು ಒಪ್ಪಿಸಿದರು. ಸಾರ್ವಭೌಮ ಸರಕಾರದವರು ಅದನ್ನೊಪ್ಪಿ ೧೯೩೭ನೆಯ ಇಸ್ವಿ ಏಪ್ರಿಲ್ ಒಂದನೆಯ ತಾರೀಖಿನಿಂದ ಪ್ರಾಂತಗಳು ಸ್ವತಂತ್ರವಾಗಿ ಆಡಳಿತವನ್ನು ನಡೆಸಲು ಅವಕಾಶ ದೊರೆಯಿತು. ಕೇಂದ್ರಸರ್ಕಾರವು, ಆದಾಯ ಸಾಲದ ಪ್ರಾಂತ ಗಳಿಗೆ ಉದ್ಧಾರ ದ್ರವ್ಯ ಒದಗಿಸುವುದರಿಂದಲೂ, ೧೯೩೬ನೆಯ ಇಸ್ವಿ ಏಪ್ರಿಲ್ ಒಂದನೆ ತಾರೀಖಿಗಿಂತ ಮೊದಲು ತೆಗೆದುಕೊಂಡಿದ್ದ ಸಾಲಗಳನ್ನು ವಜಾಮಾಡು ವುದರಿಂದಲೂ, ಸಣಬು ಬೆಳೆಯುವ ಬಂಗಾಳ, ಬಿಹಾರ ಮತ್ತು ಅಸ್ಸಾಂ ಪ್ರಾಂತ ಗಳಿಗೆ ಶೇ. ಹನ್ನೆರಡುವರೆಯಂತೆ ಸಣಬಿನ ತೆರಿಗೆಯಲ್ಲಿನ ದಾಮಾಷಾವೊಬಲಗನ್ನು ಪಾವತಿ ಮಾಡುವುದರಿಂದಲೂ, ಸಹಾಯ ಮಾಡಬಹುದೆಂದು ಸಲಹೆಕೊಟ್ಟರು.

## ಪ್ರಾಂತಗಳಿಗೆ ನಿರ್ದೇಶವಾದ ಆದಾಯ ತೆರಿಗೆ

ಸರ್ ಓಟೋ ನೇಮಿಯರ್ ಅವರು ಶಿಫಾರ್ಸುಮಾಡಿದ ಅಂಶಗಳಲ್ಲಿ ಆದಾಯ ತೆರಿಗೆಯ ವಿಷಯ ಬಹು ಮುಖ್ಯವಾದುದು. ಆಗಿನ ಅವರ ವರದಿಯ ಪ್ರಕಾರ ನಮ್ಮ ದೇಶದಲ್ಲಿ ಆದಾಯ ತೆರಿಗೆಯಿಂದ ಹನ್ನೆರಡು ಕೋಟಿ ರೂಪಾಯಿಗಳು ಉತ್ಪತ್ತಿ ಯಾಗುತ್ತಿತ್ತು. ಅದರಲ್ಲಿ ಅರ್ಧಭಾಗ ಎಂದರೆ ಆರು ಕೋಟಿ ರೂಪಾಯಿಗಳಷ್ಟು ಪ್ರಾಂತಗಳಿಗೆ ಸೇರಬೇಕು. ಆದರೆ ಹಣಕಾಸಿನ ಸ್ಥಿತಿಯನ್ನು ಸರಿಪಡಿಸಿ

ಕೊಳ್ಳುವುದಕ್ಕಾಗಿ, ಸಂಯುಕ್ತ ಸರಕಾರ ಸ್ಥಾಪಿತವಾದಾಗ ಮೊದಲನೆಯ ಐದು ವರ್ಷಗಳಲ್ಲಿ ಪ್ರಾಂತಗಳಿಗೆ ಸಲ್ಲಬೇಕಾದ ಆದಾಯ ತೆರಿಗೆಯಲ್ಲಿ ಅರ್ಧಭಾಗವನ್ನು ಕೇಂದ್ರ ಸರಕಾರವೇ ಉಪಯೋಗಿಸಿಕೊಳ್ಳಬಹುದೆಂದೂ, ಆ ಮೇಲೆ ಐದು ವರ್ಷಗಳ ಕಾಲದಲ್ಲಿ ಈ ಭಾಗವನ್ನು ಕ್ರಮಕ್ರಮವಾಗಿ ದಾಮಾಷಾ ಪ್ರಕಾರ ಪ್ರಾಂತಗಳಿಗೆ ಸಲ್ಲಿಸಬೇಕೆಂದೂ ಸಲಹೆ ಮಾಡಿದರು. ಈ ಆದಾಯ ತೆರಿಗೆಯ ಹುಟ್ಟುವಳಿ ಮತ್ತು ರೈಲ್ವೆ ಬಾಬಿನಿಂದ ಬರುವ ಲಾಭ ಎರಡೂ ಸೇರಿ ಕೇಂದ್ರ ಸರಕಾರಕ್ಕೆ ೧೨ ಕೋಟಿ ರೂಪಾಯಿ ಆದಾಯ ಬರುವವರೆಗೂ ಪ್ರಾಂತ ಸರಕಾರಗಳಿಗೆ ಆದಾಯತೆರಿಗೆಯಲ್ಲಿನ ಭಾಗವು ದೊರೆಯಲಾಗದೆಂದೂ ಅಭಿಪ್ರಾಯಪಟ್ಟರು.

ಪ್ರಾಂತಗಳಿಗೆ ಸಲ್ಲಬೇಕಾದ ಆದಾಯ ತೆರಿಗೆಯ ಪೂರ್ಣಭಾಗ ಅವುಗಳಿಗೆ ಎಷ್ಟು ವರ್ಷಗಳಲ್ಲಿ ಬರುತ್ತದೆಯೆಂಬುದನ್ನು ಹೇಳುವುದು ಸಾಧ್ಯವಾಗಲಿಲ್ಲ. ಪ್ರಾಂತ ಸ್ವಾತಂತ್ರ್ಯ ದೊರೆತ ಐದು ವರ್ಷಗಳಂತೂ, ಇದರಿಂದ ಎಳ್ಳಷ್ಟೂ ಆದಾಯ ಬರುವುದಿಲ್ಲ. ಹತ್ತು ವರಷಗಳ ಕೊನೆಯಲ್ಲಿ ತಮಗ ಬರಬೇಕಾದ ಅರ್ಧಭಾಗವು ಬರುತ್ತದೆಯೆಂಬುದೂ ಸಂದೇಹವಾದ ಅಂಶ. ಈ ರೀತಿ ಪ್ರಾಂತಗಳಿಗೆ ಆದಾಯ ತೆರಿಗೆಯಲ್ಲಿ ನಿಷ್ಕರ್ಷೆಯಾಗಿರುವ ಅರ್ಧಭಾಗ ಸಲ್ಲಬೇಕಾಗಿದ್ದರೆ, ಮೊದಲು ಕೇಂದ್ರಸರಕಾರಕ್ಕೆ ರೈಲ್ವೆಗಳಿಂದ ಬರುವ ಉತ್ಪತ್ತಿ ಹೆಚ್ಚಬೇಕು. ಅದರ ಜತೆಗೆ ಸೈನ್ಯದ ಖರ್ಚು ಏರದಿರಬೇಕು. ಪರಿಸ್ಥಿತಿ ಈ ಪ್ರಕಾರವಿದ್ದರೆ ಮಾತ್ರ ಪ್ರಾಂತ ಸರಕಾರಗಳಿಗೆ ಈ ಆದಾಯ ಬರುವುದು ಸಾಧ್ಯ. ಇದರ ಜತೆಗೆ ದೇಶವು ಯಾವ ಮುಗ್ಗಟ್ಟಿಗೂ ಸಿಕ್ಕದೆ ಆರ್ಥಿಕ ಪರಿಸ್ಥಿತಿ ಕುಗ್ಗದೆ ಇರಬೇಕಾದುದೂ ಒಂದು ಮುಖ್ಯ ಅಂಶ.

ಕೇಂದ್ರ ಮತ್ತು ಪ್ರಾಂತ ಸರಕಾರಗಳಿಗೆ ಹಣಕಾಸಿನ ವಿಷಯದಲ್ಲಿದ್ದ ಸಂಬಂಧದ ಕಟ್ಟು ಸಡಿಲವಾಗುತ್ತ ಬಂದು, ಮಾಂಟ್‌ಫರ್ಡ್ ಸುಧಾರಣೆಗಳ ಪರಿಣಾಮವಾಗಿ ಈ ಸರಕಾರಗಳ ದ್ರವ್ಯಸಾಧನ ಸಂಪದ್ವಿಭಜನೆಯಾಯಿತು. ಈ ಕಾಲದಲ್ಲಿ ಪ್ರಾಂತಗಳ ಒಟ್ಟು ಹುಟ್ಟುವಳಿ ಸುಮಾರು ಎಪ್ಪತ್ತು ಕೋಟಿ ರೂಪಾಯಿಗಳಷ್ಟಿತ್ತು. ೧೯೩೫ನೆಯ ಇಸ್ವಿಯ ಸುಧಾರಣೆಗಳು ಜಾರಿಗೆ ಬಂದು ಪ್ರಾಂತಗಳಿಗೆ ಪೂರ್ಣ ಸ್ವಾತಂತ್ರ್ಯ ದೊರೆವ ವೇಳೆಗೆ ಈ ಒಟ್ಟು ಹುಟ್ಟುವಳಿ ಎಂಭತ್ತೆರಡು ಕೋಟಿಗೆ ಏರಿತು. ಹೊಸ ಸುಧಾರಣೆಗಳ ಪರಿಣಾಮವಾಗಿ, ಕೇವಲ ಮೂರು ವರ್ಷಗಳಲ್ಲಿ ಪ್ರಾಂತಗಳ ಒಟ್ಟು ಹುಟ್ಟುವಳಿ ಎಂಭತ್ತೊಂಭತ್ತು ಕೋಟಿಯಾಯಿತು. ಇದರಿಂದ ಪ್ರಾಂತಗಳು ಸಮಾಜಸೇವೆ, ಮತ್ತು ಸಂಪದಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಗಮನ ಕೊಡಲು ಸಾಧ್ಯವಾಯಿತು.

ಇಷ್ಟಾದರೂ, ಕೇಂದ್ರ ಮತ್ತು ಪ್ರಾಂತ ಸರಕಾರಗಳಿಗೆ ವಿಧಾಯಕ ಮಾಡಿರುವ ಹಣಕಾಸು, ಆ ಸರಕಾರಗಳು ನಿರ್ವಹಿಸಬೇಕಾದ ಕೆಲಸಗಳಿಗೆಲ್ಲಾ ಸಾಕಾಗುವುದೆಂಬ ಭರವಸೆಯಿಲ್ಲ. ಆದುದರಿಂದ ಈ ಹಣಕಾಸಿನ ವಿಚಾರದಲ್ಲಿ ಈ ಸರಕಾರಗಳು ತಮ್ಮ ಆದಾಯವೆಚ್ಚಗಳ ಕ್ಷೇತ್ರಗಳನ್ನು ಆಗಾಗಿನ ಸ್ಥಿತಿಗತಿ

ಗಳಿಗೆ ತಕ್ಕಂತೆ ಏರಿಸಿ, ಕುಗ್ಗಿಸಿ, ಆದಾಯವೆಚ್ಚಗಳ ಏರಿಳಿತಗಳನ್ನು ಹೊಂದಿಸಿಕೊಂಡು ಅನ್ಯೋನ್ಯವಾಗಿ ವರ್ತಿಸಬೇಕೇ ಹೊರತು ಬೇರೆ ಮಾರ್ಗವಿಲ್ಲ. ಆದಾಯ ವೆಚ್ಚಗಳನ್ನು ಆಗಾಗ ಬಂದೊದಗುವ ಕುಂದು ಕೊರತೆಗಳನ್ನೂ ಅಸಮತೆಯನ್ನೂ, ಸಂಯುಕ್ತ ಸರಕಾರದ ಅಂಗಗಳಾದ ಪ್ರಾಂತ ಸರಕಾರಗಳಿಗೆ ವಹಿಸಿರುವ ತೆರಿಗೆಯನ್ನು ಹಂಚುವುದರಿಂದಾಗಲಿ, ಸಂಯುಕ್ತ ಸರಕಾರಕ್ಕೆ ತೆರಬೇಕಾದ ತೆರಿಗೆಯ ಜತೆಗೆ ಪ್ರಾಂತ ಸರಕಾರಗಳು ಹೆಚ್ಚು ತೆರಿಗೆಯನ್ನು ವಿಧಿಸುವುದರಿಂದಾಗಲಿ, ಪ್ರಾಂತ ಸರಕಾರಗಳ ತೆರಿಗೆಯ ಜತೆಗೆ ಸಂಯುಕ್ತ ಸರಕಾರ ಹೆಚ್ಚು ತೆರಿಗೆಯನ್ನು ವಿಧಿಸುವುದರಿಂದಾಗಲಿ, ಸಂಯುಕ್ತ ಸರಕಾರಕ್ಕೆ ಬರುವ ಪ್ರೋಗದಿಯ ಹಣವನ್ನು ಪ್ರಾಂತಸರಕಾರಗಳ ಖರ್ಚಿಗೆ ಕೊಡುವುದರಿಂದಾಗಲಿ, ಪ್ರಾಂತ ಸರಕಾರಗಳಲ್ಲಿ ಉಳಿಯುವ ಹಣವನ್ನು ಸಂಯುಕ್ತ ಸರಕಾರಕ್ಕೆ ಕೊಡುವುದರಿಂದಾಗಲಿ, ತೊಲಗಿಸಿ, ಈ ಎರಡು ಸರಕಾರಗಳೂ ದೇಶದ ಹಿತವನ್ನು ಕಾಪಾಡಲು ಶಕ್ತಿ ಪಡೆಯುವಂತೆ ಮಾಡಬೇಕು.

---

# ಪ್ರಕರಣ ೨೧

## ಇಂಡಿಯಾ ಸರಕಾರದ ಸಾಲ

ಇಂಡಿಯಾ ಸರಕಾರದ ಸಾಲ ಆರಂಭವಾದದ್ದು ಈಸ್ಟ್ ಇಂಡಿಯಾ ಕಂಪೆನಿಯ ಕಾಲದಲ್ಲಿ. ಕಂಪೆನಿಯ ಆಡಳಿತದ ಖರ್ಚಿಗೆ ಹಣಸಾಲದೆ ಹೋದಾಗ, ಅವರು ಸಾಲ ಮಾಡಲು ಆರಂಭಿಸಿದರು. ಆಗಿನ ಕಾಲದಲ್ಲಿ ಪ್ರಬಲವಾಗಿದ್ದು, ದೇಶದ ಆಡಳಿತವನ್ನು ನಿರ್ವಹಿಸುತ್ತಿದ್ದ ಆ ಸಂಸ್ಥೆ ಸಾಲ ಮಾಡಲು ಆರಂಭಿಸಿತು. ಈ ಸಾಲ ೧೭೯೨ರಲ್ಲಿ ಸುಮಾರು ೭೦ ಲಕ್ಷ ಪೌಂಡುಗಳಷ್ಟಿತ್ತು. ಆಮೇಲೆ ಕೆಲವು ವರ್ಷಗಳಲ್ಲಿ ಕಂಪೆನಿಯವರು ಹೂಡಿದ ಯುದ್ಧ ಮೊದಲಾದುವುಗಳ ದೆಸೆಯಿಂದ ಸಿಪಾಯಿ ದಂಗೆಯ ವೇಳೆಗೆ ಎಂದರೆ ೧೮೫೭-೫೮ರ ವೇಳೆಗೆ ಈ ಸಾಲ ಆರುಕೋಟಿ ಪೌಂಡುಗಳಿಗೇರಿತು. ೧೮೫೭-೫೮ರಲ್ಲಿ ನಡೆದ ಸಿಪಾಯಿ ದಂಗೆಯ ಪರಿಣಾಮವಾಗಿ ದೇಶದಾದ್ಯಂತವೂ ಯುದ್ಧಗಳು ನಡೆದುವು. ಇದರಿಂದ ಸಾಲದ ಹೊರೆ ಬಲವಾಯಿತು. ಕಂಪೆನಿಯವರು ಈ ದಂಗೆಯನ್ನು ನಿಲ್ಲಿಸಲು ನಡಸಿದ ಕೆಲಸಗಳಿಗಾಗಿ ತಗಲಿದ ವೆಚ್ಚವೆನ್ನೆಲ್ಲಾ ಇಂಡಿಯಾ ದೇಶದ ಮೇಲೆಯೇ ಹೊರಿಸಿದರು. ಹೀಗಾಗಿ ೧೮೬೦ರ ವೇಳೆಗೆ ಸರಕಾರ ೧೦ ಕೋಟಿ ಪೌಂಡುಗಳಷ್ಟು ಸಾಲ ಮಾಡಿತ್ತು. ಇದಾದ ಕೆಲವು ಕಾಲದಲ್ಲಿಯೇ ಕಂಪೆನಿಯವರ ಆಡಳಿತ ತಪ್ಪಿ, ಇಂಡಿಯಾ ದೇಶದ ರಾಜ್ಯಭಾರವನ್ನು ಸಾಮ್ರಾಜ್ಯ ಸರಕಾರವೇ ಸ್ವತಃ ನಿರ್ವಹಿಸಲಾರಂಭಿಸಿತು. ಆ ರಾಜ್ಯಭಾರ ನಿರ್ವಾಹದ ಕೆಲಸದೊಂದಿಗೇ ಸಾಲದ ಹೊರೆಯೂ ಈ ಸರಕಾರದ ಬೆನ್ನುಹತ್ತಿತು. ರಾಜ್ಯನಿರ್ವಾಹಕ್ಕೆ ಹೇಗೆ ಸರಕಾರ ಜವಾಬ್ದಾರಿಯಾಯಿತೋ ಹಾಗೆಯೇ ಸಾಲದ ಹಣಕ್ಕೂ ಜವಾಬ್ದಾರಿಯನ್ನು ಹೊತ್ತಿತು. ಈಸ್ಟ್ ಇಂಡಿಯಾ ಕಂಪೆನಿಯಲ್ಲಿದ್ದ ಒಂದು ಕೋಟಿ ಇಪ್ಪತ್ತು ಲಕ್ಷ ಪೌಂಡುಗಳ ನಿಧಿಗಾಗಿ ಬಡ್ಡಿಯನ್ನು ಈ ಸರಕಾರ ೧೮೭೪ರ ವರೆಗೂ ತೆರಬೇಕಾಯಿತು.

ಹೀಗೆ ಈಸ್ಟ್ ಇಂಡಿಯಾ ಕಂಪೆನಿಯಿಂದ ಬಂದ ಸಾಲವನ್ನು ವಿಫಲ ಋಣವೆಂದು ನಾವು ಕರೆಯಬಹುದು. ೧೮೬೭ರಿಂದ ಈಚೆಗೆ ಇಂಡಿಯಾ ಸರಕಾರದ ರಾಜನೀತಿಯಲ್ಲಿ ಬದಲಾವಣೆಯಾಯಿತು. ರೈಲ್ವೆಗಳ ನಿರ್ಮಾಣ, ನೀರಾವರಿಯ ಕೆಲಸಗಳ ಯೋಜನೆ, ಇಂತಹ ರಚನಾತ್ಮಕವಾದ, ಫಲಪ್ರದವಾದ ಕಾರ್ಯಗಳನ್ನು ಸರಕಾರವು ಕೈಗೊಳ್ಳಬೇಕೆಂದು, ಸರಕಾರ ನಿರ್ಧರಿಸಿತು. ಇದಕ್ಕೆ ಸಾಕಾಗುವ ಹಣ ತಮ್ಮಲ್ಲಿ ಇಲ್ಲದೆ ಸರಕಾರ ಸಾಲ ಮಾಡಬೇಕಾದ ಸಂಭವವೊದಗಿತು. ಇಂತಹ ಜನೋಪಯೋಗ ಕಾರ್ಯಗಳಿಗಾಗಿ ಮಾಡಿದ

ಸಾಲವನ್ನು ಸಫಲಋಣವೆಂದು ಕರೆಯಬಹುದು. ೧೮೭೮ರಲ್ಲಿ ನೇಮಕವಾದ ವಿಶೇಷ ಸಮಿತಿಯೊಂದು ಆಯಾ ವರ್ಷದಲ್ಲಿ ಉಳಿಯುವ ಸರಕಾರದ ಹುಟ್ಟುವಳಿಯನ್ನು ಸಾಲತೀರಿಸುವುದಕ್ಕಾಗಿ ವೆಚ್ಚಮಾಡಕೂಡದೆಂದೂ, ಆ ಹಣವನ್ನು ಫಲಪ್ರದವಾದ ಸಾರ್ವಜನಿಕ ಕಾರ್ಯಗಳಿಗಾಗಿ ಉಪಯೋಗಿಸಬೇಕೆಂದು ಸಲಹೆ ಮಾಡಿತು. ಈ ಸಲಹೆಯ ಪ್ರಕಾರ, ಸರಕಾರದಲ್ಲಿ ಕೆಲವು ವೇಳೆ ಹಣವುಳಿದಿದ್ದರೂ, ಸಾಲ ಮಾತ್ರ ಕಡಮೆಯಾಗಲಿಲ್ಲ. ರಚನಾತ್ಮಕವಾದ ಕೆಲಸಗಳಿಗಾಗಿ, ಸರಕಾರ ಸಾಲ ಮಾಡಬೇಕಾಯಿತು. ಇದರಿಂದ ಸಾಲದ ಮೊತ್ತ ಹೆಚ್ಚಿತು. ೧೯೧೪ನೆ ಇಸ್ವಿಯ ವೇಳೆಗೆ ಇಂಡಿಯಾ ಸರಕಾರದ ಒಟ್ಟು ಸಾಲ ೫೫೧ ಕೋಟಿ ರೂಪಾಯಿಗಳಷ್ಟಿತ್ತು. ಇದಕ್ಕಾಗಿ ಪ್ರತಿ ವರುಷವೂ ಅವರು ತೆರಬೇಕಾಗಿದ್ದ ಬಡ್ಡಿ, ಸುಮಾರು ೧೫ ಕೋಟಿ ರೂಪಾಯಿಗಳು. ಈ ಒಟ್ಟು ಸಾಲದಲ್ಲಿ ಸುಮಾರು ೪೫೦ ಕೋಟಿ ರೂಪಾಯಿಗಳಷ್ಟು ಸಫಲಋಣ. ಮಹಾಯುದ್ಧದ ಕಾಲದಲ್ಲಿಯೂ, ಆಮೇಲೂ ಇಂಡಿಯಾ ಸರಕಾರ ಅಪಾರವಾದ ಹಣವನ್ನು ಸಾಲ ಮಾಡಿತು. ಆ ಕಾಲದಲ್ಲಿ ಇಂಡಿಯಾ ಸರಕಾರವು, ೧೫೦ ಕೋಟಿ ರೂಪಾಯಿಗಳಷ್ಟು ಯುದ್ಧಕ್ಕಾಗಿ ಸಹಾಯ ದ್ರವ್ಯವನ್ನೂ ಒದಗಿಸಿತು. ಹೊಸದೆಹಲಿಯ ನಿರ್ಮಾಣಕ್ಕಾಗಿ ೧೫ ಕೋಟಿ ರೂಪಾಯಿಗಳನ್ನು ವೆಚ್ಚಮಾಡಿತು. ಸರಕಾರದ ಆಯವ್ಯಯವನ್ನು ಸರಿತೂಗಿಸುವುದಕ್ಕಾಗಿ ಸುಮಾರು ೬೦ ಕೋಟಿ ರೂಪಾಯಿಗಳಷ್ಟು ಬೇಕಾಯಿತು. ಈ ಕಾರಣಗಳಿಂದ ಸರಕಾರ ೨೫೭ ಕೋಟಿ ರೂಪಾಯಿಗಳಷ್ಟು ಸಾಲಮಾಡಬೇಕಾಯಿತು. ೧೯೨೪ನೆಯ ಇಸ್ವಿಯ ವೇಳೆಗೆ ನಮ್ಮ ದೇಶದ ಸಾರ್ವಜನಿಕ ಸಾಲ ೬೧೯ ಕೋಟಿ ರೂಪಾಯಿಗಳಷ್ಟಾಯಿತು. ಇದರಲ್ಲಿ ೭೭೩ ಕೋಟಿ ರೂಪಾಯಿಗಳು ಮಾತ್ರ ಸಫಲ. ಎಂದರೆ, ೧೯೧೪ರಲ್ಲಿ ಶೇಕಡ ೮೮ರಷ್ಟಿದ್ದ ಸಫಲ ಋಣ ಶೇಕಡ ೭೩ಕ್ಕೆ ಇಳಿದು ವಿಫಲಋಣ ಹೆಚ್ಚಿತು. ಇದಿಷ್ಟೂ ಕೇಂದ್ರ ಸರಕಾರದ ಸಾಲ.

೧೯೨೦ಕ್ಕೆ ಮುಂಚೆ ಪ್ರಾಂತಸರಕಾರ ಕೇಂದ್ರ ಸರಕಾರದ ಕೇವಲ ಪ್ರತಿನಿಧಿಯಾಗಿ ವರ್ತಿಸುತ್ತಿದ್ದುದರಿಂದ ಯಾವ ಉದ್ದೇಶಕ್ಕಾಗಲಿ ಸಾಲ ಮಾಡಲು ಅಧಿಕಾರ ಪಡೆದಿರಲಿಲ್ಲ. ಬ್ರಿಟಿಷ್ ಇಂಡಿಯಾ ಸರಕಾರದ ಸಾಲದ ಆಡಳಿತ ಮತ್ತು ಹತೋಟಿ ಎಲ್ಲವೂ ಕೇಂದ್ರ ಸರಕಾರದ ಕೈಲಿತ್ತು. ಆದರೆ ಆಗಿಂದಾಗ್ಗೆ ಸ್ಥಳ ಸಂಸ್ಥೆಗಳ ಆವಶ್ಯಕತೆಗಾಗಿ, ಮತ್ತು ವ್ಯವಸಾಯಗಾರರಿಗೆ ಹಣ ಕಾಸನ್ನು ಕೆಲವು ಗೊತ್ತಾದ ಉದ್ದೇಶಗಳಿಗಾಗಿ ಒದಗಿಸುವುದಕ್ಕಾಗಿ ೧೮೮೮ರಲ್ಲಿ ಪ್ರತ್ಯೇಕವಾದ ಪ್ರಾಂತ ಸಾಲದ ಲೆಕ್ಕ ಏರ್ಪಾಡಾಗಿತ್ತು.

೧೯೨೧ರಲ್ಲಿ ಮಾಂಟಗ್ಯೂ ಛೆಮ್ಸ್‌ಫರ್ಡ್ ಸುಧಾರಣೆಗಳಿಂದ ಪ್ರಾಂತ ಸರಕಾರಗಳ ಹಣಕಾಸಿನ ವ್ಯವಹಾರದಲ್ಲಿ ವ್ಯತ್ಯಾಸವುಂಟಾಯಿತಷ್ಟೆ. ಪ್ರಾಂತಗಳಿಗೆ ದೊರೆತ ಒಂದು ವಿಧದ ಆಯವ್ಯಯ ಸ್ವಾತಂತ್ರ್ಯದಿಂದ ಪ್ರಾಂತ ಸರಕಾರಗಳಿಗೆ ಸಾಲ ಮಾಡುವ ಅಧಿಕಾರ ದೊರಕಿತು. ಕೇಂದ್ರ ಸರಕಾರಕ್ಕೂ ಪ್ರಾಂತ ಸರಕಾರಗಳಿಗೂ ಇಂಡಿಯಾ ದೇಶದ ಹಣದ ಪೇಟೆಯಲ್ಲಿ ಪೈಪೋಟಿಯುಂಟಾಗದಂತೆ ಎರಡು ಸರಕಾರಗಳ ಸಾಲಸೋಲದ ರೀತಿನೀತಿಗಳು ಹೊಂದಿಕೊಂಡು ಹೋಗುವು

ದಕ್ಕಾಗಿ ಕೆಲವು ನಿಯಮಗಳು ಆಚರಣೆಗೆ ಬಂದುವು. ೧೯೨೫ರಲ್ಲಿ "ಪ್ರಾಂತ ಸಾಲದ ನಿಧಿ" ಯೊಂದು ಏರ್ಪಾಡಾಯಿತು. ೧೯೨೦-೨೧ರ ಅಕ್ಟೋಬರುವರೆಗೆ ಕೇಂದ್ರ ಸರಕಾರ ಪ್ರಾಂತಗಳ ನೀರಾವರಿ ಕಾರ್ಯಗಳಿಗಾಗಿ ಕೊಟ್ಟಿದ್ದ ಮೂಲ ಧನ, ಪ್ರಾಂತ ಸಾಲದ ಲೆಕ್ಕದಲ್ಲಿ ಉಳಿದಿದ್ದ ಹಣ, ಇವುಗಳನ್ನು ಪ್ರಾಂತ ಸಾಲದ ನಿಧಿಗೆ ವರ್ಗಾಯಿಸಿದರು.

ಪ್ರಾಂತ ಸರಕಾರಗಳು ದೇಶಾಭ್ಯುದಯ ಕಾರ್ಯಗಳಿಗಾಗಿ ಹೆಚ್ಚು ಹಣ ವೆಚ್ಚ ಮಾಡುತ್ತ ಬಂದುದರಿಂದ, ಅವುಗಳ ಸಾಲ ಏರಿತು. ೧೯೨೧ರಲ್ಲಿದ್ದ ೮೦ ಕೋಟಿ ರೂಪಾಯಿಗಳ ಸಾಲ ೧೯೩೭ರ ವೇಳೆಗೆ ೧೮೩ ಕೋಟಿ ರೂಪಾಯಿ ಯಷ್ಟಾಯಿತು. ಹದಿನೈದು ವರ್ಷಗಳಲ್ಲಿ ೧೦೨ ಕೋಟಿ ರೂಪಾಯಿಗಳ ಸಾಲ ವಾಗಿ ಪ್ರಾಂತಗಳು ಪ್ರತಿ ವರ್ಷವೂ ಸರಾಸರಿ ಏಳು ಕೋಟಿ ರೂಪಾಯಿಗಳಷ್ಟು ಹಣವನ್ನು ದೇಶಾಭ್ಯುದಯ ಕಾರ್ಯಗಳಿಗಾಗಿ ವೆಚ್ಚ ಮಾಡಿದರೆನ್ನಬಹುದು. ಸಾಲದ ಫಲವಾಗಲಿ, ಸಾಲದ ಹೊರೆಯಾಗಲಿ ಎಲ್ಲ ಪ್ರಾಂತಗಳಿಗೂ ಸಮನಾಗಿ ಅನ್ವಯಿಸಲಿಲ್ಲ. ಸಿಂಧ' ಒಳಗೊಂಡಿದ್ದ ಬೊಂಬಾಯಿ ಪ್ರಾಂತವೊಂದೇ ಈ ಒಟ್ಟು ಮೊತ್ತದಲ್ಲಿ ಅರ್ಧದಷ್ಟು ಸಾಲ ಮಾಡಿತು. ಈ ಸಾಲದಲ್ಲಿನ ಬಹುಭಾಗವನ್ನು ಪ್ರಾಂತಗಳು ಕೇಂದ್ರ ಸರಕಾರದಿಂದಲೇ ತೆಗೆದುಕೊಂಡು ೧೯೩೭ರ ವೇಳೆಗೆ ಒಟ್ಟು ೧೭೯ ಕೋಟಿ ರೂಪಾಯಿಗಳನ್ನು ಕೇಂದ್ರ ಸರಕಾರಕ್ಕೆ ಸಲ್ಲಿಸಬೇಕಾ ಯಿತು.

೧೯೩೫ನೆಯ ಸುಧಾರಣೆಗಳ ಫಲವಾಗಿ ಕೇಂದ್ರ ಮತ್ತು ಪ್ರಾಂತ ಸರಕಾರ ಗಳಿಗೆ ಸಾಲದ ವ್ಯವಸ್ಥೆಯಲ್ಲಿದ್ದ ಕೆಲವು ನ್ಯೂನತೆಗಳು ಕೊನೆಗಂಡುವು. ಪ್ರಾಂತಗಳ ಸಾಲದ ಮೇಲೆ ಕೇಂದ್ರ ಸರಕಾರಕ್ಕಿದ್ದ ಅಧಿಕಾರ ಸಡಿಲವಾಗಿ, ಹಣದ ಪೇಟೆ ಯಲ್ಲಿ ಪ್ರಾಂತಗಳೇ ಹಣಸಂಗ್ರಹ ಮಾಡುವ ಪದ್ಧತಿ ಬೆಳೆಯುತ್ತ ಬಂತು. ಪ್ರಾಂತಗಳಲ್ಲಿ ನಿಲ್ಲುತ್ತಿದ್ದ ನಗದು ಸಿಲ್ಕಿನ ರೂಪದ ಸಾಲದ (Unfunded Debt) ಮೇಲೂ ಕೇಂದ್ರ ಸರಕಾರದ ಹತೋಟಿಯೇ ಇತ್ತು. ಈ ಹೊಸ ಸುಧಾರಣೆಗಳ ಪರಿಣಾಮವಾಗಿ, ಈ ನಗದು ಸಿಲ್ಕುಗಳ ಮೇಲಿನ ಅಧಿಕಾರ ಪೂರ್ತ ಪ್ರಾಂತಗಳಿಗೇ ಸೇರಿತು. ೧೯೩೭ರಲ್ಲಿಗೆ ಪ್ರಾಂತಗಳು ಹಣದ ಪೇಟೆ ಯಲ್ಲಿ ನೇರವಾಗಿ ಮಾಡಿದ್ದ ಸಾಲ ಸುಮಾರು ಎಂಟೂವರೆ ಕೋಟಿ; ಇದು ೧೯೪೦ರ ವೇಳೆಗೆ ಇಪ್ಪತ್ತೊಂದು ಕೋಟಿಯನ್ನು ಮುಟ್ಟಿತು. ಹೀಗೆಯೇ ನಗದು ಸಿಲ್ಕುಗಳ (Unfunded Debt) ರೂಪದಲ್ಲಿದ್ದ ಸಾಲ ೨೧ ಕೋಟಿಯಿಂದ ೨೪ ಕೋಟಿ ರೂಪಾಯಿಯಷ್ಟಾಯಿತು. ೧೯೪೦ರ ವೇಳೆಗೆ ಪ್ರಾಂತ ಸರಕಾರಗಳ ಒಟ್ಟು ಸಾಲ ಸುಮಾರು ೧೫೩ ಕೋಟಿ ರೂಪಾಯಿಗಳು. ಇದರಲ್ಲಿ ವಿಫಲಋಣವೆಂಬುದೇ ಇಲ್ಲ. ಇದರಲ್ಲಿ ಸುಮಾರು ೧೪೦ ಕೋಟಿ ರೂಪಾಯಿಗಳಷ್ಟು ಫಲಪ್ರದವಾದ ನೀರಾವರೀ ಕಾಮಗಾರಿ ಕೆಲಸಗಳಿಗಾಗಿಯೇ ವೆಚ್ಚವಾಗಿದೆ.

ದೇಶದ ಸಾಲದ ಹೊರೆಯನ್ನೂ, ಅದರಿಂದ ಆರ್ಥಿಕ ಸ್ಥಿತಿಯ ಮೇಲೆ ಉಂಟಾಗುವ ಪ್ರಭಾವವನ್ನೂ ನಾವು ಅರಿಯಬೇಕಾದರೆ ಅದು ವಿಫಲ

ಋಣವೇ ಅಥವಾ ಸಫಲವಾದುದೇ ಎಂಬುದನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡುವುದರ ಜತೆಗೆ, ಆ ಸಾಲ, ಅದೇ ದೇಶದಲ್ಲಿ ಉತ್ಪನ್ನವಾದದ್ದೇ ಅಥವ ಹೊರಗಣವೇ ಎಂಬುದನ್ನು ಪರ್ಯಾಲೋಚಿಸುವುದರಿಂದಲೂ ತಿಳಿಯಬಹುದು. ಮಹಾಯುದ್ಧಕ್ಕೆ ಮೊದಲು ಇಂಡಿಯಾ ಸರಕಾರ ಮಾಡಿದ್ದ ಸಾಲದಲ್ಲಿನ ಬಹು ಭಾಗ ಹೊರಗಣದು. ಸರಕಾರಕ್ಕೆ ಬೇಕಾಗುವಷ್ಟು ಹಣ ಇಂಡಿಯಾ ದೇಶದಲ್ಲಿ ಹುಟ್ಟುವುದಿಲ್ಲವೆಂದು ಈ ನೀತಿಯನ್ನು ಅವರು ಅನುಸರಿಸಿದರು. ಹೀಗೆ ಹೊರ ದೇಶಗಳಿಂದ ಸಾಲ ತರುವ ನೀತಿ ಒಳ್ಳೆಯದಲ್ಲವೆಂದು ಜನರು ಅಭಿಪ್ರಾಯಪಟ್ಟರೂ, ಈ ನೀತಿಯೇ ಪ್ರಬಲವಾಗಿ, "ಹೊರಗಣಸಾಲ" ಬಲವಾಗುತ್ತ ಬಂತು. ಅಂದಿನ ಮಹಾಯುದ್ಧದ ಕಾಲದಲ್ಲಿ ನಡೆದ ಸಂಘಟನೆಗಳಿಂದ, ಸರಕಾರಕ್ಕೆ ಬೇಕಾಗುವಷ್ಟು ಹಣ ನಮ್ಮ ದೇಶದಲ್ಲಿ ದೊರೆಯುವುದಿಲ್ಲವೆಂಬ ಅಭಿಪ್ರಾಯ ಮಾಯವಾಯಿತು. ಇಂಡಿಯಾ ಸರಕಾರ ಇಲ್ಲಿಯೇ ಸಾಲ ತೆಗೆದುಕೊಳ್ಳುವ ನೀತಿ ಬಲವಾಗಿ ೧೯೧೭ರಲ್ಲಿ ೫೩ ಕೋಟಿ ರೂಪಾಯಿಗಳಷ್ಟು, ೧೯೧೮ರಲ್ಲಿ ೫೭ ಕೋಟಿ ರೂಪಾಯಿಗಳಷ್ಟು ಸಾಲ ಮಾಡಿತು. ಸರಕಾರದವರು ಸಾಲದ ವಿಷಯದಲ್ಲಿ ನಡಸಿದ ಪ್ರಕಟನೆ, ಪ್ರಚಾರ ಕಾರ್ಯ, ಸಾಲ ಕೊಡುವವರಿಗೆ ಕಲ್ಪಿಸಿಕೊಟ್ಟ ಸೌಕರ್ಯಗಳು, ಇವು ಸಾಲ ಹೆಚ್ಚುಹೆಚ್ಚಾಗಿ ದೊರೆಯಲು ಅನುಕೂಲಗಳನ್ನುಂಟು ಮಾಡಿದವು. ಈ ಸಮಯದಲ್ಲಿ ಕೋಟ್ಯಾಂತರ ರೂಪಾಯಿಗಳ ಸಾಲ ದೊರೆತುದರ ಜತೆಗೆ, ಸಾಲ ಕೊಟ್ಟವರ ಸಂಖ್ಯೆಯೂ ಏರಿತು. ಸರಕಾರ ಖಜಾನೆ ಹುಂಡಿಗಳೆಂಬ (Treasury Bills) ಅಲ್ಪಾವಧಿಯ ಸಾಲದ ಪತ್ರಗಳನ್ನು ಕೊಟ್ಟು ಹಿಂದಿನ ಸಾಲವನ್ನು ತೀರಿಸುವ ಎಂದರೆ, ತಾವು ಒಂದು ಕಾಲದಲ್ಲಿ ಕೊಡಬೇಕಾದ ಹಣದ ಬದಲಾಗಿ ಹುಂಡಿಗಳನ್ನು ಕೊಟ್ಟು ಹಣದ ಮುಗ್ಗಟ್ಟನ್ನು ನಿವಾರಿಸಿಕೊಳ್ಳುವ ಹೊಸ ಮಾರ್ಗವನ್ನು ಹುಡುಕಿತು. ಪೋಸ್ಟಾಫೀಸಿನ ಕ್ಯಾಷ್ ಸರ್ಟಿಫಿಕೇಟುಗಳೂ, ಖಜಾನೆ ಹುಂಡಿಗಳೂ ಮಹಾಯುದ್ಧದಿಂದೀಚೆಗೆ ಬಂದ ಏರ್ಪಾಡುಗಳು. ಖಜಾನೆ ಹುಂಡಿಗಳ ಸಾಲ ಇಂಡಿಯಾ ಸರಕಾರದ ಹಣ ಪ್ರಪಂಚದಲ್ಲಿ ಪ್ರಾಮುಖ್ಯವಾದುದು.

ಇಂಡಿಯಾದೇಶದಲ್ಲಿಯೇ ಎತ್ತಿದ ಸಾಲ, ರೂಪಾಯಿಗಳ ರೂಪದಲ್ಲಿರುವ ಸಾಲ. ಸಾಲತೆಗೆದುಕೊಳ್ಳುವಾಗ ಮತ್ತು ಅದರ ಅಸಲು ಮತ್ತು ಬಡ್ಡಿಯನ್ನು ಸರಕಾರದವರು ಪಾವತಿಮಾಡುವಾಗ ರೂಪಾಯಿಗಳ ರೂಪದಲ್ಲಿ ಈ ಸಾಲವನ್ನು ಮಾಡುತ್ತಾರೆ. ಈ "ರೂಪಾಯಿನ ಸಾಲದ" ಬಹು ಭಾಗವನ್ನು ಇಂಡಿಯಾದೇಶದ ಪ್ರಜೆಗಳಿಂದಲೇ ಎತ್ತಿದ್ದರೂ, ಕೆಲವು ಇಂಗ್ಲೆಂಡ್ ದೇಶದವರೂ, ಇಂಡಿಯಾ ದೇಶದಲ್ಲಿರುವ ಇಂಗ್ಲಿಷನವರೂ ಇದಕ್ಕೆ ಸಾಲಕೊಟ್ಟಿದ್ದಾರೆ. ಇಂಗ್ಲೆಂಡಿನ ಹಣಪೇಟೆಯಲ್ಲಿ ತಂದಿರುವ ಸಾಲವನ್ನು "ಸ್ಟರ್ಲಿಂಗ್ ಸಾಲ" ವೆನ್ನುತ್ತಾರೆ. ಸಾಲ ಕೊಟ್ಟಿರುವವರು ಭಾರತೀಯರಾದರೆ ಅವರಿಂದ ಬಂದ ಸಾಲವನ್ನು ಒಳಗಣ ಸಾಲವೆಂದೂ, ಪರದೇಶದವರಾದರೆ, "ಹೊರಗಣ ಸಾಲವೆಂದೂ" ಕರೆಯುವುದು ಸೂಕ್ತವಾಗಿ ಕಂಡುಬರುತ್ತದೆ. ಈ ದೃಷ್ಟಿಯಿಂದ ಇಂಡಿಯಾಸರಕಾರದ ಸಾಲವನ್ನು ಪರಿಶೀಲಿಸಿದರೆ

ಹೊರಗಣ ಸಾಲವೇ ಬಹಳವಾಗಿದೆಯೆನ್ನಬಹುದು. ಹೊರಗಣ ಸಾಲವನ್ನು ಸಾಧ್ಯವಾದಷ್ಟು ತಗ್ಗಿಸುವುದು ದೇಶದ ಹಿತದೃಷ್ಟಿಯಿಂದ ಅವಶ್ಯಕ. ಈ ರೀತಿ ಹೊರಗಣ ಸಾಲವಿದ್ದಷ್ಟೂ ಹಣದ ವಿನಿಮಯ ವಿಷಯದಲ್ಲಿ ಅನೇಕ ಸಮಸ್ಯೆಗಳೂ ತೊಂದರೆಗಳೂ ಬಂದೊದಗುವುದು ಸಹಜ.

ಇಂಡಿಯಾ ಸರಕಾರದ ಸಾಲದ ಪರಿಸ್ಥಿತಿ ೧೯೩೫ರಲ್ಲಿ ಹೇಗಿತ್ತು ಎಂಬುದನ್ನು ಈ ಕೆಳಗಿನ ಪಟ್ಟಿಯು ತಿಳಿಸುತ್ತದೆ :—

ಬಡ್ಡಿ ತೆರಬೇಕಾದ ಸರಕಾರದ ಒಟ್ಟುಸಾಲ ೧೨೩೫ ಕೋಟಿ ರೂಪಾಯಿಗಳು.

| | | |
|---|---|---|
| ಇಂಗ್ಲೆಂಡಿನಲ್ಲಿ ಮಾಡಿರುವ "ಸ್ಟರ್ಲಿಂಗ್‌ಸಾಲ" | ೫೧೩ | ಕೋಟಿ ರೂ. |
| ಇಂಡಿಯಾದೇಶದಲ್ಲಿನ ರೂಪಾಯಿಸಾಲ | ೭೨೨ | ,, |
| ಸಫಲಋಣ (ಆಸ್ತಿರೂಪದಲ್ಲಿ ನಿಂತಿರುವುದು) | ೯೮೧ | ,, |
| ವಿಫಲಋಣ | ೨೦೩ | ,, |
| ನಗದು ಮತ್ತು ಚಿನ್ನ ಬೆಳ್ಳಿರೂಪದಲ್ಲಿ | ೫೧ | ,, |

ನಮ್ಮ ದೇಶದ ಹೊರಗಣ ಸಾಲವನ್ನು ಇತರ ದೇಶಗಳೊಂದಿಗೆ ಹೋಲಿಸಿ ನೋಡಿ.

| ದೇಶ. | ಸಾಲದಮೊತ್ತ. | ಒಳಸಾಲ. | ಹೊರಸಾಲ. |
|---|---|---|---|
| ಗ್ರೇಟ್ ಬ್ರಿಟಿನ್ (೧೯೩೬). | ೭೯೦ ಕೋಟಿಪೌಂಡು | ೬೮೬ ಕೋಟಿ. | ೧೦೪ ಕೋಟಿ. |
| ಅಮೆರಿಕಾದ ಸಂಯುಕ್ತಸಂಸ್ಥಾನಗಳು (೧೯೩೬). | ೩೩೫೪ ಕೋಟಿ ಡಾಲರ್. | ೩೩೫೪ ಕೋಟಿ | .... |
| ಜಪಾನ್ (೧೯೩೬) | ೧೦೩೦ ಕೋಟಿ ಯೆನ್‌ಗಳು. | ೮೯೭ ಕೋಟಿ | ೧೩೩ ಕೋಟಿ. |
| ಇಂಡಿಯಾ (೧೯೩೫) | ೧೨೩೫ ಕೋಟಿ ರೂಗಳು. | ೭೨೨ ಕೋಟಿ | ೫೧೩ ಕೋಟಿ |

ಸಾಲವನ್ನು ತೀರಿಸಲು ಇರುವ ಮಾರ್ಗಗಳು ಎರಡು. ಪ್ರತಿವರ್ಷವೂ ಸರಕಾರದ ಆದಾಯದಲ್ಲಿ ಒಂದು ಭಾಗವನ್ನು ತೀರ್ವೆಯ ನಿಧಿಗಾಗಿ ಮೀಸಲಾಗಿಟ್ಟು ಕ್ರಮ ಕ್ರಮವಾಗಿ ಸಾಲವನ್ನು ತೀರಿಸುವುದು. ಹೆಚ್ಚುದರದ ಬಡ್ಡಿಯ ಸಾಲವನ್ನು ಕಡಮೆ ದರದಲ್ಲಿ ಹೊಸದಾಗಿ ಸಾಲವೆತ್ತಿ ಪಾವತಿ ಮಾಡುವುದು. ಈ ಎರಡು ಮಾರ್ಗಗಳನ್ನೂ ಇಂಡಿಯಾ ಸರಕಾರ ಅನುಸರಿಸುತ್ತ ಬಂದಿದೆ. ಇಂಡಿಯಾ ದೇಶದ ಒಟ್ಟುಸಾಲದ ಮೊತ್ತದಲ್ಲಿ ಬಹುಭಾಗ ಸಫಲ ಋಣವಾದುದರಿಂದ, ಈ ಸಾಲದ ವಿಷಯದಲ್ಲಿ ತವಕಗೊಳ್ಳಬೇಕಾದ್ದಿಲ್ಲ.

---

# ಪ್ರಕರಣ ೨೨

## ಸ್ಥಳೀಯ ಸರಕಾರಗಳ ಹಣಕಾಸು

ಈಗ ಇಂಡಿಯಾ ದೇಶದಲ್ಲಿ ಸ್ಥಳೀಯ ವಿದ್ಯಮಾನಗಳಿಗನುಸಾರವಾಗಿ ಅವಶ್ಯಕವಾಗುವ ಜನೋಪಯೋಗ ಕಾರ್ಯಗಳನ್ನು ನಿರ್ವಹಿಸುವ ಸಂಸ್ಥೆಗಳೆಂದರೆ, ಡಿಸ್ಟ್ರಿಕ್ಟ್ ಬೋರ್ಡ್, ಗ್ರಾಮಪಂಚಾಯತಿ, ಪೌರ ಅಥವಾ ನಗರ ಸಭೆಗಳು, ಇವು ಸ್ಥಳೀಯ ಸರಕಾರಗಳು. ನಮ್ಮ ದೇಶದ ಒಟ್ಟು ರಾಜ್ಯಾದಾಯದಲ್ಲಿ ಕೇಂದ್ರ ಸರಕಾರ ಸುಮಾರು ಅರ್ಧ ಭಾಗದಷ್ಟು ವೆಚ್ಚಮಾಡುತ್ತದೆ. ಪ್ರಾಂತ ಸರಕಾರಗಳು ಸುಮಾರು ಶೇ. ೩೪ರಷ್ಟು, ಸ್ಥಳೀಯ ಸರಕಾರಗಳು ಶೇ. ೧೯ರಷ್ಟು ವೆಚ್ಚಮಾಡುತ್ತವೆಯೆನ್ನಬಹುದು. ಇದರಿಂದ ನಮ್ಮ ದೇಶದಲ್ಲಿ ಸ್ಥಳೀಯ ಸಂಸ್ಥೆಗಳ ಪ್ರಾಬಲ್ಯ ಹೆಚ್ಚಿಲ್ಲವೆಂಬುದು ಗೋಚರವಾಗುವುದು.

ನಮಗೆ ತಿಳಿದಂತೆ ಇಂಡಿಯಾದೇಶದಲ್ಲಿನ ಶೇಕಡ ೮೦ ಮಂದಿ ಹಳ್ಳಿಗಳಲ್ಲಿ ವಾಸಮಾಡುತ್ತಾರೆ. ನಮ್ಮ ದೇಶ ಹಳ್ಳಿಗಳ ದೇಶ. ಆದುದರಿಂದ ಆ ಹಳ್ಳಿಗಳ ಸೌಕರ್ಯಗಳನ್ನು ನೋಡುವ ಗ್ರಾಮಪಂಚಾಯತಿ, ಮತ್ತು ಜಿಲ್ಲಾಸಮಿತಿಗಳಿಗೇ ಇಲ್ಲಿ ಪ್ರಾಮುಖ್ಯ ಹೆಚ್ಚಬೇಕಾದುದು ಸಾಧುವಾಗಿದೆ. ಈ ಜಿಲ್ಲಾ ಸಮಿತಿಗಳು ಮೊದಲು ಕಳೆದ ಶತಮಾನದ ಉತ್ತರಾರ್ಧದಲ್ಲಿ ಮದರಾಸು ಮತ್ತು ಬೊಂಬಾಯಿ ಪ್ರಾಂತಗಳಲ್ಲಿ ಆರಂಭವಾದುವು. ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಿ ಬರಲು ರಸ್ತೆಯ ಸೌಕರ್ಯ, ಚಿಕ್ಕಪುಟ್ಟ ಶಾಲೆಗಳು, ವೈದ್ಯಶಾಲೆಗಳು, ಗ್ರಾಮನೈರ್ಮಲ್ಯ, ಇಂತಹ ಸಾಮಾಜಿಕ ಮತ್ತು ಶಿಕ್ಷಣಕಾರ್ಯ ನಿರ್ವಾಹಕ್ಕಾಗಿ ಇವು ಏರ್ಪಾಡಾದುವು. ಇದರ ವೆಚ್ಚಕ್ಕಾಗಿ ಭೂಕಂದಾಯದ ಮೇಲೆ ಸರಕಾರದ ಒಂದು ತೆರಿಗೆಯನ್ನು ವಸೂಲ್ಮಾಡುತ್ತಿದ್ದರು. ೧೮೭೧ರಲ್ಲಿ ಈ ಜಿಲ್ಲಾಸಮಿತಿಗಳ ನಿರ್ಮಾಣ ಇತರ ಪ್ರಾಂತಗಳಿಗೂ ಹಬ್ಬಿತು. ಕೆಲವು ಕಡೆ ಭೂಕಂದಾಯದ ಮೇಲಿನ ತೆರಿಗೆಯ ಜತೆಗೆ, ರೋಡ'ಸೆಸ್, ವಿದ್ಯಾಭ್ಯಾಸದ ಸೆಸ್ ಮೊದಲಾದುವನ್ನು ವಸೂಲ್ಮಾಡತೊಡಗಿದರು. ೧೮೭೧ರಿಂದ ೧೯೦೩ರ ಒಳಗಾಗಿ ಕ್ಷಾಮನಿವಾರಣೆಗಾಗಿ ವಿಧವಿಧವಾದ ಸೆಸ್‌ಗಳನ್ನು ಹಾಕತೊಡಗಿದರು. ಕೆಲವುಕಡೆ ಗ್ರಾಮಾಂತರಗಳಲ್ಲಿರುವ ಗ್ರಾಮಾಧಿಕಾರಗಳ ಸೌಕರ್ಯಕ್ಕಾಗಿ ಸೆಸ್‌ಗಳನ್ನು ಉಪಯೋಗಿಸಿಕೊಳ್ಳಲಾಯಿತು.

೧೯೦೫–೬ನೆಯ ಇಸ್ವಿಯ ವೇಳೆಗೆ ಇಂಡಿಯಾ ಸರಕಾರದ ಹಣಕಾಸಿನ ಪರಿಸ್ಥಿತಿ ಉತ್ತಮಗೊಂಡಿತು. ಆಗ ಈ ಸ್ಥಳೀಯ ಸರಕಾರಗಳ ಉಪಯೋಗಕ್ಕಾಗಿ ಹಾಕಿದ್ದ ಸೆಸ್‌ಗಳನ್ನು ವಜಾಮಾಡಲಾಯಿತು. ಇತ್ತೀಚೆಗೆ ವಿದ್ಯಾಭ್ಯಾಸದ ಸೆಸ್ ಮೊದಲಾದ ಸೆಸ್‌ಗಳನ್ನು ಹಾಕುವ ಪದ್ಧತಿ ಪುನಃ ರೂಢಿಗೆ ಬಂದಿದೆ. ಸ್ಥಳೀಯ ಸರಕಾರಗಳು ಹಾಕುವ ತೆರಿಗೆಯ ದರವನ್ನು ಆಯಾ ಸರಕಾರಗಳೇ ನಿರ್ಣಯ ಮಾಡಿಕೊಳ್ಳುತ್ತವೆ. ಕೆಲವು ಕಡೆ, ಭೂಕಂದಾಯದ ಮೇಲೂ, ಇನ್ನು ಕೆಲವು ಕಡೆ ಭೂಮ್ಯುತ್ಪನ್ನ ಆದಾಯದ ಮೇಲೂ, ಮತ್ತು ಕೆಲವು ಕಡೆ ಭೂಮಿಯ ವಿಸ್ತೀರ್ಣದ

ಮೇಲೂ ತೆರಿಗೆ ಹಾಕುತ್ತಾರೆ. ಇವು ಯಾವ ಮಿತಿಗೆ ಒಳಪಟ್ಟಿರಬೇಕೆಂಬುದನ್ನು ಆಯಾ ಪ್ರಾಂತಸರಕಾರಗಳು ನಿಷ್ಕರ್ಷೆ ಮಾಡುತ್ತವೆ. ಸ್ಥಳೀಯ ಸರಕಾರದ ತೆರಿಗೆಯನ್ನು ಯಾವಾಗಲೂ ಭೂಕಂದಾಯದೊಂದಿಗೆ ವಸೂಲ್ಮಾಡುವುದು ಸಂಪ್ರದಾಯವಾಗಿದೆ. ಸಾಮಾನ್ಯವಾಗಿ ಈ ಸೆಸ್ಸುಗಳನ್ನು ಶೇ. ೬೪ ರಿಂದ ೧೨೩ಯವರೆಗೆ ಭೂಕಂದಾಯದಮೇಲೆ ವಸೂಲ್ಮಾಡುತ್ತಾರೆ. ಭೂಕಂದಾಯ್ಯ ವನ್ನು ಹತ್ತಾರುವರ್ಷಗಳಿಗೊಮ್ಮೆ ನಿರ್ಣಯಿಸುವುದರಿಂದ, ಈ ತೆರಿಗೆಗಳ ದರವನ್ನು ಭೂಕಂದಾಯವನ್ನು ಆಧಾರವಾಗಿಟ್ಟುಕೊಂಡು ನಿಯಮಿಸುವುದು ಸಾಧುವಾದು ದಲ್ಲವೆಂದು ಕೆಲವರ ಅಭಿಪ್ರಾಯ.

ನಮ್ಮ ದೇಶದಲ್ಲಿ ಸ್ಥಳೀಯ ಸರಕಾರಗಳು, ಆಯಾ ಪ್ರಾಂತ ಸರಕಾರಗಳ ಆಡಳಿತಕ್ಕೆ ಒಳಪಟ್ಟಿವೆ. ಈ ಸಂಸ್ಥೆಗಳ ಕರ್ತವ್ಯಗಳು, ಆ ಸರಕಾರದ ರಚನೆ, ಅವು ಗಳ ಸಾಧನೋಪಾಯಗಳು, ಎಲ್ಲವೂ ಪ್ರಾಂತಸರಕಾರಗಳನ್ನೇ ಬಹುಮಟ್ಟಿಗೆ ಆಶ್ರಯಿಸಿ ಅದರ ಆಜ್ಞೆಯಂತೆ ನಡೆಯುತ್ತಿವೆ. ಆದರೆ ಕಲ್ಕತ್ತಾ, ಬೊಂಬಾಯಿ ಮತ್ತು ಮದರಾಸಿನ ನಗರ ಸಭೆಗಳು ಮಾತ್ರ ಇದಕ್ಕೆ ಆಧೀನವಾಗಿಲ್ಲ. ಅವು ಪ್ರಾಂತ ಸರಕಾರದ ಸ್ಥಳೀಯ ಸಂಸ್ಥೆಗಳ ಶಾಖೆಯ ಅಧೀನದಲ್ಲವೆ. ಇತ್ತೀಚೆಗೆ ನಮ್ಮ ದೇಶದ ಅನೇಕ ಪ್ರಾಂತಗಳಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚು ಅಧಿಕಾರ ದೊರೆತು ಹಣಕಾಸಿನ ವಿಷಯದಲ್ಲಿ ಹಿಂದಿದ್ದ ಕೆಲವು ಕುಂದುಕೊರತೆಗಳು ತಪ್ಪಿವೆ.

ಸ್ಥಳೀಯ ಸರಕಾರಗಳ ಹಣಕಾಸಿನ ವರ್ಷ ಸಾಮಾನ್ಯವಾಗಿ ಆರಂಭ ವಾಗುವುದು, ಏಪ್ರೆಲ್ ಒಂದನೆಯ ತಾರೀಖಿನಿಂದ. ಆ ವೇಳೆಗೆ ಆ ಸಂಸ್ಥೆ ಅಧಿಕಾರಿ ಗಳು ಮುಂದಿನವರ್ಷಕ್ಕೆ ತಮಗೆ ಬೇಕಾದ ಆಯವ್ಯಯದ ಪಟ್ಟಿಯೊಂದನ್ನು ಅಂದಾಜು ಮಾಡಿರುತ್ತಾರೆ. ಈ ರೀತಿ ಮಾಡಿದ ಅಂದಾಜಪಟ್ಟಿಯನ್ನು ಆ ವರ್ಷ ಮುಗಿ ಯುವುದಕ್ಕೆ ಮೊದಲು ಆಯಾ (ಬೋರ್ಡ್) ಸಮಿತಿಯ ಮುಂದೆ ಇಡುತ್ತಾರೆ. ಹಣಕಾಸಿನ ಸಮಿತಿ, ಜಿಲ್ಲಾ ಸಮಿತಿ ಇವುಗಳ ವಿಮರ್ಶೆಗೆ ಒಳಪಟ್ಟು ಮಂಜೂರಾದ ಪಟ್ಟಿಯಂತೆ ಬಡ್ಜೆಟ್ ಮುಂದಿನ ವರ್ಷದ ಕಾರ್ಯಕಲಾಪಗಳು ನಡೆಯುತ್ತವೆ. ಹೀಗೆ ಆ ಸಮಿತಿಯ ಸದಸ್ಯರು ತೀರ್ಮಾನಿಸಿದ ಪಟ್ಟಿ ಪ್ರಾಂತ ಸರಕಾರದ ಅವಗಾಹನೆಗೆ ಬಂದು ಅವರ ಅನುಮತಿಯು ದೊರೆಯಬೇಕಾಗುವುದು. ಆದರೆ ಈ ಸಮಿತಿ ಯವರಿಗೆ ಒಂದು ಬಾರಿ ಅಂದಾಜು ಮಾಡಿದ ಪಟ್ಟಿಯನ್ನು ಪುನರ್ವಿಮರ್ಶೆ ಮಾಡುವ ಅಧಿಕಾರವೇನೋ ಉಂಟು.

ಇತರ ಸರಕಾರಗಳ ಕರ್ತವ್ಯಗಳನ್ನು ವಿಭಾಗ ಮಾಡುವಂತೆಯೇ, ಸ್ಥಳೀಯ ಸರಕಾರಗಳ ಕರ್ತವ್ಯಗಳನ್ನೂ, ಪ್ರಾಥಮಿಕ ಮತ್ತು ಐಚ್ಛಿಕ ಎಂದು ಎರಡು ಭಾಗ ಮಾಡಬಹುದು. ಈ ಕರ್ತವ್ಯಗಳನ್ನು ನಿರ್ವಹಿಸಲು ಅವಕ್ಕೆ ಬೇಕಾದ ಹಣವನ್ನು ತೆರಿಗೆಗಿಂತ ಬೇರೆ ವಿಧವಾದ ಆದಾಯದ ಬಾಬುಗಳಿಂದಲೂ ಸಂಗ್ರಹಿಸುತ್ತಾರೆ. ಸಾಮಾನ್ಯವಾಗಿ ಡಿಸ್ಟ್ರಿಕ್ಟ್ ಬೋರ್ಡ್, ತಾಲ್ಲೂಕ್ ಬೋರ್ಡ್ ಮೊದಲಾದ ಸಂಸ್ಥೆ ಗಳ ರಾಜಾದಾಯದ ಬಹುಭಾಗವು ಆಯಾ ಸಂಸ್ಥೆಗಳ ಅಧಿಪತ್ಯಕ್ಕೆ ಸೇರಿದ ವಸತಿ ಗೃಹಗಳು, ಸಂತೆಮಾಳ, ಮಾರ್ಕೆಟ್ ಮೊದಲಾದುವುಗಳಿಂದ ಬರುವ ಬಾಡಿಗೆ, ರಸ್ತೆ ಸೆಸ್, ವಿದ್ಯಾಭ್ಯಾಸದ ಸೆಸ್, ಟೋಲ್‌ಗೇಟಿನ ಸುಂಕ, ಪರಷೆ ಮತ್ತು ಜಾತ್ರೆಗಳ

ಸುಂಕ ಈ ಬಾಬುಗಳಿಗೆ ಸೇರಿರುತ್ತವೆ. ಮುನಿಸಿಪಾಲಿಟಿಗಳಲ್ಲಿ ಮನೆಗಳ ಮೇಲಿನ ಕಂದಾಯ, ನೀರು ಮತ್ತು ದೀಪಗಳಿಗಾಗಿ ತೆರಿಗೆ, ಮಾರ್ಕೆಟ್ ಮೊದಲಾದುವುಗಳಿಂದ ಬರುವ ಬಾಡಿಗೆ, ಪದಾರ್ಥಗಳ ಮೇಲಿನ ಸುಂಕ, ಇದರಿಂದ ಆದಾಯ ಬರುತ್ತದೆ. ಚಿಕ್ಕಪುಟ್ಟ ಪೌರಸಭೆಗಳವರೂ, ಗ್ರಾಮಪಂಚಾಯಿತಿಯವರೂ ಆ ಸ್ಥಳದ ನಿವೇಶನಗಳು, ಬಯಲು, ಅಲ್ಲಿ ನಡೆವ ಸಂತೆ, ಜಾತ್ರೆಗಳು, ಆ ಪ್ರದೇಶಕ್ಕೆ ಬಂದು ಹೋಗುವ ಪದಾರ್ಥಗಳು, ಇವುಗಳ ಮೇಲೆ ತೆರಿಗೆ ಅಥವಾ ಸುಂಕ ಹಾಕುತ್ತಾರೆ.

ಸ್ಥಳೀಯ ಸಂಸ್ಥೆಗಳು ಹೀಗೆ ವಸೂಲ್ಮಾಡಿದ ತಮ್ಮ ಹಣವನ್ನು ಸಾಮಾನ್ಯವಾಗಿ ನಿರ್ದಿಷ್ಟವಾದ ಬ್ಯಾಂಕುಗಳಲ್ಲಿಡುವುದೂ ಉಂಟು. ಸರಕಾರದ ಖಜಾನೆಯಲ್ಲಿಟ್ಟಿದ್ದು, ತಮ್ಮ ಬಡ್ಜೆಟ್ಟಿನ ಪ್ರಕಾರ ವೆಚ್ಚಮಾಡುತ್ತವೆ. ಈ ಸ್ಥಳೀಯ ಸಂಸ್ಥೆಗಳು ವಸೂಲ್ಮಾಡಿ ವೆಚ್ಚಮಾಡಿದ ಹಣದ ಲೆಕ್ಕಪತ್ರಗಳನ್ನು ಪ್ರಾಂತ ಅಥವಾ ಕೇಂದ್ರ ಸರಕಾರಕ್ಕೆ ಸೇರಿದ ಅಧಿಕಾರಿಗಳು ಪ್ರತಿವರ್ಷವೂ ಪರಿಶೀಲನೆಮಾಡಿ ತಮ್ಮ ವರದಿಯನ್ನು ಒಪ್ಪಿಸುತ್ತಾರೆ. ಆ ಅಧಿಕಾರಿ ತೋರಿಸುವ ತಪ್ಪುಗಳಿಗೆ ಸರಿಯಾದ ವಿವರಣೆಯನ್ನು ಕೊಡುವುದು ಆಯಾ ಸ್ಥಳೀಯ ಸಂಸ್ಥೆಗಳ ಕೆಲಸ. ಇದರಿಂದ ವರ್ಷಂಪ್ರತಿ ಪ್ರಾಂತ ಸರಕಾರದ ಅಧಿಕಾರವನ್ನು ಚಲಾಯಿಸಿದಂತಾಗುವುದಲ್ಲದೆ, ಸ್ಥಳೀಯ ಸಂಸ್ಥೆಗಳ ಹಣಕಾಸು ಪೋಲಾಗದಿರಲು ಸಹಾಯವಾಗುತ್ತದೆ.

ಹೀಗೆ ನಾನಾ ವಿಧವಾದ ತೆರಿಗೆ, ಮತ್ತು ಸುಂಕಗಳ ಮೂಲಕ ಹಣವನ್ನು ಪಡೆವುದರ ಜತೆಗೆ, ಸ್ಥಳೀಯ ಸಂಸ್ಥೆಗಳು, ಪ್ರಾಂತಸರಕಾರದಿಂದಲೋ ಅಲ್ಲಿಯ ಪ್ರಜೆಗಳಿಂದಲೋ ಸಾಲದ ರೂಪದಲ್ಲಿ ಹಣ ಪಡೆಯಬಹುದು. ಹೀಗೆ ಇತರರಿಂದ ಸಾಲ ಪಡೆಯಬೇಕಾದರೆ ಸರಕಾರದ ಅಪ್ಪಣೆ ಪಡೆಯಬೇಕು. ಈರೀತಿ ಮಾಡಿದ ಸಾಲವನ್ನು ಎಷ್ಟು ತಡವಾದರೂ, ಅರುವತ್ತು ವರ್ಷಗಳೊಳಗಾಗಿ ವಾಪಸು ಮಾಡಬೇಕು. ವರ್ಷಾದಾಯದಿಂದ ನಡಸಲಾಗದ ಜನೋಪಯೋಗವಾದ ಕೆಲವು ವಿಶೇಷ ಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಮಾತ್ರ ಈ ರೀತಿ ಸಾಲಮಾಡುತ್ತವೆ. ಹೀಗೆ ಹೆಚ್ಚು ಸಾಲಮಾಡಿ, ಆ ಸಾಲದ ಹೊರೆ ಮುಂದಿನ ಜನಾಂಗದ ಮೇಲೆ ಬೀಳದಂತೆ ನೋಡಿಕೊಳ್ಳುವುದು ಪ್ರಾಂತ ಸರಕಾರಗಳ ಕೆಲಸ.

ಇಂಡಿಯಾದೇಶದ ಪ್ರಾಂತಗಳಲ್ಲಿನ ಡಿಸ್ಟ್ರಿಕ್ಟ್ ಬೋರ್ಡ್, ತಾಲ್ಲೂಕ್ ಬೋರ್ಡ್, ಗ್ರಾಮಪಂಚಾಯಿತಿಗಳ ಸಂಖ್ಯೆ ಸುಮಾರು ೧,೨೪೬. ಅವುಗಳ ಆದಾಯ ೧೯೩೦-೩೧ರಲ್ಲಿ ೧೬.೫೭ ಕೋಟಿ ರೂಪಾಯಿಗಳಷ್ಟಿತ್ತು. ಹಿಂದೆ ಇವುಗಳ ಉತ್ಪತ್ತಿ ಇಷ್ಟಿರಲಿಲ್ಲ. ಈ ಅಲ್ಪಾದಾಯದಿಂದ ೨೪ ಕೋಟಿ ಪ್ರಜೆಗಳ ಸಹಾಯಕ್ಕಾಗಿ ಗ್ರಾಮಾಂತರದ ರಸ್ತೆಗಳು, ಪಾಠಶಾಲೆಗಳು, ಮಾರ್ಕೆಟ್, ಗ್ರಾಮನೈರ್ಮಲ್ಯ, ವೈದ್ಯಸಹಾಯ, ಮೊದಲಾದ ಕೆಲಸಗಳನ್ನು ಆ ಸಂಸ್ಥೆಗಳು ನಡೆಸಬೇಕಾಗಿವೆ. ಇದುವರೆಗೆ ಈ ಸ್ಥಳೀಯ ಸಂಸ್ಥೆಗಳು ತಕ್ಕಷ್ಟು ಕೆಲಸ ಮಾಡದಿದ್ದರೆ, ಅವುಗಳಿಗಿರುವ ದ್ರವ್ಯಾಭಾವವೇ ಮುಖ್ಯ ಕಾರಣವೆಂಬುದರಲ್ಲಿ ಸಂದೇಹವಿಲ್ಲ.

ಇಂಡಿಯಾ ದೇಶದ ಪ್ರಾಂತಗಳಲ್ಲಿನ ಪೌರಸಭೆಗಳ ಒಟ್ಟು ಆದಾಯ ೧೯೩೦-೩೧ರಲ್ಲಿ ಸುಮಾರು ೩೬.೭೦ ಕೋಟಿ ರೂಪಾಯಿಗಳಷ್ಟಿತ್ತು. ಅವರ ಉತ್ಪತ್ತಿ ಮೇಲೆ ಹೇಳಿದಂತೆ ಮನೆಗಂದಾಯ, ಸುಂಕ, ವಾಹನಗಳ ಮೇಲಿನ ಸುಂಕ, ಇವುಗಳಿಂದ

ಬಂದುದು. ಇಂಡಿಯಾದಲ್ಲಿ ಸುಮಾರು ೭೮೧ ಪೌರಸಭೆಗಳಿವೆ. ಅಲ್ಲಿಯ ಪ್ರಜಾಸಂಖ್ಯೆ ಸುಮಾರು ೨ ಕೋಟಿ.

ಬೊಂಬಾಯಿ, ಕಲ್ಕತ್ತಾ, ಮದರಾಸು ಮೊದಲಾದ ದೊಡ್ಡ ಪೌರಸಭೆಗಳನ್ನು ಬಿಟ್ಟು ಉಳಿದ ಸಭೆಗಳಿಗೆ ಸಂಬಂಧಪಟ್ಟ ಆದಾಯ ವೆಚ್ಚಗಳ ಪಟ್ಟಿಯನ್ನು ನೋಡಿದರೆ ಇಂಡಿಯಾ ದೇಶದಲ್ಲಿನ ಪೌರಸಭೆಗಳ ಆದಾಯ ಎಷ್ಟು ಹೀನಸ್ಥಿತಿಯಲ್ಲಿದೆ ಎಂಬುದು ಮುಂದಟ್ಟಾಗುವುದು. ಬೊಂಬಾಯಿ ನಗರ ಸಭೆಯು ಆದಾಯವೊಂದೇ ಹೆಚ್ಚು ಕಡಮೆ ಮೈಸೂರು ಸಂಸ್ಥಾನದ ಆದಾಯದಷ್ಟಿದೆ. ಅಲ್ಲಿಯ ವಾರ್ಷಿಕ ವರಮಾನ ಸುಮಾರು ಮೂರುಕೋಟಿ ರೂಪಾಯಿ ಮೀರಿರುತ್ತೆ. ಕಲ್ಕತ್ತೆಯ ಸಭೆಗೆ ಎರಡು ಕೋಟಿ ರೂ. ಉತ್ಪತ್ತಿಯಿದೆ. ಇಷ್ಟಿದ್ದರೂ, ಪಾಶ್ಚಾತ್ಯದೇಶಗಳಲ್ಲಿ, ಇಷ್ಟೇ ಜನಸಂಖ್ಯೆಯುಳ್ಳ ಗ್ಲಾಸ್ಗೋ ಮೊದಲಾದ ಪಟ್ಟಣಗಳ ವರಮಾನ ಇದರ ಹನ್ನೆರಡರಷ್ಟಿರುತ್ತದೆ.

ಜಪಾನ್ ದೇಶದಲ್ಲಿ ೧೯೧೪ರಿಂದ ೧೯೩೦ರ ಒಳಗೆ ಎಂದರೆ ಹದಿನಾರು ವರ್ಷಗಳಲ್ಲಿ, ಸ್ಥಳೀಯ ಸರಕಾರಗಳ ವೆಚ್ಚ ಸುಮಾರು ೪೧ ಕೋಟಿ ರೂಪಾಯಿಗಳಿಂದ ೨೯ ಕೋಟಿ ರೂಪಾಯಿಗಳಿಗೆ ಏರಿತು. ಜಪಾನಿನ ಐದರಷ್ಟು ಪ್ರಜಾಸಂಖ್ಯೆಯುಳ್ಳ ಇಂಡಿಯಾ ದೇಶದಲ್ಲಿ ಅದೇ ಕಾಲದಲ್ಲಿ ಸ್ಥಳೀಯ ಸಂಸ್ಥೆಗಳ ವೆಚ್ಚ ಸುಮಾರು ೨೬ ಕೋಟಿ ರೂಪಾಯಿ ಇದ್ದುದು ೫೪ ಕೋಟಿ ರೂಪಾಯಿಯಷ್ಟಾಯಿತು. ೧೯೨೭-೨೮ನೆಯ ಇಸವಿಯಲ್ಲಿ ಅಮೆರಿಕದ ಸ್ಥಳೀಯ ಸಂಸ್ಥೆಗಳ ವೆಚ್ಚ ೧೮೭೪ ಕೋಟಿ ರೂಪಾಯಿಗಳಷ್ಟಿತ್ತು. ೧೯೨೭-೨೮ರಲ್ಲಿ ಸ್ಥಳೀಯ ಸರಕಾರದ ವೆಚ್ಚ ಸರಾಸರಿ ತಲೆಯೊಂದಕ್ಕೆ ೧೫೦ರೂ ಗಳಷ್ಟಾಗಿತ್ತು. ೧೯೨೭-೨೮ರಲ್ಲಿ ಇಂಡಿಯಾದ ಪೌರಸಭೆಗಳ ಮತ್ತು ಇತರ ಎಲ್ಲ ಸ್ಥಳೀಯ ಸಂಸ್ಥೆಗಳ ಆದಾಯವೂ, ಲಂಡನ್ ಪಟ್ಟಣದ ಕೌಂಟಿ ಕೌನ್ಸಿಲ್ ಎಂಬ ಒಂದು ಪೌರಸಭೆಯ ಒಟ್ಟು ಆದಾಯಕ್ಕಿಂತ ಸ್ವಲ್ಪ ಹೆಚ್ಚಾಗಿದೆಯೆಂದು ಸೈಮನ್ ಕಮಿಷನ್‌ರವರು ಅಭಿಪ್ರಾಯಪಟ್ಟರು. ಇಂಡಿಯಾ ದೇಶದಲ್ಲಿನ ಸ್ಥಳೀಯ ಸಂಸ್ಥೆಗಳ ಹಣಕಾಸಿನ ಸ್ಥಿತಿ ಬಹು ಕಡಿಮೆ ಮಟ್ಟದಲ್ಲಿರುವುದಕ್ಕೆ ಕಾರಣ ವೇನೆಂದು ಪರಿಶೀಲಿಸಬೇಕಾದುದು ಮುಖ್ಯ ಕರ್ತವ್ಯ.

ಈ ಸ್ಥಳೀಯ ಸರಕಾರಗಳು ಬೆಳೆದು ಪ್ರಬಲವಾಗಲು ಆರಂಭವಾದುದು ನಮ್ಮ ದೇಶದಲ್ಲಿ ಇತ್ತೀಚೆಗೆ. ಅದರಲ್ಲೂ ಮ್ಯಾಂಟ'ಫರ್ಡ್ ಸುಧಾರಣೆಗಳು ಜಾರಿಗೆ ಬಂದು, ಬ್ರಿಟಿಷ್ ಇಂಡಿಯಾ ಪ್ರಾಂತಗಳಲ್ಲಿ ಈ ಶಾಖೆಯ ಆಡಳಿತ, ಪ್ರಜಾಪ್ರತಿನಿಧಿ ಮಂತ್ರಿಗಳ ಕೈಗೆ ಬಂದಮೇಲೆ ಇವು ಪ್ರಾಮುಖ್ಯಕ್ಕೆ ಬಂದವು. ಇಲ್ಲಿಯ ಸ್ಥಳೀಯ ಸಂಸ್ಥೆಗಳು ನಿರ್ವಹಿಸಬೇಕಾದ ನಾನಾ ವಿಧವಾದ ಕಾರ್ಯಭಾರಗಳಿಗೆ, ಅವುಗಳಿಗಿರುವ ಆದಾಯ ಎಳ್ಳಷ್ಟೂ ಸಾಲದು. ದ್ರವ್ಯ ಸಹಾಯ ಬಲಗೊಂಡ ಹೊರತು ಈ ಸಂಸ್ಥೆಗಳ ಆಡಳಿತದಲ್ಲಿ ಸಾಮರ್ಥ್ಯವೂ ಅಧಿಕ ಪ್ರಯೋಜನವೂ ಕಂಡು ಬಾರದು.

ಸ್ಥಳೀಯ ಸರಕಾರಗಳಿಗೆ ಬೇಕಾದ ಹಣಕ್ಕೆ ಸಾಧನ ಸಂಪತ್ತಿಯಿಲ್ಲದಿರುವುದಕ್ಕೆ ಕಾರಣ ಒಂದೇ ಒಂದು. ಸಾಮಾನ್ಯವಾಗಿ ಜನರು ಬಡವರು. ತೆರಿಗೆಗಳನ್ನು ತೆರಲು ಅವರಿಗೆ ಶಕ್ತಿಯಿಲ್ಲ. ಈ ಅಂಶವು ನಮ್ಮ ದೇಶದ ಆದಾಯವನ್ನೂ, ಇತರ ದೇಶದ ಆಸ್ತಿಗಳೊಂದಿಗೆ ಹೋಲಿಸುವ ಈ ಪಟ್ಟಿಯಿಂದ ಸ್ಪಷ್ಟವಾಗುವುದು.

## ದೇಶದ ಆದಾಯ ಮತ್ತು ಸಂಪತ್ತು ಇದನ್ನು ಸೂಚಿಸುವ ಪಟ್ಟಿ

| ದೇಶದ ಹೆಸರು | ವರ್ಷ | ಪ್ರಜೆಗಳ ಆದಾಯ | | ವರ್ಷ | ದೇಶದ ಸಂಪತ್ತು | |
|---|---|---|---|---|---|---|
| | | ಒಟ್ಟು ರೂ. ಗಳು (ಕೋಟಿ ಲೆಕ್ಕ) | ಪ್ರಜಾ ಸಂಖ್ಯೆಗನುಸಾರವಾಗಿ ಸರಾಸರಿ ತಲೆಯೊಂದಕ್ಕೆ ರೂ. | | ಒಟ್ಟು ರೂ. ಗಳು (ಕೋಟಿ ಲೆಕ್ಕ) | ಸರಾಸರಿ ತಲೆಯೊಂದಕ್ಕೆ ರೂ. |
| (ಬ್ರಿಟಿಷ್) ಇಂಡಿಯಾ ... | ೧೯೩೨-೩೩ | ೨,೨೨೩ | ೮೨ | ೧೯೩೦ | ೧೨,೦೦೦ | ೪೪೧ |
| ಇಂಗ್ಲೆಂಡ್ ... | ೧೯೩೧ | ೪,೯೯೫ | ೧,೦೯೨ | ೧೯೨೫ | ೨೯,೪೩೨ | ೬,೩೭೧ |
| ಅಮೆರಿಕಾ ಸಂಯುಕ್ತ ಸಂಸ್ಥಾನಗಳು. | ೧೯೨೮ | ೨೪,೫೩೩ | ೨,೦೫೩ | ೧೯೨೮ | ೧,೧೨,೩೧೫ | ೯,೩೭೫ |
| ಕೆನಡಾ ... | ೧೯೩೦ | ೧,೩೧೯ | ೧,೨೬೮ | ೧೯೨೯ | ೮,೩೪೪ | ೮,೦೨೩ |
| ಫ್ರಾನ್ಸ್ ... | ೧೯೨೮ | ೨,೬೧೮ | ೬೩೬ | ೧೯೨೮ | ೧೮,೮೫೭ | ೪,೫೮೧ |
| ಜಪಾನ್ ... | ೧೯೨೮ | ೧,೪೧೭ | ೨೭೧ | ೧೯೨೪ | ೧೩,೬೪೫ | ೨,೦೩೮ |

ಆಯಾ ವರುಷದ ಧಾರಣೆವಾಸಿಗಳಲ್ಲಿನ ವ್ಯತ್ಯಾಸದಿಂದ, ಮತ್ತು ಆಯಾ ಕಾಲದ ದ್ರವ್ಯ ವಿನಿಮಯದಲ್ಲಿನ ಬದಲಾವಣೆಗಳಿಂದ ಮೇಲಿನ ಈ ಸಂಖ್ಯೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸವಿದ್ದರೂ, ಸ್ಥೂಲವಾಗಿ, ಇತರ ದೇಶಗಳೊಂದಿಗೆ ಹೋಲಿಸಿದರೆ ನಮ್ಮ ದೇಶದ ಸ್ಥಿತಿ ಹೇಗಿದೆಯೆಂಬುದನ್ನು ಸೂಚಿಸುತ್ತದೆ. ಇಂಡಿಯಾದಲ್ಲಿ ವರ್ಷ ಒಂದಕ್ಕೆ ಪ್ರಜೆಯ ಸರಾಸರಿ ಆದಾಯ ಸುಮಾರು ೮೨ ರೂಪಾಯಿ, ಜಪಾನಿನಲ್ಲಿ ೨೭೧, ಫ್ರಾನ್ಸ್‌ನಲ್ಲಿ ೬೩೬, ಇಂಗ್ಲೆಂಡಿನಲ್ಲಿ ೧,೦೯೨, ಕೆನಡಾದಲ್ಲಿ ೧,೨೬೮ ಮತ್ತು ಅಮೇರಿಕಾದಲ್ಲಿ ೨,೦೫೩. ಅಮೆರಿಕಾ ಪ್ರಜೆಯ ಸರಾಸರಿ ಆದಾಯ ಭಾರತೀಯನ ೨೫ರಷ್ಟು.

ಬ್ರಿಟಿಷ್ ಇಂಡಿಯಾ ಸಂಪತ್ತು ಸುಮಾರು ೧೨,೦೦೦ ಕೋಟಿ ರೂಪಾಯಿ. ಅಮೆರಿಕಾದ ಸಂಪತ್ತು ೧,೧೨,೩೧೫, ಕೋಟಿ ರೂ. ಗಳೆಂದು ಊಹಿಸಲಾಗಿದೆ. ಎಂದರೆ ಇಂಡಿಯಾ ದೇಶದ ಒಂಭತ್ತರಷ್ಟು. ಇಂಗ್ಲೆಂಡಿನ ಸಂಪತ್ತು ಇಂಡಿಯಾ ದೇಶದ ಎರಡೂವರೆಯಷ್ಟಿದೆ. ಈ ಅಂಕಿಗಳಿಂದ ಇಂಡಿಯಾ ದೇಶದ ಪ್ರಜೆ ತೆರಿಗೆಗಳನ್ನು ಕೊಡಲು ಸಮರ್ಥನಾಗಿಲ್ಲ, ಅವನಿಂದ ಸ್ಥಳೀಯ ಸರಕಾರಕ್ಕೆ ಹೆಚ್ಚು ವರಮಾನವನ್ನು ಈ ಸ್ಥಿತಿಯಲ್ಲಿ ಪಡೆಯಲು ಸಾಧ್ಯವಿಲ್ಲ ಎಂಬ ಅಂಶ ಸ್ಪಷ್ಟವಾಗುವುದು.

ಇದರ ಜತೆಗೆ, ಕೇಂದ್ರ, ಪ್ರಾಂತ, ಮತ್ತು ಸ್ಥಳೀಯ ಸರಕಾರಗಳ ವರಮಾನದ ಬಾಬುಗಳನ್ನು ನ್ಯಾಯವಾಗಿ, ಶಾಸ್ತ್ರೀಯವಾಗಿ ವಿಂಗಡನೆಮಾಡಿಲ್ಲ. ಸ್ಥಳೀಯ ಸರಕಾರಗಳ ಅಲ್ಪಾದಾಯಕ್ಕೆ ಇದೂ ಒಂದು ಕಾರಣ.

ಇಂಗ್ಲೆಂಡಿನಲ್ಲಿ ಭೂಕಂದಾಯದ ಬಹು ಭಾಗವು ಸ್ಥಳೀಯ ಸರಕಾರಗಳಿಗೆ ಸೇರುತ್ತದೆ. ಇತರ ದೇಶಗಳಲ್ಲಿ ಬಲವಾದ, ಸ್ವತಂತ್ರವಾದ ಚಿಕ್ಕಪುಟ್ಟ ಭಾಗಗಳು ಒಟ್ಟುಗೂಡಿ ಒಂದು ಕೇಂದ್ರ ಅಥವ ಸಂಯುಕ್ತ ಸರಕಾರವನ್ನು ನಿರ್ಮಿಸಿಕೊಂಡಿವೆ. ನಮ್ಮಲ್ಲಿ ಕೇಂದ್ರ ಸರಕಾರ ಆಡಳಿತ ಸೌಕರ್ಯಕ್ಕಾಗಿ ಸ್ಥಳೀಯ ಸಂಸ್ಥೆಗಳನ್ನು ಸೃಷ್ಟಿಸಿವೆ. ಹೀಗಾಗಿ ಕೇಂದ್ರ ಸರಕಾರ ಸ್ಥಳೀಯ ಸಂಸ್ಥೆಗಳಿಗೆ ಅಲ್ಪಸ್ವಲ್ಪವಾದ ಅಧಿಕಾರವನ್ನು, ಹಣಸಾಧನ ಸಂಪತ್ತನ್ನು ಒದಗಿಸಿಕೊಟ್ಟಿದೆ. ಹೆಚ್ಚು ಹೆಚ್ಚು ಸ್ಥಳೀಯ ಸಂಸ್ಥೆಗಳನ್ನು ಸ್ಥಾಪಿಸಿ, ಅದರ ವ್ಯಾಪ್ತಿಯನ್ನು ಹೆಚ್ಚು ಮಾಡಿದರೆ, ಅವುಗಳ ಹಣಕಾಸಿನ ಸ್ಥಿತಿ ಉತ್ತಮಗೊಳ್ಳಬಹುದು.

ಕೆಲವು ವರ್ಷಗಳ ಹಿಂದೆ ಇಂಡಿಯಾ ದೇಶದ ತೆರಿಗೆ ವಿಮರ್ಶೆ ಸಮಿತಿಯವರು (Indian Taxation Enquiry Committee) ಸ್ಥಳೀಯ ಸಂಸ್ಥೆಗಳ ಹಣಕಾಸಿನ ಸ್ಥಿತಿಯನ್ನು ಉತ್ತಮಗೊಳಿಸಲು ಈ ಕೆಳಗಿನ ಸಲಹೆಗಳನ್ನು ಮಾಡಿದರು :—

೧. ಭೂಕಂದಾಯದ ದರವನ್ನು ಕಡಮೆಮಾಡಿ, ತೆರಿಗೆ ಕ್ರಮದಲ್ಲಿ ಒಂದು ರೀತಿಯನ್ನು ಅನುಸರಿಸಬೇಕು. ಇದರಿಂದ ಭೂಸ್ವತ್ತಿನ ಮೇಲೆ ಸ್ಥಳೀಯ ಸರಕಾರಗಳಿಗೆ ತೆರಿಗೆ ಹಾಕಲು ಅವಕಾಶ ದೊರೆಯುತ್ತದೆ.

೨. ಪಟ್ಟಣಗಳಲ್ಲಿನ ಮನೆ ಮತ್ತು ನಿವೇಶನಗಳ ಮೇಲೆ ಪ್ರಾಂತ ಸರಕಾರ ವಸೂಲ್ಮಾಡುವ ಹಣದಲ್ಲಿಯೂ, ವ್ಯವಸಾಯೇತರ ಜಮೀನುಗಳ ಮೇಲಿನ ತೆರಿಗೆಯಲ್ಲೂ ಒಂದು ಭಾಗವನ್ನು ಸ್ಥಳೀಯ ಸರಕಾರಗಳಿಗೆ ಕೊಡಬೇಕು.

೩. ಪ್ರಕಟನೆಗಳ ಮೇಲೆ ತೆರಿಗೆ ಹಾಕುವುದಕ್ಕೆ ಸ್ಥಳೀಯ ಸಂಸ್ಥೆಗಳಿಗೆ ಅಧಿಕಾರ ಕೊಡಬೇಕು.

೪. ಜೂಜು (Betting) ಮತ್ತು ವಿನೋದ (Entertainment) ಗಳ ಮೇಲಿನ ತೆರಿಗೆಯನ್ನು ಹೆಚ್ಚು ಮಾಡಬೇಕು. ಇದರಲ್ಲಿನ ಒಂದು ಭಾಗವನ್ನು ಸ್ಥಳೀಯ ಸಂಸ್ಥೆಗಳಿಗೆ ಕೊಡಬೇಕು.

೫. ಆಸ್ತಿ ಪಾಸ್ತಿಗಳು, ವೃತ್ತಿ ಇವೇ ಮೊದಲಾದವುಗಳ ಮೇಲೆ ಹೆಚ್ಚು ತೆರಿಗೆಯನ್ನು ಹಾಕಿ, ಅದನ್ನು ಸರಿಯಾಗಿ ವಸೂಲ್ಮಾಡಲು ತಕ್ಕ ಆಡಳಿತ ಶಿಸ್ತನ್ನು ಏರ್ಪಡಿಸಬೇಕು.

೬. ಮೋಟಾರು ವಾಹನಗಳ ಮೇಲಿನ ಸುಂಕವನ್ನು ಕಡಿಮೆ ಮಾಡಬೇಕು. ಇದರಿಂದ ಪ್ರಾಂತ ಸರಕಾರಗಳು ಸುಂಕ ಹಾಕಿ, ಆಯಾ ಪ್ರಾಂತಗಳ ಸ್ಥಳೀಯ ಸಂಸ್ಥೆಗಳಿಗೆ ಅದರ ಉತ್ಪತ್ತಿಯನ್ನು ಹಂಚಲು ಅನುಕೂಲವಾಗುವುದು.

೭. ವಿವಾಹಗಳನ್ನು ರಿಜಿಸ್ಟರು ಮಾಡುವ ಸಂಪ್ರದಾಯವುಳ್ಳ ಕಡೆ, ಅದಕ್ಕೆ ವಿಧಿಸುವ ತೆರಿಗೆಯನ್ನು ಸ್ಥಳೀಯ ಸಂಸ್ಥೆಗಳು ಪಡೆಯುವಂತೆ ಮಾಡಬೇಕು.

೮. ದೇಶದ ಹಿತದ ದೃಷ್ಟಿಯಿಂದ ಸ್ಥಳೀಯ ಸರಕಾರಗಳು ಮಾಡುವ ಕೆಲಸಗಳಿಗಾಗಿ ಪ್ರಾಂತ ಮತ್ತು ಕೇಂದ್ರ ಸರಕಾರಗಳು ಹೆಚ್ಚಿನ ದ್ರವ್ಯ ಸಹಾಯ ವನ್ನು ಒದಗಿಸಬೇಕು.

ಇವುಗಳ ಜತೆಗೆ ಆಯಾ ಸ್ಥಳದಲ್ಲಿನ ವ್ಯಾಪಾರೋದ್ಯಮಗಳನ್ನು ಅಭಿವೃದ್ಧಿ ಗೊಳಿಸುವುದರಿಂದ ಆದಾಯವನ್ನು ಸ್ಥಳೀಯ ಸಂಸ್ಥೆಗಳು ಪಡೆಯಬಹುದು. ತೆರಿಗೆಯ ಆದಾಯವನ್ನೆ ನಂಬಿಕೊಂಡು ಇರುವುದರ ಬದಲು ಇತರ ವಿಧವಾದ ಮಾರ್ಗಗಳಲ್ಲಿ ಹಣವನ್ನು ಪಡೆಯಲು ಏರ್ಪಾಡು ಮಾಡಬೇಕು. ಪಾಶ್ಚಾತ್ಯ ದೇಶಗಳಲ್ಲಿ ಪೌರಸಭೆಗಳ ಕ್ಷ್ಯಾರಕ್ಷೇತ್ರ ಬಹುವಿಸ್ತಾರವಾಗಿವೆ. ಅಲ್ಲಿ ಟ್ರಾಂವೆ, ನೀರು, ವಿದ್ಯುಚ್ಛಕ್ತಿ ಇವುಗಳ ಜತೆಗೆ ಸ್ನಾನಘಟ್ಟಗಳು, ಸ್ಮಶಾನ, ಮೀನು ಹಿಡಿಯುವುದು, ನಾಟಕ ಮಂದಿರಗಳು, ಹೋಟೆಲ್‌ಗಳು, ಕಾರ್ಖಾನೆಗಳು ಗೋಶಾಲೆಗಳು ಇವುಗಳಿಂದ ಬೇಕಾದಷ್ಟು ವರಮಾನ ಬರುತ್ತದೆ. ಇಂತಹ ಕಾರ್ಯಗಳಿಂದ ಪ್ರಜೆಗಳಿಗೂ ಸೌಕರ್ಯ; ಆ ಸ್ಥಳೀಯ ಸರಕಾರಕ್ಕೂ ಆದಾಯ ನಮ್ಮ ದೇಶದಲ್ಲಿ ಸ್ಥಳೀಯ ಸರಕಾರದ ಹಣಕಾಸಿನ ಸರಿಯಾದ ಕಡೆಗೆ ಗಮನ ಕೊಡದಿರುವುದು ಶೋಚನೀಯವಾದ ಅಂಶ.

---

# ಪ್ರಕರಣ ೨೩

## ದೇಶೀಯ ಸಂಸ್ಥಾನಗಳ ಹಣಕಾಸು *

ವಿಸ್ತೀರ್ಣದಲ್ಲಿ ಐದರಲ್ಲಿ ಎರಡರಷ್ಟು ಜನಸಂಖ್ಯೆಯಲ್ಲಿ ಐದರಲ್ಲಿ ಒಂದು ಭಾಗದಷ್ಟು ಇರುವ ದೇಶೀಯ ಸಂಸ್ಥಾನಗಳ ಸರಕಾರದ ಹಣಕಾಸಿನ ಸ್ಥಿತಿ ಹೇಗಿದೆ ಎಂಬುದನ್ನು ಪರಿಶೀಲಿಸಿದ ಹೊರತು ಇಂಡಿಯಾದ ಹಣಕಾಸಿನ ವಿಷಯವನ್ನು ಪೂರ್ತಿಯಾಗಿ ತಿಳಿದಂತಾಗುವುದಿಲ್ಲ. ನಮ್ಮ ದೇಶದ ದೇಶೀಯ ಸಂಸ್ಥಾನಗಳಲ್ಲಿ ಮುಖ್ಯವಾದ ಕೆಲವು, ಪ್ರತಿವರ್ಷವೂ, ಕೇಂದ್ರ ಮತ್ತು ಪ್ರಾಂತ ಸರಕಾರಗಳಂತೆಯೇ ತಮ್ಮ ಆಯವ್ಯಯ ಪಟ್ಟಿಯನ್ನು ತಯಾರ್ಮಾಡಿ ಆಯಾ ಸಂಸ್ಥಾನದಲ್ಲಿನ ಶಾಸನ ಸಭೆಯ ಅಥವಾ ಪ್ರಜಾಪ್ರತಿನಿಧಿ ಸಭೆಯ ಅವಗಾಹನೆಗೆ ತರುವ ಪದ್ಧತಿಯನ್ನಿಟ್ಟುಕೊಂಡಿವೆ. ಈ ಕ್ರಮವನ್ನು ತಮ್ಮ ಆಯವ್ಯಯ ರೀತಿಯಲ್ಲಿ ಅನುಸರಿಸಿಕೊಂಡು ಬಂದಿರುವುವು ಹೈದರಾಬಾದು, ಮೈಸೂರು, ತಿರುವಾಂಕೂರು, ಕಾಶ್ಮೀರ, ಬರೋಡ, ಕೊಚಿನ್, ಇಂದೂರು ಮತ್ತು ಬಿಕನೀರು ಮೊದಲಾದ ಸಂಸ್ಥಾನಗಳು. ಇನ್ನುಳಿದ ಸಂಸ್ಥಾನಗಳಲ್ಲಿ ಇದೇ ವಿಧವಾದ ರಾಜಕೀಯ ಶಿಸ್ತು ಇಲ್ಲದಿರುವುದರಿಂದಲೂ, ಅಲ್ಲಿಯ ಆಯವ್ಯಯದ ಅಂಕಿಗಳು ದೊರೆಯುವುದು ಕಷ್ಟವಾದುದರಿಂದಲೂ, ಅವುಗಳ ವಿಷಯವನ್ನಿಲ್ಲಿ ಪ್ರಸ್ತಾಪಿಸಿಲ್ಲ. ಅಲ್ಲದೆ, ದೇಶಿಯ ಸಂಸ್ಥಾನಗಳಲ್ಲಿ ಆಡಳಿತ ದೃಷ್ಟಿಯಿಂದ ಮುಂದುವರಿದ ಸಂಸ್ಥಾನಗಳೆಂದರೆ, ಮೈಸೂರು, ತಿರುವಾಂಕೂರು, ಹೈದರಾಬಾದು, ಕಾಶ್ಮೀರ ಮೊದಲಾದ ಕೆಲವು ರಾಜ್ಯಗಳು ಮಾತ್ರ. ಅಲ್ಲಿಯ ಹಣಕಾಸಿನ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸುವುದರಿಂದ ದೇಶೀಯ ಸಂಸ್ಥಾನಗಳ ಹಣಕಾಸಿನ ಸ್ಥಿತಿ ಮತ್ತು ಸ್ವರೂಪ ಹೇಗಿವೆಯೆಂಬುದು ಮನಗಾಣುತ್ತದೆ. ವರಮಾನದ ದೃಷ್ಟಿಯಿಂದಲೂ ಮೇಲೆ ಸೂಚಿಸಿದ ಸಂಸ್ಥಾನಗಳು ಮುಖ್ಯವಾದುವೆನ್ನಬಹುದು. ಈ ಸಂಸ್ಥಾನಗಳ ಪ್ರಜಾಸಂಖ್ಯೆ ಸುಮಾರು ೩ ಕೋಟಿ ೫೦ ಲಕ್ಷ. ಎಂದರೆ ಒಟ್ಟು ಸಂಸ್ಥಾನಗಳ ಪ್ರಜಾಸಂಖ್ಯೆಯಲ್ಲಿ ಶೇಕಡ ೪೩ರಷ್ಟು. ಇವುಗಳ ರಾಜಾದಾಯ ೨೨.೭೩ ಕೋಟಿ ರೂಪಾಯಿಗಳು. ಇದು ದೇಶೀಯ ಸಂಸ್ಥಾನಗಳ ಒಟ್ಟು ರಾಜಾದಾಯದಲ್ಲಿ ಶೇ. ೪೧ರಷ್ಟಾಗುವುದು. ಈ ಸಂಸ್ಥಾನಗಳ ಆಡಳಿತ ವ್ಯವಸ್ಥಿತವಾಗಿ

---

* ಡಾ|| ಪಿ. ಜೆ. ಥಾಮಸ್ ಅವರ "ದೇಶೀಯ ಸಂಸ್ಥಾನಗಳ ಹಣಕಾಸು" ಎಂಬ ಇಂಗ್ಲಿಷ್ ಪ್ರಬಂಧದ ಆಧಾರದ ಮೇಲೆ ಬರೆದಿದೆ. ಇಂಡಿಯಾ ದೇಶಕ್ಕೆ ೧೯೪೭ರಲ್ಲಿ ದೊರೆತ ಸ್ವತಂತ್ರ ರಾಜಕೀಯ ಶಿಸ್ತಿಗೆ ಅನುಗುಣವಾಗಿ ಸಂಸ್ಥಾನಗಳ ರಾಜಕೀಯ ಸ್ಥಾನವು ಸಂಪೂರ್ಣ ಬದಲಾವಣೆ ಹೊಂದಿರುತ್ತದೆ. ಹಣಕಾಸಿನ ವ್ಯವಸ್ಥೆಯೂ ಬದಲಾಯಿಸಿದೆ.

ಒಂದು ಶಿಸ್ತಿನಿಂದ ನಡೆಯುತ್ತಿರುವುದರಿಂದಲೂ, ಆ ಸರಕಾರಗಳು ವರ್ಷೇ ವರ್ಷೇ ಆಯುವ್ಯಯ ಪಟ್ಟಿಗಳನ್ನು ತಯಾರ್ಮಾಡುತ್ತಿರುವುದರಿಂದಲೂ, ಅಲ್ಲಿಯ ಆಯು ವ್ಯಯವಿಷ್ಟೇ ಎಂದು ಹೇಳಲು ನಮಗೆ ಅವಕಾಶವಿದೆ. ಆದರೆ ಆಯುವ್ಯಯ ಪಟ್ಟಿಗಳನ್ನು ತಯಾರ್ಮಾಡುವುದರಲ್ಲಿ ಈ ಎಲ್ಲ ಸಂಸ್ಥಾನಗಳೂ ಒಂದೇ ವಿಧವಾದ ಮಾರ್ಗವನ್ನು ಅನುಸರಿಸುತ್ತಿಲ್ಲ. ಅವು ಸೂಚಿಸುವ ಆದಾಯ ಮತ್ತು ವೆಚ್ಚದ ಬಾಬುಗಳು ಒಂದೊಂದರಲ್ಲಿ ಒಂದು ವಿಧವಾಗಿ ಇರುತ್ತವೆ. ಇದರಿಂದ ಒಂದು ಬಡ್ಜೆಟ್ಟನ್ನು ಇನ್ನೊಂದು ಬಡ್ಜೆಟ್ಟಿನೊಂದಿಗೆ ಹೋಲಿಸುವುದು ಸಾಧ್ಯವಿಲ್ಲದೆ ಹೋಗು ವುದು. ದೇಶೀಯ ಸಂಸ್ಥಾನಗಳಲ್ಲಿ ಬಹುಭಾಗ ಇಂಡಿಯಾ ಸರಕಾರದ ರೂಪಾಯಿ ಯನ್ನೇ ನಾಣ್ಯವಾಗಿ ಭಾವಿಸಿದ್ದರೂ, ಹೈದರಾಬಾದು, ತಿರುವಾಂಕೂರು ಮೊದಲಾ ದುವು ತಮ್ಮ ಸ್ವಂತ ಟಂಕಸಾಲೆಗಳನ್ನಿಟ್ಟುಕೊಂಡು ನಾಣ್ಯಗಳನ್ನು ಛಾಪಿಸುತ್ತವೆ. ಹೈದರಾಬಾದಿನ ನಾಣ್ಯಕ್ಕೆ ಸುಮಾರು ೧೩ ಆಣೆ ಬೆಲೆಯಿದೆ. ತಿರುವಾಂಕೂರಿನ ರೂಪಾಯಿಯ ಬೆಲೆ ೦-೧೫-೯. ಕೆಲವು ಬಡ್ಜೆಟ್‌ಗಳಲ್ಲಿ ಸರಕಾರದ ವಾಣಿಜ್ಯೋ ದ್ಯಮಗಳಿಂದ ಮತ್ತು ಕೈಗಾರಿಕೆಗಳಿಂದ ಉತ್ಪತ್ತಿಯಾದ ವರಮಾನದ ಬಾಬಿನಲ್ಲಿ ಆಯಾ ಬಾಬುಗಳಿಗೆ ಆಗಬೇಕಾದ ಖರ್ಚು ಕಳೆದು, ನಿವ್ವಳ ಆದಾಯವನ್ನು ತೋರಿಸುತ್ತಾರೆ. ಇನ್ನು ಕೆಲವು ಸಂಸ್ಥಾನಗಳಲ್ಲಿ ಆ ಬಾಬುಗಳಿಂದ ಬರುವ ವರ ಮಾನವನ್ನು ಆದಾಯದ ಕಡೆಯೂ, ಅದಕ್ಕಾಗಿ ತಗಲುವ ವೆಚ್ಚವನ್ನು ವ್ಯಯದ ಕಡೆಯೂ ತೋರಿಸುವ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದಾರೆ. ಕೆಲವು ಸಂಸ್ಥಾನಗಳಲ್ಲಿ ರಾಜವಂಶನದವರಿಗಾಗಿ ಕೊಡುವ ದ್ರವ್ಯವನ್ನು ಅರಮನೆಯ ಖರ್ಚು ಬಾಬಿನಲ್ಲಿ ತೋರಿಸುತ್ತಾರೆ. ಇನ್ನು ಕೆಲವು ಸಂಸ್ಥಾನ ಗಳಲ್ಲಿ ಇದನ್ನು ರಾಜಕೀಯ ವೆಚ್ಚವೆಂದು ಗುರುತಿಸುತ್ತಾರೆ.

ಹೀಗೆ, ಅವರು ತಯಾರ್ಮಾಡುವ ಬಡ್ಜೆಟ್‌ಗಳಲ್ಲಿ ಅಲ್ಲಲ್ಲಿ ವ್ಯತ್ಯಾಸಗಳು ಕಂಡುಬರುವುದರಿಂದ ಈ ಆಯುವ್ಯಯ ಪಟ್ಟಿಗಳನ್ನು ಸೂಕ್ಷ್ಮವಾಗಿ ಒಂದಕ್ಕೊಂದು ಹೋಲಿಸಿ ತುಲನಮಾಡಲಾಗದು. ಆದರೂ ಈ ಬಡ್ಜೆಟ್‌ಗಳ ಅವಲೋಕನದಿಂದ ಆಯಾ ಸಂಸ್ಥಾನದ ಸರಕಾರಗಳ ಹಣಕಾಸಿನ ಪರಿಸ್ಥಿತಿ ತಿಳಿದು ಬರುವುದರಲ್ಲಿ ಸಂದೇಹವಿಲ್ಲ.

ಈ ಕೆಳಗಿನ ತಃಖ್ತೆಯಲ್ಲಿ ಮೇಲೆ ಸೂಚಿಸಿದ ಕೆಲವು ಮುಖ್ಯ ಸಂಸ್ಥಾನಗಳ ಉತ್ಪತ್ತಿಯನ್ನು ತೋರಿಸುವ ಅಂಕಿಗಳು ೧೯೩೮-೩೯ ನೆಯ ಸಂವತ್ಸರದ್ದು :—

(i) ಲಕ್ಷ ರೂಪಾಯಿಗಳು

(ii) ಒಟ್ಟು ಹುಟ್ಟುವಳಿಯಲ್ಲಿ ಶೇಕಡ ಭಾಗ

| ನಂ | ಬಾಬುಗಳು | ಹೈದರಾಬಾದ್ | ಮೈಸೂರು | ತಿರುವಾಂಕೂರು |
|---|---|---|---|---|
| ೧ | ಭೂಕಂದಾಯ | ೩೧೩.೦೦<br>೩೬.೩೪ | ೧೧೬.೦೯<br>೨೯.೩೦ | ೩೪.೯೮<br>೧೩.೭೮ |
| ೨ | ಸುಂಕ | ೧೧೦.೦೦<br>೧೨.೭೭ | ..<br>... | ೪೮.೭೩<br>೧೯.೨೦ |
| ೩ | ಆದಾಯ ತೆರಿಗೆ | ...<br>... | ೨೮.೨೦<br>೭.೧೨ | ೧೦.೪೦<br>೪.೦೦ |
| ೪ | ಎಕ್ಸೈಜ್ | ೨೧೬.೦೦<br>೨೫.೦೮ | ೬೬.೦<br>೧೬.೬೬ | ೭೩.೬೮<br>೨೯.೦೩ |
| ೫ | ಸ್ಟ್ಯಾಂಪು | ೨೦.೦೦<br>೨.೩೨ | ೧೮.೩೦<br>೪.೬೨ | ೨೦.೧೩<br>೭.೯೩ |
| ೬ | ರಿಜಿಸ್ಟ್ರೇಷನ್ | ೩.೩೦<br>೦.೩೮ | ೩.೦೪<br>೦.೭೭ | ೪.೫೫<br>೧.೭೭ |
| ೭ | ಅರಣ್ಯ | ೧೪.೪೦<br>೧.೬೭ | ೨೬.೨೪<br>೬.೬೨ | ೧೪.೯೭<br>೫.೯೦ |
| ೮ | ಬಡ್ಡಿ | ೩೦.೮೯<br>೩.೭೦ | ೧೯.೭೦<br>೪.೯೮ | ೧೮.೪೭<br>೭.೨೮ |
| ೯ | ಆಡಳಿತ | ೨೨.೪೩<br>೨.೬೦ | ೧೭.೨೬<br>೪.೩೬ | ೨೬.೪೮<br>೧೦.೪೩ |
| ೧೦ | ರಾಜಕೀಯ ಆದಾಯ—ಕಪ್ಪ, ಕರ. | ೨೯.೧೬<br>೩.೩೯ | ... | ... |
| ೧೧ | ವ್ಯಾಪಾರೋದ್ಯಮಗಳ—ನಿವ್ವಳ ಆದಾಯ. | ೧೧೧.೦೯<br>೧೧.೭೪ | ೧೦೧.೩೨<br>೨೫.೫೭ | ೧.೪೦<br>೦.೫೫ |
| | ಒಟ್ಟು | ೮೬೧.೨೮ | ೩೯೬.೨೨ | ೨೫೩.೮೨ |

| ಸಂಖ್ಯೆ | ಬಾಬುಗಳು | ಬರೋಡ | ಜಮ್ಮು ಮತ್ತು ಕಾಶ್ಮೀರ | ಕೊಚ್ಚಿನ್ |
|---|---|---|---|---|
| ೧ | ಭೂಕಂದಾಯ | ೮೨.೦೦ | ೭೩.೮೬ | ೧೧.೯೬ |
| | | ೩೬.೩೨ | ೨೭.೫ | ೧೨.೩೮ |
| ೨ | ಸುಂಕ | ೧೬.೫೦ | ೬೫.೭೪ | ೨೫.೨೭ |
| | | ೭.೩೧ | ೨೮.೩೨ | ೨೬.೬೨ |
| ೩ | ಆದಾಯ ತೆರಿಗೆ | ೬.೨೦ | ೨.೮೬ | ೭.೮೧ |
| | | ೨.೭೫ | ೧.೩೨ | ೮.೦೯ |
| ೪ | ಎಕ್ಸೈಜ್ | ೩೪.೬೩ | ೩.೨೪ | ೨೦.೯೩ |
| | | ೧೫.೨೨ | ೧.೪೦ | ೨೧.೬೭ |
| ೫ | ಸ್ಟ್ಯಾಂಪು | ೧೦.೪೫ | ೬.೭೧ | ೫.೪೭ |
| | | ೪.೬೩ | ೨.೮೯ | ೫.೬೭ |
| ೬ | ರಿಜಿಸ್ಟ್ರೇಷನ್ | ೧.೭೫ | ... | ೧.೨೧ |
| | | ೦.೭೮ | | ೧.೨೬ |
| ೭ | ಅರಣ್ಯ | ೩.೭೦ | ೫೦.೩೧ | ೪.೧೨ |
| | | ೧.೬೪ | ೨೧.೬೭ | ೪.೨೬ |
| ೮ | ಬಡ್ಡಿ | ೨೭.೨೫ | ೩.೬೬ | ೨.೫೦ |
| | | ೧೨.೦೭ | ೧.೫೮ | ೨.೬೦ |
| ೯ | ಆಡಳಿತ | ೧೫.೧೫ | ೩೦.೦೬ | ೧೦.೫೮ |
| | | ೬.೭೧ | ೧೨.೯೫ | ೧೧.೯೫ |
| ೧೦ | ರಾಜಕೀಯ ಆದಾಯ-ಕಪ್ಪ, ಕರ. | ೬.೨೫ | | ೦.೦೬ |
| | | ೨.೭೭ | ... | ೦.೦೮ |
| ೧೧ | ವ್ಯಾಪಾರೋದ್ಯಮಗಳ-ನಿವ್ವಳ ಆದಾಯ. | ೨೧.೮೬ | ೫.೭೧ | ೬.೬೫ |
| | | ೯.೬೮ | ೨.೪೬ | ೬.೮೯ |
| | ಒಟ್ಟು | ೨೨೫.೭೪ | ೨೩೨.೧೫ | ೯೬.೬೨ |

| ಸಂಖ್ಯೆ | ಬಾಬುಗಳು | ಇಂದೂರು | ಬಿಕನೀರ್ | ಷರಾ |
|---|---|---|---|---|
| | ಭೂಕಂದಾಯ | ೫೯.೧೭ | ೮.೮೩ | |
| | | ೪೯.೩೧ | ೧೦.೦೩ | |
| ೨ | ಸುಂಕ | ೧೫.೨೫ | ೧೭.೫೦ | |
| | | ೧೨.೭೧ | ೧೯.೮೮ | |
| ೩ | ಆದಾಯ ತೆರಿಗೆ | ... | ... | |
| ೪ | ಎಕ್ಸೈಜ್ | ೧೨.೭೦ | ೧೨.೦೩ | |
| | | ೧೦.೫೮ | ೧೩.೭೮ | |
| ೫ | ಸ್ಟ್ಯಾಂಪು | ೬.೫೦ | ೦.೮೫ | |
| | | ೫.೪೨ | ೦.೯೭ | |
| ೬ | ರಿಜಿಸ್ಟ್ರೇಷನ್ | ೦.೯೨ | ೦.೧೧ | |
| | | ೦.೦೮ | ೦.೧೩ | |
| ೭ | ಅರಣ್ಯ | ೪.೮೫ | ೦.೦೬ | |
| | | ೪.೦೧ | ೦.೦೭ | |
| ೮ | ಬಡ್ಡಿ | ೬.೦೦ | ೦.೨೦ | |
| | | ೫.೦೦ | ೦.೨೩ | |
| ೯ | ಅಡಳಿತ | ೭.೧೫ | ೧೩.೪೮ | |
| | | ೫.೯೬ | ೧೫.೩೨ | |
| ೧೦ | ರಾಜಕೀಯ ಆದಾಯ— ಕಪ್ಪ, ಕರ. | ೨.೩೧ | ... | |
| | | ೧.೯೩ | | |
| ೧೧ | ವ್ಯಾಪಾರೋದ್ಯಮಗಳ— ನಿವ್ವಳ ಆದಾಯ. | ೫.೧೫ | ೩೪.೮೪ | |
| | | ೪.೨೯ | ೩೯.೫೮ | |
| | ಒಟ್ಟು | ೧೨೦.೦೦ | ೮೮.೦೩ | |

## ಭೂಕಂದಾಯ

ಮೇಲಿನ ಪಟ್ಟಿಯನ್ನು ಅವಲೋಕಿಸಿದರೆ, ದೇಶೀಯ ಸಂಸ್ಥಾನಗಳಲ್ಲಿಯೂ ಇಂಡಿಯಾದ ಪ್ರಾಂತಗಳಂತೆಯೇ ರಾಜಾದಾಯದಲ್ಲಿ ಮುಖ್ಯವಾದ ಭಾಗ ಭೂಕಂದಾಯದಿಂದ ಬರುತ್ತಿದೆ ಎಂಬುದನ್ನು ಕಾಣುತ್ತೇವೆ. ಹೈದರಾಬಾದು ತನ್ನ ಒಟ್ಟು ಆದಾಯದಲ್ಲಿ ಶೇ. ೩೬ರಷ್ಟು, ಬರೋಡ ಶೇ. ೩೬ರಷ್ಟು, ಇಂದೂರು ಶೇ. ೪೯ರಷ್ಟು ರಾಜಾದಾಯವನ್ನು ಭೂಕಂದಾಯದಿಂದಲೇ ಪಡೆಯುತ್ತಿವೆ. ಈ ಸಂಸ್ಥಾನಗಳ ಅಕ್ಕಪಕ್ಕ ಪ್ರಾಂತಗಳಾದ ಮದರಾಸು, ಬೊಂಬಾಯಿ, ಬಂಗಾಳಗಳಲ್ಲಿ ಭೂಕಂದಾಯದ ವರಮಾನ ಶೇ. ೩೦, ೨೭, ೨೫ರಷ್ಟಿದೆ. ಆದರೆ ತಿರುವಾಂಕೂರು, ಕೊಚ್ಚಿನ್, ಮೊದಲಾದ ಸಮುದ್ರ ತೀರದಲ್ಲಿರುವ ಸಂಸ್ಥಾನಗಳಲ್ಲಿ ಭೂಕಂದಾಯದಿಂದ ಇಷ್ಟು ಉತ್ಪತ್ತಿ ಇಲ್ಲ. ಮುಕ್ಕಾಲು ಪಾಲು ಸಂಸ್ಥಾನಗಳಲ್ಲೆಲ್ಲಾ 'ರೈತವಾರಿ' ಪದ್ಧತಿ ಏರ್ಪಾಡಾಗಿದೆ. ಈ ಸಂಸ್ಥಾನಗಳಲ್ಲಿ ಸಾಧಾರಣವಾಗಿ ಭೂಕಂದಾಯದ ಹೊರೆ ಸರಾಸರಿ ಮೈಲಿಯೊಂದಕ್ಕೆ, ತಲೆಯೊಂದಕ್ಕೆ ಹೇಗಿದೆ ಎಂಬುದನ್ನು ಈ ಕೆಳಗಿನ ಪಟ್ಟಿ ಸೂಚಿಸುತ್ತದೆ. ಇದನ್ನು ಪ್ರಾಂತಗಳೊಂದಿಗೆ ಹೋಲಿಸಲು ಅನುಕೂಲವಾಗುವಂತೆ, ಮದರಾಸು ಮೊದಲಾದ ಕೆಲವು ಪ್ರಾಂತಗಳ ಅಂಕಿಗಳನ್ನು ಕೊಡಲಾಗಿದೆ.

| ದೇಶ | ಒಂದು ಚದರ ಮೈಲಿಗೆ | | | ತಲೆಯೊಂದಕ್ಕೆ | | |
|---|---|---|---|---|---|---|
| | ರೂ. | ಆ. | ಪೈ. | ರೂ. | ಆ. | ಪೈ. |
| ಹೈದರಾಬಾದು .... | ೩೭೮ | ೬ | ೫ | ೧ | ೧೨ | ೦ |
| ಮೈಸೂರು .... | ೩೯೬ | ೦ | ೦ | ೧ | ೧೨ | ೬ |
| ತಿರುವಾಂಕೂರು .... | ೪೫೮ | ೯ | ೭ | ೦ | ೧೧ | ೦ |
| ಬರೋಡ .... | ೧,೦೨೪ | ೦ | ೦ | ೩ | ೫ | ೧೧ |
| ಜಮ್ಮು ಮತ್ತು ಕಾಶ್ಮೀರ | ೭೫ | ೮ | ೬ | ೧ | ೧೨ | ೦ |
| ಕೊಚ್ಚಿನ್ .... | ೮೦೮ | ೧ | ೭ | ೧ | ೦ | ೦ |
| ಇಂದೂರು .... | ೫೯೭ | ೧ | ೭ | ೪ | ೮ | ೦ |
| ಬಿಕನೀರು .... | ೩೬೪ | ೧೨ | ೧೦ | ೦ | ೧೫ | ೦ |
| ಮದರಾಸು .... | ೩೪೨ | ೮ | ೦ | ೧ | ೧ | ೬ |
| ಬೊಂಬಾಯಿ .... | ೪೩೯ | ೧೧ | ೨ | ೧ | ೧೩ | ೯ |
| ಬಂಗಾಳ .... | ೩೮೪ | ೮ | ೦ | ೦ | ೧೦ | ೦ |

ಮೇಲಿನ ವಿವರದಿಂದ ವಿಸ್ತೀರ್ಣವನ್ನನುಸರಿಸಿ ತಲೆಯೊಂದಕ್ಕೆ ತಗಲುವ ಭೂಕಂದಾಯ ಇಂದೂರಿನಲ್ಲಿ ಬಹಳ ಹೆಚ್ಚಾಗಿದೆಯೆಂದೂ, ತಿರುವಾಂಕೂರಿನಲ್ಲಿ ಬಹಳ ಕಡಮೆಯಾಗಿದೆಯೆಂದೂ ಕಂಡುಬರುತ್ತದೆ. ಈ ರೀತಿ ಇರುವುದು ನ್ಯಾಯವೇ ಎಂಬುದನ್ನು ನಿರ್ಧರಿಸಬೇಕಾದರೆ, ಅಲ್ಲಿಯ ಸಾಗುವಳಿಯ

ವಿಧಾನ, ಸಾಗುವಳಿ ಜಮೀನಿನ ವಿಸ್ತೀರ್ಣ, ತರಿ ಮತ್ತು ಖುಷ್ಕಿ ಕಂದಾಯಗಳ ದರ ಇವುಗಳನ್ನು ಮೊದಲು ತಿಳಿಯಬೇಕಾಗುವುದು.

## ಸುಂಕಗಳು

ಭೂಕಂದಾಯಕ್ಕೆ ಎರಡನೆಯ ಅಂತಸ್ತಿನಲ್ಲಿರುವುದು ಸುಂಕದಿಂದ ಬರುವ ಉತ್ಪತ್ತಿ. ಸಾಮಾನ್ಯವಾಗಿ ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ಇರುವ ರಾಷ್ಟ್ರಗಳ ಲ್ಲೆಲ್ಲಾ ಈ ಸುಂಕದ ಬಾಬು ಸಂಯುಕ್ತ ಸರಕಾರಕ್ಕೇ ಸೇರುತ್ತದೆ. ಇಂಡಿಯಾದಲ್ಲಿ ಬರಲಿರುವ ಸಂಯುಕ್ತ ರಾಜ್ಯಕ್ಕೆ ದೇಶೀಯ ಸಂಸ್ಥಾನಗಳೆಲ್ಲವೂ ಕಡ್ಡಾಯವಾಗಿ ಸೇರಲೇಬೇಕೆಂಬ ನಿರ್ಬಂಧವಿಲ್ಲ. ಆದುದರಿಂದ ಈಗಿರುವಂತೆಯೇ ಮುಂದೆಯೂ ಸಹ ದೇಶೀಯ ಸಂಸ್ಥಾನಗಳು ಸ್ವತಂತ್ರವಾಗಿ ತಮ್ಮ ದೇಶಗಳಲ್ಲಿ ರಾಜಾದಾಯ ಕ್ಕಾಗಿ ಸುಂಕದಿಂದ, ಹಣವನ್ನೆತ್ತುವ ಏರ್ಪಾಡು ಇಟ್ಟುಕೊಂಡಿರಬಹುದು. ಸಮುದ್ರತೀರ ಸಂಸ್ಥಾನಗಳಾದ ತಿರುವಾಂಕೂರು, ಕೊಚ್ಚಿನ್, ಕಾಥೆವಾರ್ ಪ್ರಾಂತಗಳು, ಮತ್ತು ಒಳಗಣ ದೇಶಗಳಾದ ಹೈದರಾಬಾದು, ಕಾಶ್ಮೀರ ಮೊದಲಾದುವು ತಮ್ಮ ಒಟ್ಟು ಆದಾಯದಲ್ಲಿ ಬಹು ಭಾಗವನ್ನು, ಸುಮಾರು ೪·೫ ಕೋಟಿ ರೂ. ಗಳಷ್ಟು ಆದಾಯವನ್ನು ಸುಂಕವೊಂದರಿಂದಲೇ ಪಡೆಯು ತ್ತವೆ. ಮೈಸೂರು ಸಂಸ್ಥಾನದಲ್ಲಿಯೂ ಹಿಂದೆ ಸರಕಾರದ ಹುಟ್ಟುವಳಿಯ ಒಂದು ಭಾಗ ಸುಂಕದಿಂದ ಉತ್ಪತ್ತಿಯಾಗುತ್ತಿತ್ತು. ೧೮೬೫ರಲ್ಲಿ ಈ ಪದ್ಧತಿ ಕೊನೆಗೊಂಡಿತು. ಸಮುದ್ರತೀರಪ್ರದೇಶಗಳಾದ ತಿರುವಾಂಕೂರು, ಕೊಚ್ಚಿನ್ ಸಂಸ್ಥಾನಗಳು ಶೇ. ೧೯·೨, ೨೬·೬ರಷ್ಟು ಉತ್ಪತ್ತಿಯನ್ನು ಪಡೆಯುತ್ತವೆ. ಕಾಶ್ಮೀರ ಸಂಸ್ಥಾನದ ಆದಾಯದಲ್ಲಿ ಶೇ. ೨೮·೩ರಷ್ಟು ಈ ಬಾಬಿನಿಂದ ಉತ್ಪತ್ತಿಯಾಗುತ್ತದೆ. ಕಾಥೆವಾರ ಸಂಸ್ಥಾನಗಳು ತಮ್ಮ ಹುಟ್ಟುವಳಿಗಾಗಿ ಸುಂಕವನ್ನೇ ನಂಬಿಕೊಂಡಿವೆ ಎನ್ನಬಹುದು.

## ಆದಾಯದ ಮೇಲಿನ ತೆರಿಗೆ

ಮೇಲಿನ ಆದಾಯದ ಪಟ್ಟಿಯನ್ನು ನೋಡಿದರೆ ಕೆಲವು ಸಂಸ್ಥಾನಗಳಲ್ಲಿ ಆದಾಯ ತೆರಿಗೆಯ ಗಂಧವೇ ಇಲ್ಲವೆಂಬುದು ತೋರಿಬರುವುದು. ಹೈದರಾಬಾದು, ಇಂದೂರು ಮತ್ತು ಬಿಕನೀರು ಸಂಸ್ಥಾನಗಳಲ್ಲಿ ಈ ತೆರಿಗೆ ಇಲ್ಲ. ತೆರಿಗೆ ಇರುವ ಇನ್ನು ಕೆಲವು ದೇಶಗಳಲ್ಲಿನ ದರ ಅತ್ಯಲ್ಪ. ಈ ಸಂಸ್ಥಾನಗಳೆಲ್ಲಾ ಕೇವಲ ವ್ಯವಸಾಯವೇ ಪ್ರಧಾನ ವೃತ್ತಿಯುಳ್ಳ ಪ್ರದೇಶಗಳಾದುದರಿಂದ ಈ ತೆರಿಗೆಯನ್ನು ಅಲ್ಲಿ ಹಾಕದಿರಬಹುದು. ಅಷ್ಟೇ ಅಲ್ಲ—ಇನ್ನೂ ಕೆಲವು ಸಂಸ್ಥಾನಗಳಲ್ಲಿ ತೆರಿಗೆಯ ಕ್ರಮ ಒಂದು ಶಿಸ್ತಿಗೆ ಅಧೀನವಾಗಿಲ್ಲ. ತೆರಿಗೆ ಹಾಕುವುದರಲ್ಲಿ ಹಿಂದುಳಿದಿರುವ ದೇಶೀಯ ಸಂಸ್ಥಾನಗಳು ತಡಮಾಡದೆ ಒಂದು ಸರಿಯಾದ

ನೀತಿಯನ್ನು ಅನುಸರಿಸುವುದು ಒಳ್ಳೆಯದು. ಅನೇಕ ಸಂಸ್ಥಾನಗಳಲ್ಲಿ ನೂರಾರು ಎಕರೆ ಜಮೀನುಗಳ ಸ್ವಾಮ್ಯವನ್ನು ಪಡೆದು ಅದರಿಂದ ಬರುವ ಹೇರಳವಾದ ಉತ್ಪತ್ತಿಯನ್ನು ಅನುಭವಿಸುತ್ತಿರುವ ಶ್ರೀಮಂತರು ಅನೇಕ ರಿದ್ದಾರೆ. ಆದುದರಿಂದ ವ್ಯವಸಾಯೋತ್ಪನ್ನ ಆದಾಯದ ಮೇಲೂ ಸಂಸ್ಥಾನಗಳಲ್ಲಿಯೂ ತೆರಿಗೆಯನ್ನು ವಿಧಿಸುವುದು ಉಚಿತವೆನಿಸುವುದು.

ಆದಾಯ ತೆರಿಗೆಯನ್ನು ವಿಧಿಸಿರುವ ಸಂಸ್ಥಾನಗಳಲ್ಲಿ ತಲೆಯೊಂದಕ್ಕೆ ಆ ತೆರಿಗೆ ಹೇಗೆ ಹಂಚಿಕೆಯಾಗಿದೆ ಎಂಬುದನ್ನು ನೋಡಿ :—

| | | ರೂ. | ಅ. | ಪೈ |
|---|---|---|---|---|
| ಮೈಸೂರು | .... | ೦ | ೬ | ೧೧ |
| ತಿರುವಾಂಕೂರು | ... | ೦ | ೩ | ೩ |
| ಬರೋಡ | .... | ೦ | ೪ | ೧ |
| ಜಮ್ಮು ಮತ್ತು ಕಾಶ್ಮೀರ | ... | ೦ | ೧ | ೨ |
| ಕೊಚ್ಚಿನ್ | .... | ೦ | ೧೦ | ೫ |

ಇಂಡಿಯಾದ ಪ್ರಾಂತಗಳಲ್ಲಿ ಆದಾಯದ ತೆರಿಗೆ ತಲೆಯೊಂದಕ್ಕೆ ರೂ. ೦-೯-೮ ಅಷ್ಟಿದೆ. ಸಂಸ್ಥಾನಗಳಲ್ಲಿನ ಆದಾಯ ತೆರಿಗೆ ದರ ಕಡಿಮೆಯಾದುದರಿಂದ, ಇಂಡಿಯಾ ದೇಶದ ಪ್ರಾಂತಗಳಿಂದ ಹೇರಳವಾದ ಹಣ ಆ ಸಂಸ್ಥಾನಗಳಿಗೆ, ಕೈಗಾರಿಕೆ, ವ್ಯಾಪಾರ ಮತ್ತು ವಾಣಿಜ್ಯ ಈ ಉದ್ಯಮಗಳ ಮೂಲಧನಕ್ಕಾಗಿ ಹರಿದು ಬರುತ್ತಿದೆ ಎಂದು ಕೆಲವು ಅರ್ಥ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.

ಇತರ ರಾಜಕೀಯ ಬಾಬುಗಳಿಂದ ಎಂದರೆ ಕರ, ಕಪ್ಪ, ಪೊಗದಿಗಳಿಂದ ಹೆಚ್ಚು ಹಣ ವಸೂಲಾಗುವುದಿಲ್ಲ. ಇಂಡಿಯಾದ ಪ್ರಾಂತಗಳಲ್ಲಿ ದೊಡ್ಡ ಜಮೀನ್‌ದಾರಿಗಳಿರುವಂತೆಯೇ, ಸಂಸ್ಥಾನಗಳಲ್ಲಿಯೂ, ಸ್ವತಂತ್ರಾನುಭವಕ್ಕೆ ಸೇರಿದ ಜಹಗೀರು ಮೊದಲಾದುವುಗಳು ಇವೆ. ಅವುಗಳಿಂದ, ಕೆಲವು ಸಂಸ್ಥಾನಗಳ ರಾಜಾದಾಯದ ಒಂದು ಭಾಗ ಪೊಗದಿಯ ರೂಪದಲ್ಲಿ ಬರುತ್ತದೆ.

## ವ್ಯಾಪಾರ ಬಾಬುಗಳು

ಸಂಸ್ಥಾನಗಳಲ್ಲಿ ಕೆಲವು, ಈ ಬಾಬಿನಿಂದ ಹೆಚ್ಚು ಆದಾಯವನ್ನು ಪಡೆಯುತ್ತವೆ. ಮೈಸೂರು ಮತ್ತು ಬಿಕನೀರು ರಾಜ್ಯಗಳು ಈ ಬಾಬಿನಿಂದ ತಮ್ಮ ಒಟ್ಟು ಆದಾಯದಲ್ಲಿ ಶೇ. ೨೫.೫ ಮತ್ತು ೩೯.೫ರಷ್ಟು ಪಡೆಯುತ್ತವೆ. ಮೈಸೂರು ದೇಶ ಈ ವಿಷಯದಲ್ಲಿ ಭಾಗ್ಯಶಾಲಿಯಾದ ಸಂಸ್ಥಾನ. ಈ ಬಾಬಿನ ಆದಾಯದಲ್ಲಿ ವಿದ್ಯುಚ್ಛಕ್ತಿಯೊಂದರಿಂದಲೇ ಶೇ. ೧೧.೭ರಷ್ಟು ಉತ್ಪತ್ತಿ ಇದೆ. ಮತ್ತು ರೈಲ್ವೆಗಳಿಂದ ಶೇ. ೭ರಷ್ಟು. ಬಿಕನೀರು ಸಂಸ್ಥಾನದಲ್ಲಿ ರೈಲ್ವೆ ಮತ್ತು

ನೀರಾವರಿ ಬಾಬುಗಳಿಂದ ಶೇ. ೨೨ರಷ್ಟು ಆದಾಯ ಬರುತ್ತದೆ. ಹೈದರಾಬಾದು ಮತ್ತು ಬರೋಡ ಸಂಸ್ಥಾನಗಳಲ್ಲಿ ರೈಲ್ವೆಗಳಿಂದ ಶೇ. ೧೮·೯ ಮತ್ತು ಶೇ. ೭·೭ರಷ್ಟು ಆದಾಯವಿದೆ. ಇದನ್ನು ಪರ್ಯಾಲೋಚಿಸಿದರೆ ಕೆಲವು ಸಂಸ್ಥಾನಗಳು ಇಂಡಿಯಾ ದೇಶದ ಪ್ರಾಂತಗಳಿಗಿಂತ ಎಷ್ಟೋ ಮೇಲು ಅನ್ನುವಂತಿವೆ. ಇನ್ನೂ ಪ್ರಾಂತಗಳಲ್ಲಿ ವ್ಯಾಪಾರೋದ್ಯಮಗಳು ಎಷ್ಟು ಬೆಳೆಯಬೇಕೋ ಅಷ್ಟು ಬೆಳೆದಿಲ್ಲ. ಈ ಭಾಗದಲ್ಲಿ ಮೈಸೂರು ಆದರ್ಶಪ್ರಾಯವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ.

## ಇನ್ನು ವೆಚ್ಚದ ಮಾತು

ದೇಶೀಯ ಸಂಸ್ಥಾನಗಳೂ ಕೂಡ ಸರಕಾರ ಮಾಡಬೇಕಾದ, ದೇಶರಕ್ಷಣೆ, ನ್ಯಾಯ ಮತ್ತು ಶಿಸ್ತಿನ ಪಾಲನೆ, ಇವೇ ಮೊದಲಾದ ಮುಖ್ಯ ಕರ್ತವ್ಯಗಳಿಗಾಗಿಯೂ ವಿದ್ಯಾಭ್ಯಾಸ, ಕೈಗಾರಿಕೆ, ಆರೋಗ್ಯ ಶಾಖೆ ಮತ್ತು ವೈದ್ಯಸಹಾಯ ಇವೇ ಮೊದಲಾದ ದೇಶಾಭ್ಯುದಯ ಕಾರ್ಯಗಳಿಗಾಗಿಯೂ ವೆಚ್ಚ ಮಾಡುತ್ತವೆ. ಯಾವ ಬಾಬುಗಳಿಗಾಗಿ ಎಷ್ಟು ಹಣವನ್ನು ಈ ಮುಖ್ಯ ಸಂಸ್ಥಾನಗಳು ವೆಚ್ಚಮಾಡುತ್ತವೆ ಎಂಬುದನ್ನು ತಿಳಿಸುವುದಕ್ಕಾಗಿ ಕೆಲವು ಅಂಕಿಗಳನ್ನು ಇಲ್ಲಿ ಕೊಡಲಾಗಿದೆ.

[ಇಂಡಿಯಾ ದೇಶದಲ್ಲಿನ ದೇಶೀಯ ಸಂಸ್ಥಾನಗಳ

(i) ಲಕ್ಷ ರೂಪಾಯಿ

(ii) ಒಟ್ಟು ವೆಚ್ಚದಲ್ಲಿ

| ಸಂಖ್ಯೆ | ವೆಚ್ಚದ ಬಾಬುಗಳು | ಹೈದರಾಬಾದು | ಮೈಸೂರು | ತಿರುವಾಂಕೂರು |
|---|---|---|---|---|
| ೧ | ಸರ್ಕಾರದ ಆದಾಯವನ್ನು ಉತ್ಪತ್ತಿ ಮಾಡಲು ಖರ್ಚು. | ೧೫·೩೦<br>೧೬·೩೭ | ೪೯·೦೭<br>೧೨·೧೯ | ೩೦·೧೬<br>೧೧·೮೦ |
| ೨ | ಆಡಳಿತ | ೧೯೭·೫೮<br>೨೧·೧೪ | ೮೦·೮೯<br>೨೦·೦೯ | ೭೫·೪೫<br>೨೯.೫೨ |
| ೩ | ಅರಮನೆ | ೬೧·೯೭<br>೬.೬೩ | ೨೯·೨೬<br>೭·೨೭ | ೧೮·೭೦<br>೭·೩೨ |
| ೪ | ಸಾಲ | ೬೯·೭೨<br>೭·೪೬ | ೭೭·೧೮<br>೧೯·೧೭ | ೧೧·೮೯<br>೪·೬೫ |
| ೫ | ಸೈನ್ಯ | ೮೬·೧೬<br>೯·೨೨ | ೧೫ ೬೬<br>೩·೮೯ | ೧೦·೧೯<br>೩·೯೯ |
| ೬ | ವಿದ್ಯಾಭ್ಯಾಸ | ೯೯.೦೧<br>೧೦·೬೦ | ೫೪·೦೦<br>೧೩·೪೧ | ೫೦·೪೯<br>೧೯·೭೫ |
| ೭ | ಆರೋಗ್ಯ<br>ವೈದ್ಯ | ೩೩·೦೪<br>೩·೫೪ | ೧೯·೭೩<br>೪·೯೦ | ೧೪·೧೬<br>೫·೫೪ |
| ೮ | ವ್ಯವಸಾಯ<br>ಸಹಕಾರ, ಇತ್ಯಾದಿ | ೨೦·೫೦<br>೨·೧೯ | ೧೨·೭೧<br>೩·೧೬ | ೩·೩೧<br>೧·೩೦ |
| ೯ | ಕೈಗಾರಿಕೆ | ೩·೨೩<br>೦·೩೫ | ೨·೭೮<br>೦·೬೯ | ೧·೯೦<br>೦·೭೫ |
| ೧೦ | ಪಬ್ಲಿಕ್ ವರ್ಕ್ಸ್ | ೧೭೭·೫೨<br>೧೯·೩೫ | ೪೨·೧೭<br>೧೦·೪೮ | ೩೦·೭೫<br>೧೨·೦೩ |
| ೧೧ | ದಾನ, ಧರ್ಮಗಳು ಮತ್ತು ಹಿಂದುಳಿದ ಪಂಗಡಗಳಿಗೆ. | ... | ... | ೦·೪೮<br>೦·೧೯ |
| ೧೨ | ಕ್ಷಾಮ ನಿವಾರ್ಯ | ೩೨ ೬೭<br>೩·೫೦ | ... | ... |
| ೧೩ | ಫೋಗದಿ | ... | ೧೯·೧೧<br>೪·೭೫ | ೮·೧೦<br>೩ ೧೭ |
| | ಒಟ್ಟು | ೯೩೪·೪೮ | ೪೦೨·೬೦ | ೨೫೫·೬೪ |

ವೆಚ್ಚಗಳನ್ನು ತೋರಿಸುವ ಪಟ್ಟಿ ೧೯೩೮–೩೯.]

ಗಳು

ಶೇಕಡ ಭಾಗ

| ಬರೋಡ | ಜಮ್ಮು ಮತ್ತು ಕಾಶ್ಮೀರ | ಕೊಚ್ಚಿನ್ | ಇಂದೂರು | ಬಿಕಾನೀರ್ |
|---|---|---|---|---|
| ೨೭·೭೨ | ೨೮·೬೧ | ೧೦·೩೬ | ೧೬·೬೩ | ೮·೭೦ |
| ೧೨·೩೮ | ೧೨.೪೭ | ೧೦·೮೪ | ೧೩·೯೭ | ೧೩·೧೫ |
| ೫೫·೨೮ | ೭೦·೮೭ | ೨೩·೨೦ | ೩೮·೮೦ | ೧೭·೬೮ |
| ೨೪·೬೯ | ೩೦ ೮೮ | ೨೪·೨೬ | ೩೨ ೫೯ | ೨೬ ೭೩ |
| ೨೮·೯೨ | ೨೬·೨೮ | ೮·೧೫ | ೧೯.೬೧ | ೧೫·೩೧ |
| ೧೨·೯೨ | ೧೧·೪೫ | ೮·೫೩ | ೧೬·೪೭ | ೨೩·೧೪ |
| ೨·೭೨ | ೨·೧೫ | ೫·೯೫ | ... | ೦·೭೦ |
| ೧.೨೧ | ೦·೯೪ | ೬·೨೩ | | ೧·೦೬ |
| ೨೨·೦೦ | ೪೭·೮೦ | ೧·೧೧ | ೯·೮೩ | ೮·೦೦ |
| ೯·೮೩ | ೨೦·೮೩ | ೧·೧೭ | ೮·೧೬ | ೧೨·೧೦ |
| ೩೮·೨೫ | ೨೦·೭೭ | ೧೮·೬೭ | ೯·೭೧ | ೩·೯೪ |
| ೧೭·೧೮ | ೯·೦೫ | ೧೯.೫೨ | ೮·೧೬ | ೫·೯೬ |
| ೮ ೩೮ | ೯·೦೪ | ೭·೮೨ | ೩·೯೦ | ೪·೩೯ |
| ೩·೭೪ | ೩·೯೪ | ೭·೬೫ | ೩·೨೮ | ೬·೬೩ |
| ೬·೯೦ | ೫·೨೬ | ೩.೫೬ | ೧·೨೫ | ೦ ೩೯ |
| ೩·೦೮ | ೨·೨೯ | ೩·೭೩ | ೧·೦೬ | ೦·೬೦ |
| ೧.೫೯ | ೧·೫೧ | ೧·೫೫ | ೫·೧೧ | ೦·೦೧ |
| ೦·೭೧ | ೦ ೬೬ | ೧·೬೩ | ೪·೩೦ | ೦·೦೨ |
| ೩೨·೧೨ | ೧೭·೨೦ | ೧೨·೫೫ | ೧೩·೬೯ | ೭·೦೨ |
| ೧೪·೩೫ | ೭·೪೯ | ೧೩·೩೩ | ೧೧·೫೦ | ೧೦ ೬೨ |
| ... | ... | ೧·೧೭<br>೧·೨೩ | ... | ... |
| ... | ... | ... | ೦·೫೦<br>೦·೪೨ | ... |
| ... | ... | ೨·೦೦<br>೨·೦೯ | ... | ... |
| ೨೨೩·೯೦ | ೨೨೯·೪೯ | ೯೫·೬೪ | ೧೧೯·೦೭ | ೬೬·೧೬ |

ಸರಕಾರದ ಹುಟ್ಟುವಳಿಯನ್ನು ಕೂಡಿಸುವುದಕ್ಕೆ ಸಂಸ್ಥಾನಗಳಲ್ಲಿ ತಗಲುತ್ತಿರುವ ವೆಚ್ಚ ಶೇ. ೧೦·೮ರಿಂದ ಶೇ. ೧೬·೩ರ ವರೆಗೂ ಇದೆ. ಇಂಡಿಯಾ ದೇಶದ ಪ್ರಾಂತಗಳಲ್ಲಿ ಈ ವೆಚ್ಚವು ಸುಮಾರು ಶೇ. ೧೨ ಅಥವ ೧೩ರಷ್ಟಿದೆಯೆನ್ನಬಹುದು.

## ಸಾಮಾನ್ಯ ಆಡಳಿತ

ಈ ಬಾಬಿನ ವೆಚ್ಚದಲ್ಲಿ ಎಲ್ಲ ವಿಧವಾದ ಆಡಳಿತಕ್ಕೂ, ಪೋಲೀಸು, ಜೈಲು, ನ್ಯಾಯಾಸ್ಥಾನಗಳು, ರಾಜಕೀಯ ವ್ಯವಸ್ಥೆಗಳು. ಮತ್ತು ಅತಿಥಿಸತ್ಕಾರ ಈ ಎಲ್ಲಕ್ಕೂ ಆಗುವ ವೆಚ್ಚವನ್ನು ನಮೂದಿಸಲಾಗಿದೆ. ಆಡಳಿತಕ್ಕಾಗಿ ಹೈದರಾಬಾದು ಮತ್ತು ಮೈಸೂರು ಸಂಸ್ಥಾನಗಳಲ್ಲಿ ಒಟ್ಟು ಆದಾಯದಲ್ಲಿ ಶೇ. ೨೧·೨೦ರಷ್ಟು ಭಾಗ ವಿನಿಯೋಗವಾಗುತ್ತದೆ. ಇಂದೂರಿನಲ್ಲಿ ಆಡಳಿತದ ಖರ್ಚು ಪರಮಾವಧಿಯನ್ನೇರಿದೆ. ಅಲ್ಲಿ ಆದಾಯದಲ್ಲಿ ಮೂರನೆಯ ಒಂದು ಭಾಗದಷ್ಟು ಹಣ ಆಡಳಿತ ನಿರ್ವಹಣಕ್ಕಾಗಿಯೇ ವೆಚ್ಚವಾಗುತ್ತಿದೆ. ಜಮ್ಮು ಮತ್ತು ಕಾಶ್ಮೀರ ಮತ್ತು ತಿರುವಾಂಕೂರು ಸಂಸ್ಥಾನಗಳು ಆದಕ್ಕೆರಡನೆಯ ಸ್ಥಾನದಲ್ಲಿವೆ. ಅಲ್ಲಿ ಕ್ರಮವಾಗಿ ಶೇ. ೩೦·೮ ಮತ್ತು ಶೇ. ೨೯·೫ರಷ್ಟು ವೆಚ್ಚವಾಗುತ್ತಿವೆ ಎನ್ನಬಹುದು. ಕೆಲವು ಸಂಸ್ಥಾನಗಳಲ್ಲಿ ಮತಪ್ರಚಾರಕ್ಕಾಗಿ, ಅಥವ ಮತರಕ್ಷಣೆಗಾಗಿ ಸಾವಿರಾರು ರೂಪಾಯಿಗಳು ವೆಚ್ಚವಾಗುತ್ತಿದೆ. ಹೈದರಾಬಾದು ಮತ್ತು ತಿರುವಾಂಕೂರು ರಾಜ್ಯಗಳು ಈ ಖರ್ಚನ್ನು ಹೇರಳವಾಗಿಯೇ ಮಾಡುತ್ತಿವೆ. ಹೈದರಾಬಾದಿನಲ್ಲಿ ಪ್ರತಿವರ್ಷವೂ ಮತೋದ್ಧಾರ ಕಾರ್ಯಗಳಿಗಾಗಿ ೧೮·೩ ಲಕ್ಷ ರೂಪಾಯಿಗಳೂ, ತಿರುವಾಂಕೂರಿನಲ್ಲಿ ೨೨.೪ ಲಕ್ಷ ರೂಪಾಯಿಗಳೂ ವ್ಯಯವಾಗುತ್ತಿವೆ. ತಿರುವಾಂಕೂರಿನಲ್ಲಿ ೧೬ ಲಕ್ಷ ರೂಪಾಯಿಗಳು ದೇವಸ್ವವಾಗಿ, ದೇವಾಲಯಗಳ ಪೋಷಣೆಗಾಗಿ ಮೀಸಲಾಗಿರಿಸಲ್ಪಡುತ್ತಿದೆ. ತಿರುವಾಂಕೂರು ರಾಜ್ಯದ ಚರಿತ್ರೆ ಸ್ವಲ್ಪ ವೈಶಿಷ್ಟ್ಯದಿಂದ ಕೂಡಿದ್ದು. ಅಲ್ಲಿ ಸರಕಾರಕ್ಕೆ ಬರುವ ಆದಾಯದಲ್ಲಿನ ಬಹುಭಾಗ, ದೇವಾಲಯ ಸ್ವತ್ತುಗಳಿಂದ ಬಂದದ್ದು. ಆದುದರಿಂದ ಸರಕಾರವೇ ದೇವಾಲಯಗಳ ಆಡಳಿತವನ್ನು ನೋಡಿಕೊಳ್ಳಬೇಕಾಗಿದೆ. ಅಲ್ಲಿಯ ಸಂಪ್ರದಾಯದ ಪ್ರಕಾರ, ರಾಜ್ಯ, ತಿರುವನಂತಪುರದಲ್ಲಿರುವ ಅನಂತಪದ್ಮನಾಭಸ್ವಾಮಿಯವರದು. ಆ ದೇವರ ಹೆಸರಿನಲ್ಲಿ ಮಹಾರಾಜರು ಆಡಳಿತವನ್ನು ನಿರ್ವಹಿಸುತ್ತಿದ್ದಾರೆ. ಆದುದರಿಂದ ತಿರುವಾಂಕೂರಿನಲ್ಲಿ, ದೇವಾಲಯಗಳಿಗಾಗಿ, ಮತ್ತು ಧರ್ಮರಕ್ಷಣೆಗಾಗಿ ಖರ್ಚಾಗುತ್ತಿರುವ ಹಣ ನ್ಯಾಯವಿರುದ್ಧವಾದುದೆಂದು ಹೇಳಲಾಗದು.

## ಅರಮನೆ

ಅರಮನೆಯ ಬಾಬಿನಲ್ಲಿ ಪ್ರಭುಗಳಿಗೆ ಮತ್ತು ಅವರ ಮನೆತನದವರಿಗೆ ಸಲ್ಲಿಸಬೇಕಾದ ಸಂಭಾವನೆಯ ಹಣವನ್ನು ಗುರುತಿಸುವ ಪದ್ಧತಿಯಿದೆ. ಬಿಕನೀರಿನಲ್ಲಿ ಈ ಬಾಬಿಗಾಗಿ ದೇಶದ ಒಟ್ಟು ಆದಾಯದಲ್ಲಿ ಶೇ. ೨೩ರಷ್ಟು, ಹೈದರಾ

## ಸಾಲ

ಸಾಲದ ವಿಷಯವನ್ನು ಪ್ರಸ್ತಾವಿಸುವಾಗ, ಸಾಮಾನ್ಯವಾಗಿ ಆ ಸಾಲದಿಂದ ಪಡೆದ ಹಣ ಎಷ್ಟು ಮಾತ್ರ ಫಲಪ್ರದವಾದ ಕೈಗಾರಿಕೆಗಳಿಗೂ, ಇತರ ಉದ್ಯಮಗಳಿಗೂ ಉಪಯೋಗಿಸಲ್ಪಟ್ಟಿದೆ ಎಂಬುದನ್ನು ಮನಸ್ಸಿನಲ್ಲಿಟ್ಟಿರಬೇಕು. ಈ ಮೇಲಿನ ವೆಚ್ಚದ ಪಟ್ಟಿಯನ್ನು ಪರಿಶೀಲಿಸಿದರೆ, ಮೈಸೂರು ಸಂಸ್ಥಾನದಲ್ಲಿ ಸಾಲದ ಬಾಬಿಗಾಗಿ ಪ್ರತಿವರ್ಷವೂ ಬಹು ಹೆಚ್ಚು ಹಣವನ್ನು ಕೊಡಲಾಗುತ್ತಿದೆ ಎನ್ನಬಹುದು. ಮೂವತ್ತು ವರುಷಗಳಿಂದಲೂ, ಮೈಸೂರು ಸಂಸ್ಥಾನ, ಸಂತತವಾಗಿ, ದೇಶದ ಆರ್ಥಿಕಾಭ್ಯುದಯಕ್ಕಾಗಿ ಆವಶ್ಯಕವಾದ ಕಾರ್ಯಗಳನ್ನು ಕೈಗೊಂಡುದರಿಂದ ಈ ರೀತಿ ಸಾಲದ ಮೊತ್ತ ಏರಿ ಪ್ರತಿವರ್ಷವೂ ಅದಕ್ಕಾಗಿ ಹಣವನ್ನು ವೆಚ್ಚಮಾಡಬೇಕಾಗಿದೆ. ಇಲ್ಲಿಯ ಸಾಲ ಬರೀ ಸಾಲವಲ್ಲ. ಸಾಲದಿಂದ ದೇಶದಲ್ಲಿ ಫಲಪ್ರದವಾದ ಆಸ್ತಿಯನ್ನು ಮಾಡಲಾಗಿದೆ. ಅದರಿಂದ ಪ್ರತಿವರ್ಷವೂ ಹೆಚ್ಚು ಆದಾಯ ಬರುತ್ತಿದೆ. ಇದರ ಜತೆಗೆ, ದೇಶದ ಆರ್ಥಿಕಸ್ಥಿತಿ ಮೇಲಿನ ಮಟ್ಟಕ್ಕೇರುತ್ತಿದೆ.

ಇವಿಷ್ಟೂ ಸಂಸ್ಥಾನಗಳ ಸರಕಾರಗಳು ಅತ್ಯಾವಶ್ಯಕವಾಗಿ ಮೊಟ್ಟಮೊದಲು ಮಾಡಬೇಕಾದ ವೆಚ್ಚ. ಇನ್ನೆರಡನೆಯದು ದೇಶೋನ್ನತಿಗಾಗಿ ಮಾಡುವ ವೆಚ್ಚದ ಬಾಬುಗಳು. ಅದರಲ್ಲಿ ಮೊದಲನೆಯದು ವಿದ್ಯಾಭ್ಯಾಸ. ದೇಶೀಯ ಸಂಸ್ಥಾನಗಳ ಸರಕಾರಗಳು ಎಲ್ಲವೂ, ವಿದ್ಯಾಭ್ಯಾಸಕ್ಕಾಗಿ ಸರಾಸರಿ ಹೆಚ್ಚು ಹಣವನ್ನು ವೆಚ್ಚಮಾಡುತ್ತವೆಯೆನ್ನಬಹುದು. ಈ ವೆಚ್ಚದಲ್ಲಿ ತಿರುವಾಂಕೂರು, ಕೊಚ್ಚಿ, ಬರೋಡ, ಮೈಸೂರು ಈ ರಾಜ್ಯಗಳು ಮೇಲಿನ ಅಂತಸ್ತಿನಲ್ಲಿ ನಿಲ್ಲುತ್ತವೆ.

ವಿದ್ಯಾಭ್ಯಾಸಕ್ಕಾಗಿ ಆಗುತ್ತಿರುವ ವೆಚ್ಚದಲ್ಲಿ ಬಹುಭಾಗ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿಯೂ, ಸುಮಾರು ಐದರಲ್ಲಿ ಅಥವಾ ಆರರಲ್ಲಿ ಒಂದು ಭಾಗ ವಿಶ್ವವಿದ್ಯಾನಿಲಯಕ್ಕಾಗಿಯೂ ಖರ್ಚಾಗುತ್ತದೆ. ಆರೋಗ್ಯ ಮತ್ತು ವೈದ್ಯ—ಈ ಬಾಬುಗಳಿಗಾಗಿ ಕೊಚ್ಚಿನಲ್ಲಿ ಶೇಕಡಾ ೭·೬ರಷ್ಟು ವೆಚ್ಚವಾಗುತ್ತದೆ. ಇಷ್ಟು ಹಣವನ್ನು ವೈದ್ಯಶಾಲೆಗಳು, ಆರೋಗ್ಯ ಪ್ರಚಾರ, ಸಾಂಕ್ರಾಮಿಕ ರೋಗ ನಿವಾರಣೆಗಳಿಗಾಗಿ ಇತರ ಸಂಸ್ಥಾನಗಳು ಮಾಡುತ್ತಿಲ್ಲ. ಇಂದೂರಿನಲ್ಲಿ ಈ ಬಾಬಿಗಾಗಿ ವೆಚ್ಚವಾಗುತ್ತಿರುವ ಹಣ ಅತ್ಯಲ್ಪ. ವ್ಯವಸಾಯ, ಸಹಕಾರ ಮತ್ತು ಕೈಗಾರಿಕೆಗಳಿಗಾಗಿ ಮೈಸೂರು ಸಂಸ್ಥಾನ ಹೆಚ್ಚು ಹಣವನ್ನು ಖರ್ಚು ಮಾಡುತ್ತಿದೆ. ಮೈಸೂರು ದೇಶದಲ್ಲಿ ಹೊಸ ಹೊಸ ಕೈಗಾರಿಕೆಗಳ ನಿರ್ಮಾಣವಾಗಿ ದೇಶದ ಆರ್ಥಿಕ ಸ್ಥಿತಿ ಉತ್ತಮಗೊಳ್ಳಲು ಸಂತತವಾದ ಪ್ರಯತ್ನ ನಡೆಯುತ್ತಿದೆ. ಕೈಗಾರಿಕೆಯ ಬಾಬಿನಲ್ಲಿ ಮೈಸೂರು ಇಂಡಿಯಾ ದೇಶದ ಇತರ ಎಲ್ಲ ಪ್ರಾಂತಗಳ ಮತ್ತು ಸಂಸ್ಥಾನಗಳಿಗಿಂತ ಬಹು ಮುಂದಿದೆ. ಪಬ್ಲಿಕ್ ವರ್ಕ್ಸ—ಹೈದರಾಬಾದು ಸಂಸ್ಥಾನದಲ್ಲಿ ರಸ್ತೆ, ನಾಲೆ, ಕೆರೆ ಕಟ್ಟೆಗಳಿಗಾಗಿ ದೇಶದ ಒಟ್ಟು ಆದಾಯದಲ್ಲಿ ಶೇಕಡ ೧೯ರಷ್ಟು ಹಣ ವೆಚ್ಚವಾಗುತ್ತದೆ. ಇದೇ ಮಾರ್ಗವನ್ನೇ ಮೈಸೂರು, ಕೊಚ್ಚಿ ಮತ್ತು ತಿರುವಾಂಕೂರು ರಾಜ್ಯಗಳು ಕೂಡ ಅನುಸರಿಸಿವೆ ಎನ್ನಬಹುದು.

ದೇಶಾಭ್ಯುದಯ ಕಾರ್ಯಗಳಿಗಾಗಿ ದೇಶೀಯ ಸಂಸ್ಥಾನಗಳು ಎಷ್ಟು ಮಾತ್ರ ವೆಚ್ಚಮಾಡುತ್ತಿವೆ ಎಂಬುದನ್ನೂ ಇದು ಪ್ರಾಂತಗಳ ಸ್ಥಿತಿಗತಿಗಳೊಂದಿಗೆ ಹೋಲಿಸಿದರೆ ಹೇಗಿರುತ್ತದೆ ಎಂಬುದನ್ನೂ ಈ ಅಂಕಿಗಳಿಂದ ಪರ್ಯಾಲೋಚಿಸಬಹುದು :—

| ಸಂಸ್ಥಾನ ಅಥವಾ ಪ್ರಾಂತ | ಒಟ್ಟು ವೆಚ್ಚದಲ್ಲಿ ಶೇಕಡಾ ಮೊತ್ತ | ಪ್ರಜೆಯೊಬ್ಬನಿಗೆ ಸರಾಸರಿ ಆಗುವ ಖರ್ಚು | ಚದರ ಮೈಲಿ ಒಂದಕ್ಕೆ ತಗಲುವ ಖರ್ಚು |
|---|---|---|---|
| | | ರೂ. ಆ. ಪೈ. | ರೂ. ಆ. ಪೈ |
| ಹೈದರಾಬಾದು ... | ೩೫·೬೮ | ೨- ೪-೧೧ | ೪೦೩ ೦ ೦ |
| ಮೈಸೂರು ... | ೩೨·೬೪ | ೨- ೦- ೧ | ೪೪೮ ೦ ೦ |
| ತಿರುವಾಂಕೂರು ... | ೩೯·೫೬ | ೧-೧೫- ೯ | ೧,೩೨೫ ೦ ೦ |
| ಬರೋಡ ... | ೩೮·೯೬ | ೩- ೯- ೨ | ೧,೦೬೯ ೦ ೦ |
| ಜಮ್ಮು ಮತ್ತು ಕಾಶ್ಮೀರ | ೨೩·೪೩ | ೧- ೪-೧೧ | ೫೬ ೮ ೪ |
| ಕೊಚ್ಚಿನ್ ... | ೪೬·೦೯ | ೩-೧೧- ೬ | ೩,೦೩೦ ೦ ೦ |
| ಇಂದೂರು ... | ೨೮·೩೦ | ೪-೧೪- ೨ | ೩,೪೦೦ ೦ ೦ |
| ಬಿಕನೀರ್ ... | ೨೩·೮೩ | ೧-೧೦-೧೧ | ೬೫ ೧ ೬ |
| ಮದರಾಸು ... | ೩೮·೨೪ | ೧- ೬- ೩ | ೪೩೫ ೧೩ ೨ |
| ಬೊಂಬಾಯಿ ... | ೩೩·೧೦ | ೨- ೩- ೦ | ೫೬೩ ೨ ೧೧ |
| ಬಂಗಾಳ ... | ೩೪·೦೩ | ೦-೧೩-೧೦ | ೫೩೦ ೬ ೬ |

ಇಂಡಿಯಾದ ಪ್ರಾಂತಗಳಿಗಿಂತ ಹೆಚ್ಚಾಗಿ ಕೆಲವು ದೇಶಿಯ ಸಂಸ್ಥಾನಗಳು ದೇಶೋನ್ನತಿ ಕಾರ್ಯಗಳ ಸಲುವಾಗಿ ವೆಚ್ಚಮಾಡುತ್ತಿವೆ ಎಂಬುದು ಇದರಿಂದ ಸ್ಪಷ್ಟವಾಗುವುದು. ಇಂಡಿಯಾದಲ್ಲಿ ಕೇಂದ್ರ ಸರಕಾರ ನಿರ್ವಹಿಸಬೇಕಾಗಿರುವ ಕಾರ್ಯಗಳನ್ನು ಈ ಸಂಸ್ಥಾನಗಳು ನಿರ್ವಾಹಮಾಡಿ, ದೇಶಾಭ್ಯುದಯ ಕಾರ್ಯಗಳಿಗಾಗಿ ಇಷ್ಟು ಹಣವನ್ನು ವೆಚ್ಚಮಾಡುತ್ತಿರುವುದು ಕೇವಲ ಅಭಿನಂದನೀಯವಾದ ವಿಷಯವೆಂಬುದರಲ್ಲಿ ಸಂದೇಹವಿಲ್ಲ.

ಮೇಲಿನ ಅಂಕಿ ಅಂಶಗಳನ್ನು ಹೋಲಿಸಿ ನೋಡಿದರೆ ಇಂಡಿಯಾದೇಶದಲ್ಲಿ ಪ್ರಮುಖ ಸಂಸ್ಥಾನಗಳು, ಇಂಡಿಯಾ ಪ್ರಾಂತಗಳಿಗಿಂತ ಯಾವ ವಿಧದಲ್ಲಿಯೂ ಕಡಮೆಯಿಲ್ಲ. ಪ್ರಾಂತಗಳ ಕಾರ್ಯಕಲಾಪಗಳಿಗಿಂತ ಉತ್ತಮವಾದ ಕಾರ್ಯ ನಿರ್ವಾಹ ಮಾಡುತ್ತಿವೆ. ಪ್ರಾಂತಗಳಿಗಿಂತ ಅವು ಒಂದು ಹೆಜ್ಜೆ ಮುಂದಿವೆಯೆಂದು ತೋರಿಬರುತ್ತದೆ. ಆದರೆ ಕೆಲವು ಸಂಸ್ಥಾನಗಳಲ್ಲಿ ತೆರಿಗೆಯ ಹೊರೆ ಇನ್ನೂ ಇಳಿಯಬೇಕು. ವಾಣಿಜ್ಯೋದ್ಯಮಗಳೂ, ಕೈಗಾರಿಕೆಗಳೂ ಬಲವಾಗಬೇಕು. ರೈಲ್ವೆಗಳ ಮತ್ತು ರಸ್ತೆಗಳ ಬಡಾವಣೆಯಾಗಬೇಕು. ವಿದ್ಯುಚ್ಛಕ್ತಿಯಿಂದ ಆದಷ್ಟು ಸಹಾಯವನ್ನು ಪಡೆಯಬೇಕು. ಇವುಗಳಿಂದ ಆಯಾ ಸರಕಾರದ ಹುಟ್ಟುವಳಿ ಹೆಚ್ಚುವುದು ಮಾತ್ರವಲ್ಲ; ದೇಶದ ಸಂಪತ್ತು ಹೆಚ್ಚಿ ಜನರ ಜೀವನ ಇನ್ನೂ ಸುಖಮಯವಾಗುವುದು.

# ಪ್ರಕರಣ ೨೪

## ದೇಶೀಯ ಸಂಸ್ಥಾನಗಳೂ, ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯೂ

ಇಲ್ಲಿಯವರೆಗೂ ದೇಶೀಯ ಸಂಸ್ಥಾನಗಳ ಹಣಕಾಸಿನ ಸ್ಥಿತಿಯನ್ನು ವಿವರಿಸಿಯಾಯಿತು. ಮುಂದೆ ಬರಲಿರುವ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯಲ್ಲಿ ಕೇಂದ್ರ ಸರಕಾರಕ್ಕೂ ದೇಶೀಯ ಸಂಸ್ಥಾನಗಳಿಗೂ ಇರಬೇಕಾದ ಆಯವ್ಯಯ ಸಂಬಂಧವನ್ನು ತಿಳಿಯಬೇಕಾದುದು ಅತ್ಯಾವಶ್ಯಕ.

ಒಂದು ಕಡೆ ಇಂಡಿಯಾ ಪ್ರಾಂತಗಳು, ಇನ್ನೊಂದು ಕಡೆ ದೇಶೀಯ ಭಾರತದ ಸಂಸ್ಥಾನಗಳು, ಹೀಗೆ ಭಿನ್ನಭಿನ್ನವಾಗಿರುವ ಒಂದು ರಾಷ್ಟ್ರದ ನಾನಾ ಭಾಗದವರಿಗೆ ಬೇಕಾದ ಏಕಮಾತ್ರ ಅಭ್ಯುದಯವನ್ನು ಸಾಧಿಸಬೇಕಾದರೆ ಇವುಗಳನ್ನು ಒಟ್ಟುಗೂಡಿಸುವುದರಿಂದ ; ಮತ್ತು ಅವು ಒಟ್ಟಿಗೆ ಸೇರಿ ತಮಗೆ ಬೇಕಾದ ಸಾಮಾನ್ಯ ವಿಷಯಗಳನ್ನು ಚರ್ಚಿಸಿ ಕಾರ್ಯರೂಪಕ್ಕೆ ತರುವುದರಿಂದ ಸಾಧ್ಯ. ಕಳೆದ ೧೫೦ ವರ್ಷಗಳಿಂದಲೂ ಇಂಡಿಯಾ ದೇಶದ ಈ ಎರಡು ಭಾಗಗಳಿಗೂ ಒಂದು ವಿಧವಾದ ಸಂಬಂಧವೇರ್ಪಟ್ಟಿದೆ. ಈ ಸಂಬಂಧದಲ್ಲಿ ಕಂಡುಬರುವ ಹಿಂದಿನ ತೊಡಕುಗಳನ್ನು ಬಿಡಿಸಿ, ಅನ್ಯೋನ್ಯವಾದ ಸಂಬಂಧವನ್ನು ಹೆಚ್ಚು ಮಾಡುವುದು ಈ ನೂತನ ರಾಜ್ಯಾಂಗ ವ್ಯವಸ್ಥೆಯಿಂದ ಮಾತ್ರ ಸಾಧ್ಯವಾಗಬಹುದು.

ಆದರೆ ಪ್ರಪಂಚದ ಇತರ ಭಾಗಗಳಲ್ಲಿ ಆಚರಣೆಯಲ್ಲಿರುವ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಗೂ, ಇಂಡಿಯಾ ದೇಶದಲ್ಲಿ ಅನುಸರಿಸಬೇಕಾದ ಕ್ರಮಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಒಂದು ದೇಶದ ಪ್ರಾಂತಗಳು ತಮ್ಮ ಅನ್ಯೋನ್ಯ ರಕ್ಷಣೆ, ಅಭಿವೃದ್ಧಿಗಾಗಿ ಒಂದು ಕೇಂದ್ರ ಸರಕಾರವನ್ನು ತಾವೇ ಕಲ್ಪಿಸಿಕೊಂಡು ಆ ಹೊಸ ಸಂಸ್ಥೆಗೆ ತಮಗಿರುವ ಅಧಿಕಾರದಲ್ಲಿ ಕೊಂಚ ಭಾಗವನ್ನು ಕೊಡುತ್ತವೆ. ಇದು ಇತರ ದೇಶಗಳಲ್ಲಿರುವ ಪದ್ಧತಿ. ಇಂಡಿಯಾ ದೇಶದಲ್ಲಿ ಅನುಸರಿಸುವ ಮಾರ್ಗವೇ ಬೇರೆ. ಇಂಡಿಯಾ ದೇಶದಲ್ಲಿ, ಸಂಯುಕ್ತ ರಾಜ್ಯಾಂಗದ ಸದಸ್ಯರಾದ ಪ್ರಾಂತಗಳಾಗಲಿ, ದೇಶೀಯ ಸಂಸ್ಥಾನಗಳಾಗಲಿ ಒಂದೇ ಅಂತಸ್ತಿಗೆ ಸೇರಿದವುಗಳಾಗಲಾರವು. ಪ್ರಾಂತಗಳು ಇತರ ದೇಶಗಳಂತೆ ತಮ್ಮ ಅಧಿಕಾರವನ್ನು ಕೇಂದ್ರ ಸರಕಾರಕ್ಕೆ ದಾನ ಮಾಡುವ ಬದಲು ಇಲ್ಲಿ ಕೇಂದ್ರ ಸರಕಾರದಿಂದಲೇ ಹೆಚ್ಚು ಅಧಿಕಾರವನ್ನು ಪಡೆಯುತ್ತವೆ. ದೇಶೀಯ ಸಂಸ್ಥಾನಗಳ ರಾಜ ಮಹಾರಾಜರು ತಾವು ಇದುವರೆಗೂ ಅನುಭವಿಸುತ್ತಿದ್ದ ಅಪ್ರತಿಹತವಾದ ಅಧಿಕಾರದಲ್ಲಿ ಕೊಂಚ ಸಂಯುಕ್ತ ಸರಕಾರಕ್ಕೆ ಧಾರೆಯೆರೆಯಬೇಕಾಗುತ್ತದೆ. ಈ ತೆರನಾದ ಅಧಿಕಾರ ಸಮರ್ಪಣೆಯಿಂದಲೇ ಇಂಡಿಯಾ ದೇಶದಲ್ಲಿ ಒಂದು ಅಖಂಡತೆ ಅಥವಾ

ಪೂರ್ಣತೆಯೊದಗಬೇಕಾದರೆ, ಎಂದು ಸೈಮರ್ ಕಮಿಷರ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಪ್ರಾಂತಗಳಿಗೂ ದೇಶೀಯ ಸಂಸ್ಥಾನಗಳಿಗೂ ಇರುವಂತಹ ಹೋಲಿಕೆ, ಏಕರೂಪತೆ ದೇಶೀಯ ಸಂಸ್ಥಾನಗಳಲ್ಲೇ ಒಂದೊಂದಕ್ಕಿಲ್ಲ. ಎಲ್ಲಾ ದೇಶೀಯ ಸಂಸ್ಥಾನಗಳೂ ವಿಸ್ತೀರ್ಣದಲ್ಲಾಗಲಿ, ಜನಸಾಂದ್ರತೆಯಲ್ಲಾಗಲಿ, ಸಂಪತ್ತಿನಲ್ಲಾಗಲಿ ಒಂದೇ ವಿಧವಾಗಿಲ್ಲ. ಅಷ್ಟೇ ಅಲ್ಲದೆ ಅವುಗಳಿಗೂ ಸಾರ್ವಭೌಮ ಸರಕಾರಕ್ಕೂ ಇರುವ ಸಂಬಂಧವು ವಿಧವಿಧವಾಗಿದೆ. ಸಾರ್ವಭೌಮ ಸರಕಾರಕ್ಕೆ ತಾವು ಹೊತ್ತ ಹೊರೆಯಲ್ಲಾಗಲಿ, ಸಾರ್ವಭೌಮ ಸರಕಾರದಿಂದ ತಾವು ಪಡೆಯುವ ಸೌಲಭ್ಯಗಳಲ್ಲಾಗಲಿ, ಒಂದು ವಿಧವಾದ ಸಮಾನತೆಯಿಲ್ಲ. ಈ ಸಂಸ್ಥಾನಗಳಲ್ಲಿ ಕೆಲವು ಕೇಂದ್ರ ಸರಕಾರಕ್ಕೆ ಪೊಗದಿ, ದತ್ತ ಮಂಡಲಗಳು, ಸುಂಕ, ಎಕ್ಸೈಜ್, ಉಪ್ಪಿನ ತೆರಿಗೆ, ಅಂಚೆ ಮತ್ತು ತಂತಿ, ಹಣಕಾಸು, ಟಂಕ ಸಾಲೆ, ಸಾಮ್ರಾಜ್ಯ ರಕ್ಷಣೆಗಾಗಿ ಸೈನ್ಯ ನಿರ್ವಹಣ ಇವುಗಳ ಮೂಲಕ ತಮ್ಮ ಕಾಣಿಕೆಯನ್ನು ಸಲ್ಲಿಸುತ್ತವೆ. ಇನ್ನು ಕೆಲವು ತಾವು ಸಾರ್ವಭೌಮ ಸರಕಾರ ದೊಂದಿಗೆ ಮಾಡಿಕೊಂಡಿರುವ ಕೌಲು ಕರಾರು ಸನ್ನದುಗಳ ಪ್ರಕಾರ ಕೇಂದ್ರ ಸರಕಾರಕ್ಕೆ ಮೇಲೆ ಹೇಳಿದ ಕೆಲವು ಬಗೆಯ ಆದಾಯವನ್ನು ಸಲ್ಲಿಸುವುದಿಲ್ಲ. ಕೇಂದ್ರ ಸರಕಾರಕ್ಕೆ ದ್ರವ್ಯವನ್ನು ಒದಗಿಸುವ ಸಂಸ್ಥಾನಗಳಲ್ಲಿ ಕೂಡ ಯಾವ ವಿಧವಾದ ಒಂದು ನಿಯಮವಾಗಲಿ, ವಿಧಿಯಾಗಲಿ ನಿರ್ಣೀತವಾಗಿಲ್ಲ. ಈ ನಿಯಮಗಳೆಲ್ಲವೂ ಆಗಿಂದಾಗ್ಗೆ ಇಚ್ಛೆ ಬಂದಂತೆ ಮಾಡಿದವುಗಳು. ಒಟ್ಟಿನಲ್ಲಿ ದೇಶೀಯ ಸಂಸ್ಥಾನ ಗಳು ತೆರಬೇಕಾದ ಆದಾಯ. ಅವು ಪಡೆಯುವ ಸೌಲಭ್ಯಗಳು, ಅವು ಮಾಡ ಬೇಕಾದ ದ್ರವ್ಯ ಸಹಾಯ, ಈ ಸಂಸ್ಥಾಗಳು ಹೊಂದಬೇಕಾದ ಅನುಕೂಲಗಳು ಅವುಗಳ ಆಸ್ತಿ—ಇವುಗಳಲ್ಲಿ ಯಾವುದರಲ್ಲೂ ಒಂದು ವಿಧವಾದ ನಿಯಮವಾಗಲಿ ಏಕರೂಪತೆಯಾಗಲಿ ಇಲ್ಲ.

ಸಂಯುಕ್ತ ಸರಕಾರಕ್ಕೂ, ದೇಶೀಯ ಸಂಸ್ಥಾನಗಳಿಗೂ, ಹಣಕಾಸಿನ ವಿಚಾರದಲ್ಲಿ ಇರಬೇಕಾದ ಸಂಬಂಧವನ್ನು ನಿರ್ಣಯಮಾಡುವಾಗ ಆ ಸಂಸ್ಥಾನ ಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಾಮ್ರಾಜ್ಯ ಸರಕಾರಕ್ಕೆ, ತಾವು ಪಡೆಯುತ್ತಿರುವ ಸೌಲಭ್ಯಗಳಿಗಾಗಿ, ಸಲ್ಲಿಸುತ್ತಿರುವ ಹಣವನ್ನೂ, ಉಪಕಾರವನ್ನೂ ಮನಸ್ಸಿನಲ್ಲಿಟ್ಟಿರಬೇಕು. ಅವು ಸಾಮಾಜ್ಯ ಸರಕಾರಕ್ಕೆ ಒದಗಿಸುತ್ತಿರುವ ದ್ರವ್ಯಸಹಾಯ ತಾವು ಆ ಕೇಂದ್ರ ಸರಕಾರದಿಂದ ಪಡೆಯುತ್ತಿರುವ ಸೌಕರ್ಯಗಳಿಗೆ ಸರಿದೂಗುವಂತಿದೆಯೋ ಎಂಬುದನ್ನು ನಾವು ಆಲೋಚಿಸಬೇಕು.

ಸಾಮಾನ್ಯವಾಗಿ ದೇಶೀಯ ಸಂಸ್ಥಾನಗಳು ಕೇಂದ್ರ ಸರಕಾರಕ್ಕೆ ಪ್ರತ್ಯಕ್ಷ ವಾಗಿ ಸಲ್ಲಿಸುವ ಹಣ ಎರಡು ಬಗೆಯಾಗಿದೆ. ೧. ಪೊಗದಿ ಮತ್ತು ಕಪ್ಪಕಾಣಿಕೆಯ ಮೂಲಕ, ೨. ಹಿಂದೆ ತಮ್ಮ ರಕ್ಷಣೆಗಾಗಿ ಅವರಿಗೆ ದಾನಮಾಡಿದ ಪ್ರಾಂತಗಳ ಬೆಲೆ. ದೇಶೀಯ ಸಂಸ್ಥಾನಗಳು ಸಾರ್ವಭೌಮ ಸರಕಾರಕ್ಕೆ ತೆರುವ ಸುಂಕ, ಎಕ್ಸೈಜ್, ಅಂಚೆ, ಮತ್ತು ರೈಲು ಬಾಬುಗಳಲ್ಲಿನ ಆದಾಯದ ಭಾಗ ಹಣಕಾಸಿನ ಚಲಾವಣೆಯಿಂದ ಬರುವ ಲಾಭದ ಭಾಗ ಈ ಬಗೆಯ ಆದಾಯದ ಬಾಬುಗಳೇ

ಪರೋಕ್ಷವಾಗಿ ಕೊಡುವ ದ್ರವ್ಯವೆನ್ನಬಹುದು. ಕೆಲವು ದೇಶೀಯ ಸಂಸ್ಥಾನಗಳು ಸೈನ್ಯಗಳನ್ನು ಪೋಷಿಸಿ ರಕ್ಷಣಕಾರ್ಯದ ಭಾಗವನ್ನೂ ನಿರ್ವಹಿಸುತ್ತಿವೆ. ಇದು ಕೂಡ ಒಂದು ವಿಧವಾಗಿ ಸಾಮ್ರಾಜ್ಯ ಸರಕಾರಕ್ಕೆ ಒದಗಿಸುವ ದ್ರವ್ಯ ಸಹಾಯವೆನ್ನಬಹುದು.

ಕೆಲವು ಸಂಸ್ಥಾನಗಳಿಗೆ ಈಗ ದೊರೆಯುತ್ತಿರುವ ಸೌಲಭ್ಯಗಳು ಅಲ್ಪವಾಗಿವೆ ಎನ್ನಬಹುದು. ಸುಂಕ ಮತ್ತು ಉಪ್ಪು, ಅಂಚೆ ಮತ್ತು ತಂತಿ ಈ ಸಹಾಯ ಕೆಲವು ಸಂಸ್ಥಾನಗಳಿಗೆ ಮಾತ್ರ ದೊರೆಯುತ್ತವೆ. ಸಮುದ್ರ ತೀರದಲ್ಲಿರುವ ಕೆಲವು ಸಂಸ್ಥಾನಗಳು ಸಮುದ್ರ ಸುಂಕವನ್ನು ತಾವೇ ವಸೂಲ್ಮಾಡಿ ಉಪಯೋಗಿಸಿಕೊಳ್ಳುತ್ತವೆ. ಇನ್ನು ಕೆಲವು ಸಂಸ್ಥಾನಗಳು ರಾಜಾಂಶದ ತೆರಿಗೆಯನ್ನೂ ಕೊಡದೆ ಸ್ವತಃ ಉಪ್ಪನ್ನು ತಯಾರುಮಾಡಿಕೊಳ್ಳುತ್ತವೆ. ಕೆಲವು ಸಂಸ್ಥಾನಗಳು ತಯಾರಾದ ಉಪ್ಪನ್ನು ಉಚಿತವಾಗಿ ಪಡೆದು ತಮ್ಮ ಜನರಿಗೆ ಹಂಚುತ್ತವೆ. ಕೆಲವು ಸಂಸ್ಥಾನಗಳಿಗೆ ಉಪ್ಪನ್ನು ತಯಾರುಮಾಡುವುದಕ್ಕಾಗಿ ಸಾಮ್ರಾಜ್ಯ ಸರಕಾರವೇ ದ್ರವ್ಯಸಹಾಯ ಮಾಡುತ್ತದೆ. ಕೆಲವು ಸಂಸ್ಥಾನಗಳು ತಮ್ಮದೇ ಆದ ಅಂಚೆ ಮತ್ತು ತಂತಿ ಇಲಾಖೆಗಳನ್ನು ಏರ್ಪಡಿಸಿಕೊಂಡಿವೆ. ಮತ್ತೆ ಕೆಲವು ಸರಕಾರದ ವ್ಯವಹಾರಕ್ಕೆ ಸಂಬಂಧಿಸಿದ ಕಾಗದಪತ್ರಗಳ ರವಾನೆಗಾಗಿ ಹಣ ಕೊಡದಂತೆ ಕರಾರು ಮಾಡಿಕೊಂಡಿವೆ.

ಸಂಯುಕ್ತ ರಾಜ್ಯಾಂಗ ವ್ಯವಸ್ಥೆಗೊಳಪಟ್ಟ ಎಲ್ಲ ಪ್ರಾಂತಗಳೂ, ಸಂಯುಕ್ತ ಸರಕಾರಕ್ಕೆ ಖರ್ಚಾಗುವ ಹಣವನ್ನು ಏಕಪ್ರಕಾರವಾಗಿ ಹೊರಬೇಕಾದುದೂ, ಸಂಯುಕ್ತ ಸರಕಾರಕ್ಕೆ ಸೇರಿದ ಬಾಬುಗಳಿಂದ ಬರುವ ಆದಾಯವೆಲ್ಲವೂ, ಕೇಂದ್ರ ಸರಕಾರಕ್ಕೇ ಸೇರಬೇಕಾದುದೂ, ಈ ವ್ಯವಸ್ಥೆಯ ಮುಖ್ಯ ತತ್ವ. ಈ ತತ್ವವನ್ನು ನಾವು ಒಪ್ಪಿಕೊಂಡಮೇಲೆ ಇಷ್ಟು ದಿನವೂ ಸಂಸ್ಥಾನಗಳು ಕೇಂದ್ರ ಸರಕಾರಕ್ಕೆ ಸಲ್ಲುತ್ತಿರುವ ದ್ರವ್ಯ ಸಹಾಯವನ್ನು ನಿಲ್ಲಿಸಿ, ತಮ್ಮ ಕೌಲುಕರಾರುಗಳ ಪ್ರಕಾರ ತಮಗೆ ಈಗ ದೊರೆಯುತ್ತಿರುವ ಎಲ್ಲ ಸೌಲಭ್ಯ ಸೌಕರ್ಯಗಳನ್ನೂ ಮುಂದೆಯೂ ಕೊಡಬೇಕೆಂದು ಕೇಳುವುದಾದರೆ, ಅದು ಅಧರ್ಮವಾಗಬಹುದೇ ಹೊರತು ಈ ವ್ಯವಸ್ಥೆಯ ಪ್ರಕಾರ ನ್ಯಾಯವಿರುದ್ಧವಾಗಲಾರದು.

ಇಂಡಿಯಾ ದೇಶದ ಪ್ರಾಂತಗಳಂತೆ ಈ ಸಂಸ್ಥಾನಗಳ ಅಂತಸ್ತನ್ನು ನಿರ್ಧರಿಸಲು ಸಾಧ್ಯವಿಲ್ಲ. ದೇಶೀಯ ಸಂಸ್ಥಾನಗಳು ಸಂಯುಕ್ತ ರಾಜ್ಯಾಂಗ ವ್ಯವಸ್ಥೆಗೆ ತಮ್ಮ ಸ್ವಂತ ಜವಾಬ್ದಾರಿಯ ಮೇಲೆ ಸೇರಬಹುದು; ನಿರ್ಬಂಧಪಡಿಸಿ ಸೇರಿಸಲಾಗದು. ಪ್ರತಿಯೊಂದು ಸಂಸ್ಥಾನಕ್ಕೂ ಒಂದೊಂದು ರಾಜ್ಯಾಧಿಕಾರ ನಿರೂಪ (Instrument of Accession) ವಿದೆ. ಆಯಾ ಸಂಸ್ಥಾನಗಳ ಚರಿತ್ರೆ, ಆರ್ಥಿಕ ಪರಿಸ್ಥಿತಿ, ರೀತಿ ನೀತಿಗಳು ಇವುಗಳನ್ನು ಅನುಸರಿಸಿ ಒಂದೊಂದು ತೀರ್ಮಾನಕ್ಕೆ ಬರಬೇಕಾಗುವುದು. ಸರಕಾರದ ಕೆಲವು ಪ್ರಕಟಣೆಗಳ ಧ್ವನಿಯನ್ನು ನೋಡಿದರೆ ಸಂಸ್ಥಾನಗಳು ಒಂದೊಂದೂ ತಮ್ಮ ಸಾಲಸೋಲಗಳು, ಆಸ್ತಿಪಾಸ್ತಿಗಳು, ತಾವು ಮಾಡುವ ದ್ರವ್ಯಸಹಾಯ, ಪಡೆದ ಸೌಲಭ್ಯಗಳು ಇವುಗಳನ್ನು

ಅನುಸರಿಸಿ ಮಾಡುವ ಪ್ರತ್ಯೇಕ ತೀರ್ಮಾನಗಳಂತೆ ಸ್ವಂತ ಜವಾಬ್ದಾರಿಯಿಂದ ಸಂಯುಕ್ತ ರಾಜ್ಯಾಂಗವ್ಯವಸ್ಥೆಗೆ ಸೇರಬೇಕೆಂಬಂತೆ ಇದೆ. ಈ ದೃಷ್ಟಿಯಿಂದ ನೋಡಿದರೆ ಮೈಸೂರು ಸಂಸ್ಥಾನ ತಾನು ಪಡೆಯುವ ಸೌಲಭ್ಯಗಳಿಗಿಂತ ಹೆಚ್ಚು ದ್ರವ್ಯ ಸಹಾಯವನ್ನು ಒದಗಿಸುತ್ತಿದೆ. ಹಾಗೆಯೇ ತಿರುವಾಂಕೂರು ಸಂಸ್ಥಾನವೂ ಕೂಡ.

ಸಂಸ್ಥಾನಗಳು ಮಾಡುವ ದ್ರವ್ಯ ಸಹಾಯ, ಅವು ಪಡೆಯುವ ಸೌಕರ್ಯಗಳ ಬೆಲೆಗಿಂತ ಹೆಚ್ಚಾಗಿದ್ದರೆ ಅಂತಹವುಗಳಿಗೆ ಕೆಲವು ರಿಯಾಯಿತಿಗಳನ್ನು ತೋರಿಸಬಹುದು. ಪಡೆಯುವ ಸೌಲಭ್ಯಗಳಿಗಿಂತ ಅವು ಸಲ್ಲಿಸುತ್ತಿರುವ ಸಹಾಯವು ಹೆಚ್ಚಿಲ್ಲದಿದ್ದರೆ ಈ ವಿಧವಾದ ರಿಯಾಯಿತಿಗೆ ಮಾರ್ಗವಿಲ್ಲವೆಂದು ಜಾಯಿಂಟ' ಸೆಲೆಕ್ಟ್ ಕಮಿಟಿಯವರು ಅಭಿಪ್ರಾಯಪಟ್ಟಿದ್ದಾರೆ.

ಸಂಸ್ಥಾನಗಳಿಗೆ ಈ ರಿಯಾಯಿತಿಯನ್ನು ತೋರಿಸುವಾಗ ಆಲೋಚಿಸಬೇಕಾದ ಸಹಾಯ ಸೌಲಭ್ಯಗಳ ತಾರತಮ್ಯವನ್ನು ತಿಳಿಯಲು ದೇಶೀಯ ಸಂಸ್ಥಾನಗಳು ಮಾಡುವ ಸಹಾಯ ಯಾವ ಮೂಲಕವಿದೆ, ಅವು ಪಡೆವ ಸೌಲಭ್ಯಗಳೇನು ಎಂಬುದನ್ನು ಈ ಪಟ್ಟಿ ಸೂಚಿಸುತ್ತದೆ.

### ದೇಶೀಯ ಸಂಸ್ಥಾನಗಳು ಮಾಡುವ ಸಹಾಯ

೧. ಪೊಗದಿ
೨. ದತ್ತ ಮಂಡಲಗಳಿಂದ ಬರುವ ಆದಾಯ
೩. ಸಂಸ್ಥಾನಗಳ ಸೈನ್ಯಗಳು
೪. ಸುಂಕ
೫. ಅಬ್ಕಾರಿ (ಸಾಮ್ರಾಜ್ಯ ಮತ್ತು ಸಂಸ್ಥಾನೀಯ)
೬. ಟಂಕಸಾಲೆಯಿಂದ ಬರುವ ಆದಾಯ
೭. ಅಂಚೆ ಮತ್ತು ತಂತಿ
೮. ರೈಲ್ವೆಗಳು
೯. ಇತರ—
  (a) ರೈಲ್ವೆಗೆ ಸೇರಿದ ಭೂಮಿ
  (b) ದಂಡನ ಪ್ರದೇಶ
  (c) ಮತ್ತಿತರ

### ಅವು ಪಡೆಯುವ ಸೌಲಭ್ಯಗಳು

೧. ರಕ್ಷಣೆ
೨. ಸಾಮ್ರಾಜ್ಯ ಸೈನ್ಯಗಳು
೩. ಇತರ —
  (a) ಸುಂಕ
  (b) ಉಪ್ಪು

(c) ಟಂಕಸಾಲೆ ಮತ್ತು ಹಣಕಾಸಿನ ಚಲಾವಣೆ
(d) ಅಂಚೆ ಮತ್ತು ತಂತಿ
(e) ಇತರ

ಈ ಸಹಾಯ ಸೌಲಭ್ಯಗಳಿಗೆ ಸಂಕುಚಿತವಾದ ಅರ್ಥವನ್ನು ಕಲ್ಪಿಸದೆ ಒಟ್ಟು ಇಂಡಿಯಾದೇಶದ ಹಿತದೃಷ್ಟಿಯಿಂದ ಸಂಸ್ಥಾನಗಳು ಸಂಯುಕ್ತ ರಾಜ್ಯಾಂಗವ್ಯವಸ್ಥೆಗೆ ಸೇರಿ ಸಹಕರಿಸಲು ೧೯೩೫ನೆಯ ಇಸವಿಯ ಇಂಡಿಯಾದೇಶದ ರಾಜ್ಯಾಂಗ ವ್ಯವಸ್ಥೆ ಮಸೂದೆ ೧೪೭ನೆಯ ಕಲಂ ಪ್ರಕಾರ ಅವಕಾಶವಿದೆ. ದೇಶೀಯ ಸಂಸ್ಥಾನಗಳು ಸಲ್ಲಿಸುವ ಹಣ, ಅವು ಪಡೆಯುವ ಸೌಲಭ್ಯಗಳು ಇವುಗಳ ವಿಷಯದಲ್ಲಿ ಉಚಿತವಾದ ಮಾರ್ಗವೊಂದು ಏರ್ಪಟ್ಟು ಸಂಸ್ಥಾನಗಳು ಸಂಯುಕ್ತ ರಾಜ್ಯಾಂಗ ವ್ಯವಸ್ಥೆಗೆ ಸೇರಿ ರಾಷ್ಟ್ರದ ಶ್ರೇಯಸ್ಸನ್ನು ಸಾಧಿಸುವುದೆಂದು ನಿರೀಕ್ಷಿಸಬಹುದು.*

## ಪರಿಸಮಾಪ್ತಿ

ಸಾರ್ವಜನಿಕ ಹಣಕಾಸಿನ ತತ್ವಗಳೂ, ಪ್ರಯೋಗಗಳೂ ಇತ್ತೀಚೆಗೆ ಅನೇಕ ಬದಲಾವಣೆಗಳನ್ನು ಹೊಂದಿವೆ. ಆರ್ಥಿಕ ಮುಗ್ಗಟ್ಟು, ಸೈನ್ಯಸಂಗ್ರಹ, ಮತ್ತು ಯುದ್ಧದ ವಿಶೇಷ ಪರಿಸ್ಥಿತಿಗಳು ಹಣಕಾಸಿನ ವ್ಯವಹಾರದಲ್ಲಿ ಒಂದು ಕ್ರಾಂತಿಯನ್ನೇ ಉಂಟುಮಾಡಿವೆ. ಈ ದೃಷ್ಟಿಯಿಂದ ನೋಡಿದರೆ ಸಾರ್ವಜನಿಕ ಹಣಕಾಸಿನ ಹೊಸ ಮಾರ್ಗದ ದೃಷ್ಟಿ ಮೂರು ವಿಧವಾಗಿದೆ.

ಧನವಿನಿಯೋಗ, ಮತ್ತು ಉದ್ಯೋಗ ಇವುಗಳ ಮೇಲೆ ಸಾರ್ವಜನಿಕ ಹಣಕಾಸಿನ ವ್ಯವಸ್ಥೆಯಿಂದ ಆಗುವ ಪರಿಣಾಮಗಳನ್ನು ಪರಿಶೀಲಿಸಬೇಕು. ಆದುದರಿಂದ ದೇಶದ ಸಾಮಾನ್ಯ ಆರ್ಥಿಕರಚನೆಯ ಒಂದು ಅಂಗದಂತೆ ಸರಕಾರದ ಹಣಕಾಸಿನ ಯೋಜನೆಯನ್ನು ರಚಿಸುವುದು ಅವಶ್ಯಕ. ಇದು ಮೊದಲನೆಯದು.

ಆಗಾಗ್ಯೆ ಆರ್ಥಿಕ ಪ್ರಪಂಚದಲ್ಲಿ ಆಗುವ ಆಂದೋಲನಗಳಿಗೆ ಹೊಂದಿಸಿಕೊಂಡು, ದೀರ್ಘಕಾಲದ ಆಯವ್ಯಯದ ಅಂದಾಜು ಪಟ್ಟಿಗಳನ್ನು (Budget) ರಚಿಸಿ ಮುಗ್ಗಟ್ಟಿನ ಕಾಲದಲ್ಲಿ, ಸರಿತೂಗಿಸಿಕೊಂಡು, ಸಂಪತ್ತಿನ ಕಾಲದಲ್ಲಿ, ಬಲಪಡಿಸಿಕೊಂಡು ದೂರದೃಷ್ಟಿಯ ಯೋಜನೆಯನ್ನು ಮಾಡುವುದು. ಇದು ಎರಡನೆಯ ದೃಷ್ಟಿ.

ಸಾರ್ವಜನಿಕ ಹಣಕಾಸು ಪ್ರತ್ಯೇಕವಾದ ನಿಯಮಗಳಿಗೆ ಒಳಪಟ್ಟ ಒಂದು ಪವಿತ್ರವಾದ ಸ್ವತಂತ್ರವಿಷಯವೆಂದು ಭಾವಿಸದೆ, ದುಷ್ಪರಿಣಾಮಗಳು ಉಂಟಾಗದಂತೆ ತಮ್ಮ ಉದ್ದೇಶ ಸಾಧನೆಮಾಡಲು ಸಾಧನಾಮಾರ್ಗವೆಂದು ಭಾವಿಸುವುದು. ಇದು ಮೂರನೆಯ ದೃಷ್ಟಿ.

* ಇಂಡಿಯಾ ದೇಶವು ಸ್ವತಂತ್ರ ರಾಷ್ಟ್ರವಾದ ಮೇಲೆ ಹೊಸ ರಾಜಕೀಯ ವ್ಯವಸ್ಥೆ ಏರ್ಪಟ್ಟು, ಪ್ರತ್ಯೇಕವಾದ ಸಾರ್ವಜನಿಕ ಹಣಕಾಸಿನ ಸಂಬಂಧಗಳು ನಿರ್ಮಿತವಾಗಿವೆ.

ಸಾಮಾನ್ಯವಾದ ಮಾರ್ಗದಿಂದ ಸರಕಾರದ ಉದ್ದೇಶಸಾಧನೆಯಾಗದಿದ್ದರೆ ಮೂಲಧನದ ಮತ್ತು ಹಣದ ಚಲಾವಣೆಯ ಹತೋಟಿ, ಬಲಾತ್ಕಾರ ಸಂಗ್ರಹ, ಇವೇ ಮೊದಲಾದ ವಿಶೇಷ ಮಾರ್ಗಗಳನ್ನು ಹುಡುಕಬೇಕು.

ಹಿಂದೆ ಸಾರ್ವಜನಿಕ ಹಣಕಾಸಿನ ನೀತಿ ರಾಷ್ಟ್ರದ ಆರ್ಥಿಕ ಮತ್ತು ಸಂಪದಭಿವೃದ್ಧಿಯ ಕಡೆ ತಾತ್ಸಾರಭಾವದಿಂದಿತ್ತು. ಅಭಿವೃದ್ಧಿಕಾರ್ಯಗಳ ನಿರ್ವಾಹಕ್ಕಾಗಿ ಹಣವಿಲ್ಲವೆಂಬ ಮಾತು ಸಾಮಾನ್ಯವಾಗಿತ್ತು. ರಾಷ್ಟ್ರದಲ್ಲಿ ಈಗ ಅತ್ಯಗತ್ಯವಾಗಿ ಬೇಕಾದುದೆಂದರೆ, ದೇಶದ ಅಭ್ಯುದಯ ಕಾರ್ಯಗಳಿಗೆ ಮೂಲಧನವನ್ನೊದಗಿಸಿ ಎಲ್ಲರಿಗೂ ಉದ್ಯೋಗಕೊಡಬಲ್ಲ ಆರ್ಥಿಕ ರಚನೆ. ಇಂತಹ ಯೋಜನೆಯಿಂದ ಮಾತ್ರ, ದೇಶದ ದಾರಿದ್ರ್ಯ ತೊಲಗಿ ಸುಖಶಾಂತಿ ಸಂಪತ್ತುಗಳು ನೆಲಸಲು ಸಾಧ್ಯ. ಇದರಿಂದ ಸಾರ್ವಜನಿಕ ಹಣಕಾಸಿನ ನೀತಿಗೆ ಹೆಚ್ಚಿನ ಪ್ರಾಶಸ್ತ್ಯ ದೊರೆಯುತ್ತಿದೆ.

---

ವಸೂಲಾಗುವುದು. ಉಳಿದ ಮಾರ್ಗಗಳಿಂದ ಎಷ್ಟು ಹಣ ದೊರಕುವುದು? ಮೈಸೂರಿನ ಪ್ರಜೆಗೂ ಇಂಡಿಯಾ ಪ್ರಾಂತಗಳಲ್ಲಿನ ಪ್ರಜೆಗೂ ಸರಕಾರದಿಂದ ದೊರೆಯುವ ಸೌಲಭ್ಯಗಳಲ್ಲಿರುವ ವ್ಯತ್ಯಾಸವೇನು? ಮೈಸೂರು ಸರಕಾರದ ಸಾಲದ ರೀತಿ ಹೇಗಿದೆ? ಸ್ಥಳೀಯ ಸಂಸ್ಥೆಗಳ ಹಣಕಾಸಿನ ಸ್ಥಿತಿಯೇನು? ಇವೇ ಮೊದಲಾದ ಹಲವಾರು ಪ್ರಶ್ನೆಗಳಿಗೆ ಉತ್ತರ ದೊರೆಯಬೇಕಾದರೆ ಮೈಸೂರಿನ ಸಾರ್ವಜನಿಕ ಆಯವ್ಯಯದ ಪರಿಚಯ ಆವಶ್ಯಕ. ಹಿಂದಿನ ಎರಡು ಭಾಗಗಳಲ್ಲಿ ಅನುಸರಿಸುವ ಕ್ರಮವನ್ನೇ ಹೆಚ್ಚುಕಡಿಮೆ ಅನುಸರಿಸಿ, ಮೈಸೂರಿನ ಆಯವ್ಯಯದ ಅಚ್ಚುಕಟ್ಟನ್ನು ಈ ಭಾಗದಲ್ಲಿ ವರ್ಣಿಸಿರುತ್ತದೆ. *

---

* ೧೯೪೦ ರಿಂದೀಚೆಗೆ ಮೈಸೂರು ಸರಕಾರದ ಹುಟ್ಟುವಳಿ ವೆಚ್ಚ ಮತ್ತು ಸಾಲದ ಬೆಳವಣಿಗೆಗೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಮುಂದಿನ ಪ್ರಕರಣಗಳಲ್ಲಿ ಸೇರಿಸಿಲ್ಲ. ೧೯೫೦ ರಲ್ಲಿ ಜಾರಿಗೆ ಬಂದಿರುವ ಇಂಡಿಯಾ ರಾಜ್ಯಾಂಗ ಶಾಸನದ ಮೇರೆ, ಮೈಸೂರಿನ ರಾಜಕೀಯ ಸ್ಥಾನವು ಬದಲಾವಣೆ ಹೊಂದಿರುವಂತೆಯೇ, ಸರಕಾರದ ಹಣಕಾಸಿನ ವ್ಯವಸ್ಥೆಯಲ್ಲಿಯೂ ಬಹು ಮುಖ್ಯವಾದ ವ್ಯತ್ಯಾಸಗಳುಂಟಾಗಿವೆ. ಈ ವಿಷಯಗಳನ್ನು ಪ್ರತ್ಯೇಕವಾಗಿ ವರ್ಣಿಸುವುದು ಉತ್ತಮವೆಂದು ತಿಳಿದು, ಮುಂದಿನ ಪ್ರಕರಣಗಳಲ್ಲಿನ ಅಂಕಿ ಅಂಶಗಳಲ್ಲಿ ಈ ಬದಲಾವಣೆಗಳನ್ನು ಸೂಚಿಸಿರುವುದಿಲ್ಲ.

# ಪ್ರಕರಣ ೨

## ಸಾರ್ವಜನಿಕ ವೆಚ್ಚ

ಸಾರ್ವಜನಿಕ ವೆಚ್ಚದ ಬಾಬುಗಳು ಹಲವಾರುಂಟು. ವೆಚ್ಚದ ಬಾಬುಗಳನ್ನು ವಿಂಗಡಿಸಿ ತಯಾರುಮಾಡುವ ಮೈಸೂರು ಸರಕಾರದ ಬಡ್ಜೆಟ್ ಅಂದಾಜುಗಳಲ್ಲಿ ಕಂಡುಬರುವ ವಿವರಗಳನ್ನು ಒಟ್ಟುಗೂಡಿಸಿದ ಕೆಲವು ಅಂಕಿಪಟ್ಟಿಗಳ ಸಹಾಯದಿಂದ ವೆಚ್ಚದ ಸ್ವಭಾವ ಮತ್ತು ವೈಶಿಷ್ಟ್ಯದ ಪರಿಚಯವನ್ನು ಪಡೆಯುವುದು ಉತ್ತಮ. ಸಾಮಾನ್ಯ ಹುಟ್ಟುವಳಿ ವಸೂಲಿಗಾಗಿ ತಗಲುವ ವೆಚ್ಚ, ಗಣಿಗಳ ಆದಾಯಕ್ಕೆ ಸಂಬಂಧಪಟ್ಟ ವೆಚ್ಚ, ಸಾಲದಬಡ್ಡಿ ಮತ್ತು ತೀರ್ವೆನಿಧಿ, ಅರಮನೆ, ಒಳ ಆಡಳಿತ, ಒಳರಕ್ಷಣೆ, ಸಾರ್ವಜನಿಕ ಕಾಮಗಾರಿಗಳು, ಸಮಾಜದ ವಿದ್ಯೆ ಮತ್ತು ಸಂಪತ್ತು ಇವುಗಳ ಅಭಿವೃದ್ಧಿಗಾಗಿ ತಗಲುವ ವೆಚ್ಚ, ಸ್ಥಳೀಯ ಸಂಸ್ಥೆಗಳಿಗಾಗಿ ಕೊಡುವ ಪೋಷಕದ್ರವ್ಯ, ಸೈನ್ಯದ ವೆಚ್ಚ ಮತ್ತು ಪೂಗದಿ ಇವೇ ಮೊದಲಾದ ಬಾಬುಗಳು ಮುಖ್ಯವಾದುವು. ಸಾಲದ ರೂಪದಲ್ಲಿ ಸಂಗ್ರಹಿಸಿದ ವೆಚ್ಚದ ವಿವರವನ್ನು ಪ್ರತ್ಯೇಕವಾಗಿ ತಿಳಿಸಿರುತ್ತದೆ. ಕಳೆದ ಮೂವತ್ತು ವರ್ಷಗಳಲ್ಲಿ ನಮ್ಮ ದೇಶದಲ್ಲಿ ಸಾರ್ವಜನಿಕ ವೆಚ್ಚದ ಮೊತ್ತ ಬೆಳೆದಿರುವುದಲ್ಲದೆ, ಕೆಲವು ಬಾಬುಗಳಲ್ಲಿ ಸರಕಾರದ ಆಸಕ್ತಿ ಹೆಚ್ಚಿ ಪ್ರಜಾ ಸೌಕರ್ಯಕ್ಕಾಗಿ ಅಧಿಕವಾದ ಹಣವನ್ನು ಖರ್ಚುಮಾಡುತ್ತಿರುವುದನ್ನು ನಾವು ಮುಖ್ಯವಾಗಿ ಗಮನಿಸಬೇಕು.

ಮೈಸೂರು ಸರಕಾರದ ಸಾಮಾನ್ಯ ವೆಚ್ಚದ ವಿವರ.

| ವೆಚ್ಚದ ಬಾಬುಗಳು | | ೧೯೧೦–೧೧ | ೧೯೧೫–೧೬ |
|---|---|---|---|
| ಹುಟ್ಟುವಳಿ ವಸೂಲಿಗಾಗಿ | ... | ೩೧·೦೮ | ೩೩·೫೫ |
| ಗಣಿಗಳ ಆದಾಯಕ್ಕಾಗಿ ವೆಚ್ಚ | ... | ೧·೪೦ | ೧·೬೬ |
| ಬಡ್ಡಿ ಮತ್ತು ಸಾಲತೀರ್ವೆನಿಧಿ | ... | ೫·೧೯ | ೬·೬೦ |
| ಅರಮನೆ | ... | ೨೩·೪೦ | ೨೩·೪೦ |
| ಒಳಆಡಳಿತ (ಸಿವಿಲ್ ಆಡಳಿತ) | ... | ೨೫·೨೫ | ೨೫·೨೩ |
| ಒಳರಕ್ಷಣೆ | ... | ೨೩·೩೨ | ೨೫·೫೩ |
| ಪಬ್ಲಿಕ್ ಕಾಮಗಾರಿಗಳು | ... | ೨೩·೯೩ | ೨೭·೩೨ |
| ವಿದ್ಯೆ ಮತ್ತು ಸಂಪದಭಿವೃದ್ಧಿ | ... | ೧೪·೮೪ | ೩೧·೪೬ |
| ಸ್ಥಳೀಯಸಂಸ್ಥೆಗಳಿಗೆ ಪೋಷಕದ್ರವ್ಯ | ... | ೨·೬೦ | ೩·೦ |
| ಸೈನ್ಯ ಮತ್ತು ರಕ್ಷಣೆ | ... | ೪೮·೫೪ | ೪೭·೫೧ |
| ಹುಟ್ಟುವಳಿಯಿಂದ ಆದ ಒಟ್ಟು ಖರ್ಚು | ... | ೧೯೯·೫೫ | ೨೨೫·೨೬ |

ಒಟ್ಟು ವೆಚ್ಚದ ಮೊತ್ತದಲ್ಲಿ ಬೇರೆಬೇರೆ ಬಾಬುಗಳಿಗೆ

| | ವೆಚ್ಚದ ಬಾಬುಗಳು | | ೧೯೧೦–೧೧ | ೧೯೧೫–೧೬ |
|---|---|---|---|---|
| ೧. | ಹುಟ್ಟುವಳಿ ವಸೂಲಿಗಾಗಿ | ... | ೧೫·೬ | ೧೪·೯ |
| ೨. | ಗಣಿಗಳ ಆದಾಯಕ್ಕಾಗಿ | ... | ೦·೭ | ೦·೭ |
| ೩. | ಬಡ್ಡಿ ಮತ್ತು ಸಾಲತೀರ್ವೆನಿಧಿ | .. | ೨·೬ | ೨·೯ |
| ೪. | ಅರಮನೆ | ... | ೧೧·೮ | ೧೦·೪ |
| ೫. | ಸಿವಿಲ್ ಆಡಳಿತ | ... | ೧೨·೭ | ೧೦·೨ |
| ೬. | ಒಳರಕ್ಷಣೆ | ... | ೧೧·೨ | ೧೧·೩ |
| ೭. | ಪಬ್ಲಿಕ್ ಕಾಮಗಾರಿಗಳು | ... | ೧೨·೦ | ೧೨·೧ |
| ೮. | ವಿದ್ಯೆ ಮತ್ತು ಸಂಪದಭಿವೃದ್ಧಿ | ... | ೭·೫ | ೧೪·೦ |
| ೯. | ಸ್ಥಳೀಯಸಂಸ್ಥೆಗಳಿಗೆ ಪೋಷಕದ್ರವ್ಯ | | ೧·೩ | ೧·೩ |
| ೧೦. | ಸೈನ್ಯ ಮತ್ತು ರಕ್ಷಣೆ | ... | ೨೪·೦ | ೨೧·೧ |

ಮೇಲಿನ ಅಂಕಿಗಳನ್ನು ನೋಡಿದರೆ, ಮೈಸೂರು ಸರಕಾರ ಬಡ್ಡಿ ಮತ್ತು ಸಾಲತೀರ್ವೆನಿಧಿ, ಶಿಕ್ಷಣ ಮತ್ತು ಸಂಪದಭಿವೃದ್ಧಿ ಕಾರ್ಯಗಳಿಗಾಗಿ ಈಚೆಗೆ ಹೆಚ್ಚ ಹಣ ವೆಚ್ಚಮಾಡುತ್ತಿರುವ ಅಂಶ ನಮ್ಮ ಗಮನಕ್ಕೆ ಬರುವುದು ಬಡ್ಡಿ ಮತ್ತ ಸಾಲತೀರ್ವೆನಿಧಿ ಬಾಬಿನಲ್ಲಿ ವೆಚ್ಚ ಹೆಚ್ಚಿರುವುದು ಸರಕಾರ ಅನುಸರಿಸುತ್ತಿರು ಅಭಿವೃದ್ಧಿದಾಯಕವಾದ ಸಾರ್ವಜನಿಕ ಸಾಲದ ನೀತಿಯ ಕುರುಹು. ಸಾಲವ ಕೆರೆಕಟ್ಟೆ, ನೀರಾವರಿ ಕಾಮಗಾರಿಗಳು, ವಿದ್ಯುಚ್ಛಕ್ತಿ ಕೆಲಸ, ರೈಲು ಇವೇ ಮೊ ಲಾದ ಉದ್ಯಮಗಳಿಗೆ ಬಂಡವಾಳ ಒದಗಿಸಿ ಕೈಗಾರಿಕೆಗಳಿಗೆ ಬೆಂಬಲಕೊ

(ಲಕ್ಷ ರೂಪಾಯಿಗಳು)

| ೧೯೨೦–೨೧ | ೧೯೨೫–೨೬ | ೧೯೩೦–೩೧ | ೧೯೩೫–೩೬ | ೧೯೪೦–೪೧ |
|---|---|---|---|---|
| ೫೦·೨೯ | ೪೭·೭೨ | ೫೩·೫೦ | ೪೬·೮೫ | ೫೦·೦೧ |
| ೨·೦೩ | ೨·೧೧ | ೨ ೧೮ | ೨·೦೬ | ೨·೨೦ |
| ೨೧·೭೬ | ೫೪·೭೧ | ೭೨ ೧೧ | ೮೮·೪೪ | ೭೧·೫೨ |
| ೨೩·೫೦ | ೨೬·೧೦ | ೨೬·೧೦ | ೨೨·೦೩ | ೨೫·೪೫ |
| ೩೯·೯೪ | ೩೬·೫೬ | ೪೨·೫೯ | ೪೫·೨೯ | ೫೭·೦೩ |
| ೪೧·೪೨ | ೩೮·೨೦ | ೪೬·೨೨ | ೪೭·೦೫ | ೫೫·೨೬ |
| ೩೭·೧೭ | ೨೯·೩೯ | ೨೫·೦೫ | ೨೪·೨೪ | ೬೬·೨೪ |
| ೬೦·೯೩ | ೫೭·೮೦ | ೭೨·೬೪ | ೬೧·೮೯ | ೭೨·೦೯ |
| ೫·೫೧ | ೩·೯೫ | ೫·೮೫ | ೫·೦೬ | ೧೫·೬೦ |
| ೬೦·೯೮ | ೫೧·೩೪ | ೪೧·೬೩ | ೩೯·೬೦ | ೪೨·೪೮ |
| ೩೪೩·೫೩ | ೩೪೭·೮೮ | ೩೮೭·೮೭ | ೩೮೨ ೫೧ | ೪೫೭·೮೭ |

ತಗಲುವ ವೆಚ್ಚದ ಶೇಕಡಾ ಭಾಗ

| ೧೯೨೦–೨೧ | ೧೯೨೫–೨೬ | ೧೯೩೦–೩೧ | ೧೯೩೫–೩೬ | ೧೯೪೦–೪೧ |
|---|---|---|---|---|
| ೧೫·೩ | ೧೩·೮ | ೧೩·೫ | ೧೨·೨ | ೧೦·೭ |
| ೦·೬ | ೦·೬ | ೦·೬ | ೦·೬ | ೦·೪ |
| ೬·೬ | ೧೬·೦ | ೧೮·೩ | ೨೩·೦ | ೧೫·೬ |
| ೭·೨ | ೭·೯ | ೬·೬ | ೬·೦ | ೫·೦ |
| ೧೨·೨ | ೧೦·೫ | ೧೦·೮ | ೧೦·೮ | ೧೨·೨ |
| ೧೨·೬ | ೧೧·೦ | ೧೧·೭ | ೧೨·೩ | ೧೧·೭ |
| ೧೧·೩ | ೮·೫ | ೮·೯ | ೬·೩ | ೧೪·೬ |
| ೧೮·೬ | ೧೬·೭ | ೧೮·೪ | ೧೬·೦ | ೧೫·೨ |
| ೧·೭ | ೧·೧ | ೧·೫ | ೧·೩ | ೩·೩ |
| ೧೮·೬ | ೧೪·೮ | ೧೦·೬ | ೧೦·೩ | ೯·೦ |

ಸಂಪದಭಿವೃದ್ಧಿ ಕಾರ್ಯಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿಸುವುದರಿಂದ ದೇಶದ ಪ್ರಜೆಗಳಿಗೆ ಸಾರ್ವಜನಿಕ ಸೌಕರ್ಯಗಳು ಹೆಚ್ಚುವುವು. ಸರಕಾರಕ್ಕೆ ಉತ್ಪತ್ತಿ ಹೆಚ್ಚುವ ಸಂಭವವೂ ಉಂಟು.

ಇಂಡಿಯಾದಲ್ಲಿರುವ ಕೆಲವು ದೇಶೀಯ ಸಂಸ್ಥಾನಗಳ ಸರಕಾರದ ವೆಚ್ಚದ ವಿಂಗಡಣೆ ಕ್ರಮಕ್ಕೂ ಮೈಸೂರು ಸರಕಾರದ ವೆಚ್ಚದ ವಿಂಗಡಣೆ ಕ್ರಮಕ್ಕೂ ಇರುವ ತಾರತಮ್ಯವನ್ನು ಪರಿಶೀಲಿಸುವುದರಿಂದ ನಮ್ಮ ಸರಕಾರದ ವೆಚ್ಚದ ನೀತಿ ಮತ್ತಷ್ಟು ಸ್ಪಷ್ಟವಾಗುವುದು.

## ಕೆಲವು ದೇಶೀಯ ಸಂಸ್ಥಾನಗಳ

(೧೯೩೮–೩೯ರಲ್ಲಿನ ಅಂಕಿಗಳು)

| ನಂ | ವೆಚ್ಚದ ಬಾಬು | ಹೈದರಾಬಾದು | ತಿರುವಾಂಕೂರು |
|---|---|---|---|
| ೧ | ಹುಟ್ಟುವಳಿ ವಸೂಲಿಗಾಗಿ ... | ೧೫೩·೦೨ (೧೬·೪%) | ೩೦·೧೬ (೧೧·೮%) |
| ೨ | ಸಾಮಾನ್ಯ ಆಡಳಿತ ... | ೧೯೭·೫೮ (೨೧·೧%) | ೭೫·೪೫ (೨೯·೫%) |
| ೩ | ಅರಮನೆ ... | ೬೧·೯೭ ( ೬·೬%) | ೧೮·೭೧ ( ೭·೩%) |
| ೪ | ಸಾಲದ ಹೊರೆ ... | ೬೯·೭೨ ( ೭·೫%) | ೧೧·೯೦ ( ೪·೭%) |
| ೫ | ಸೈನ್ಯ ... | ೮೬·೨೦ ( ೯·೨%) | ೧೦·೨೦ ( ೪·೦%) |
| ೬ | ವಿದ್ಯಾಭ್ಯಾಸ ... | ೯೯·೦೧ (೧೦·೬%) | ೫೦·೪೯ (೧೯·೮%) |
| ೭ | ವೈದ್ಯ ಮತ್ತು ಆರೋಗ್ಯ ... | ೩೩·೦೪ ( ೩·೫)% | ೧೪·೧೬ (೫·೫%) |
| ೮ | ವ್ಯವಸಾಯ ಮತ್ತು ಕೈಗಾರಿಕೆ | ೨೩·೭೩ ( ೨·೫)% | ೫·೨೧ (೨·೦%) |
| ೯ | ಪಬ್ಲಿಕ್ ಕಾಮಗಾರಿಗಳು ... | ... | ೩೦·೭೫ (೧೨·೦%) |
| | ಒಟ್ಟು ... | ೯೩೪·೪೯ | ೨೫೫·೬೪ |

ವೆಚ್ಚದ ವಿವರ

ಲಕ್ಷ ರೂಪಾಯಿಗಳು

| ಕೊಚ್ಚಿನ್ | ಬರೋಡ | ಕಾಶ್ಮೀರ್ | ಮೈಸೂರು |
|---|---|---|---|
| ೧೦·೩೭ (೧೦·೮%) | ೨೭·೭೨ (೧೨·೪%) | ೨೮·೬೧ (೧೨·೫)% | ೪೯·೦೭(೧೨·೨%) |
| ೨೩·೨೦ (೨೪·೩%) | ೫೫·೨೯ (೨೪·೭%) | ೭೦·೮೭ (೩೦·೯)% | ೮೦·೯೦(೨೦·೧%) |
| ೮·೧೬ ( ೮·೫%) | ೨೮·೯೨ (೧೨·೯%) | ೨೬·೨೮ (೧೧·೫%) | ೨೯·೨೬(೭·೩%) |
| ೫·೯೬ ( ೬·೨%) | ೨·೭೨ ( ೧·೨%) | ೨·೧೫ (೦·೯%) | ೭೭·೧೮(೧೯·೨%) |
| ೧·೧೨ ( ೧·೨%) | ೨೨·೦೦ ( ೯·೮%) | ೪೭·೮೦ (೨೦·೮%) | ೧೫·೬೭(೩·೯%) |
| ೧೮·೬೭ (೧೯·೫%) | ೩೮·೨೫ (೧೭·೧%) | ೨೦·೭೭ (೯·೨%) | ೫೪·೦೦(೧೩·೪%) |
| ೭-೩೨ (೭·೭%) | ೮·೩೮ ( ೩·೭%) | ೯·೦೪ (೪·೦%) | ೧೯·೭೩(೪·೯%) |
| ೫ ೧೨ (೫·೪%) | ೮·೫೧ ( ೩·೯%) | ೬·೭೭ (೩·೦%) | ೧೫·೫೦(೩·೮%) |
| ೧೨·೫೬ (೧೩·೧%) | ೩೨ ೧೨ (೧೪·೩%) | ೧೭·೨೦ (೭·೫%) | ೪೨·೧೮(೧೦·೫%) |
| ೯೫·೬೫ | ೨೨೩·೯೦ | ೨೨೯·೪೯ | ೪೦೨·೬೧ |

ಮೈಸೂರಿನಲ್ಲಿ ಸಾಮಾನ್ಯ ಆಡಳಿತ, ಅರಮನೆ ಮತ್ತು ಸೈನ್ಯಗಳಿಗಾಗಿ ಒಟ್ಟು ವೆಚ್ಚದಲ್ಲಿ ಇತರ ದೇಶೀಯ ಸಂಸ್ಥಾನಗಳಿಗಿಂತ ಕಡಮೆಭಾಗ ವೆಚ್ಚವಾಗುವುದು. ವರಮಾನದ ಮೊತ್ತ ಹೆಚ್ಚಾದಂತೆಲ್ಲ ಶೇಕಡ ದಾಮಾಷಾಪ್ರಕಾರ ವಸೂಲಿ ಖರ್ಚು ಕಡಮೆಯಾಗುವುದು ಸಹಜ. ಈಗ ವೆಚ್ಚದ ಬಾಬುಗಳಲ್ಲಿ ಕೆಲವನ್ನು ಸ್ಥೂಲವಾಗಿ ವಿಮರ್ಶಿಸೋಣ.

## ೧. ಹುಟ್ಟುವಳಿ ವಸೂಲಿಗಾಗಿ ವೆಚ್ಚ

ಮೈಸೂರು ಸರಕಾರದ ಹುಟ್ಟುವಳಿ ಬಾಬುಗಳೆಂದು ಬಡ್ಜೆಟ್‌ನಲ್ಲಿ ಪ್ರತ್ಯೇಕವಾಗಿ ಪರಿಗಣಿಸಲ್ಪಟ್ಟಿರುವ ಬಾಬುಗಳು ಮುಖ್ಯವಾಗಿ ಆರು:—

೧. ಭೂಕಂದಾಯ
೨. ವರಮಾನದ ತೆರಿಗೆ ಮತ್ತು ವಿವಿಧ ತೆರಿಗೆಗಳು
೩. ಅಬ್ಕಾರಿ
೪. ಸ್ಟ್ಯಾಂಪು
೫. ರಿಜಿಸ್ಟ್ರೇಷನ್
೬. ಅರಣ್ಯದ ಖಾತೆ

ಹುಟ್ಟುವಳಿ ವಸೂಲಿಗಾಗಿ ಇತರ ದೇಶೀಯ ಸಂಸ್ಥಾನಗಳಿಗಿಂತಲೂ ಮೈಸೂರಿನಲ್ಲಿ ಒಟ್ಟು ವೆಚ್ಚದಲ್ಲಿನ ಹೆಚ್ಚು ಭಾಗವನ್ನು ಉಪಯೋಗಿಸುವುದಿಲ್ಲವೆಂಬುದು ಮೇಲಿನ ಅಂಕೆಗಳಿಂದ ಗೊತ್ತಾಗುತ್ತದೆ. ಒಟ್ಟು ಹುಟ್ಟುವಳಿಯನ್ನು ಗಮನದಲ್ಲಿಟ್ಟು ವಸೂಲಿ ಖರ್ಚಿನ ಭಾಗವನ್ನು ಲೆಕ್ಕಮಾಡಿದರೆ ಆದಾಯದಲ್ಲಿ ಶೇಕಡ ೧೯ ಅಥವಾ ೨೦ ಭಾಗದಷ್ಟು ಹಣ ಈ ಬಾಬಿಗೆ ವಿನಿಯೋಗವಾಗುತ್ತದೆಂದು ಹೇಳಬಹುದು. ಬ್ರಿಟಿಷ್ ಇಂಡಿಯಾದಲ್ಲಿನ ಪ್ರಾಂತ ಸರಕಾರಗಳು ಈ ಬಾಬಿಗಾಗಿ ವಿನಿಯೋಗಿಸುತ್ತಿದ್ದ ಹಣದ ಪ್ರಮಾಣ ಈರೀತಿ ಇದೆ :—

ಪ್ರಾಂತಗಳಲ್ಲಿ ೧೯೩೮–೩೯ರಲ್ಲಿ ಹುಟ್ಟುವಳಿ ವಸೂಲಿಗಾಗಿ ಆದ ವೆಚ್ಚದ ವಿವರ :—

(ಲಕ್ಷ ರೂ.ಗಳು)

| ದೇಶ | | ಹುಟ್ಟುವಳಿ | ವಸೂಲಿವೆಚ್ಚ | ಶೇಕಡ |
|---|---|---|---|---|
| ಮದರಾಸು | .... | ೧೨೨೧·೭೧ | ೨೦೭·೨೬ | ೧೬·೯ |
| ಬೊಂಬಾಯಿ | .... | ೯೫೩·೧೨ | ೧೭೬·೫೪ | ೧೮·೫ |
| ಬಂಗಾಳ | .... | ೮೪೮·೭೨ | ೯೭·೬೪ | ೧೧·೫ |
| ಸಂಯುಕ್ತಪ್ರಾಂತ | .... | ೯೪೭·೪೦ | ೧೫೪·೧೭ | ೧೬·೩ |
| ಬಿಹಾರ್ ಮತ್ತು ಒರಿಸ್ಸ | .... | ೩೯೪·೬೪ | ೩೮·೧೦ | ೯·೬ |
| ಮಧ್ಯಪ್ರಾಂತ | .... | ೩೭೨·೩೪ | ೬೪·೭೨ | ೧೭·೪ |
| ಪಂಜಾಬು | .... | ೪೯೦·೨೭ | ೮೬·೪೬ | ೧೭·೬ |
| ಮೈಸೂರು | .... | ೨೫೭·೯೨ | ೪೯·೦೭ | ೧೯·೦ |

ಮೈಸೂರು ದೇಶದಲ್ಲಿ ಈಚೆಗೆ ಹುಟ್ಟುವಳಿ ಹೆಚ್ಚಿದಾಗ್ಯೂ ಈ ಬಾಬಿನ ವೆಚ್ಚದ ಮೊತ್ತ ಕಡಿಮೆಯಾಗಿರುತ್ತದೆ. ೧೯೩೨ರಲ್ಲಿ ಖರ್ಚು ಖೋತಾ ಸಮಿತಿಯವರು ಮಾಡಿದ ಸಲಹೆಗಳನ್ನು ಅನುಸರಿಸಿದ ಕಾರಣದಿಂದ ವೆಚ್ಚ ಸ್ವಲ್ಪಮಟ್ಟಿಗೆ ಕಡಮೆ ಯಾಯಿತು.

| ವರ್ಷ | | ಹುಟ್ಟುವಳಿ | ವಸೂಲಿಗಾಗಿ ವೆಚ್ಚ |
|---|---|---|---|
| ೧೯೧೦–೧೧ | .... | ೧೭೭.೯೯ ಲಕ್ಷ ರೂ. | ೩೦.೦೮ ಲಕ್ಷ ರೂ. |
| ೧೯೨೦–೨೧ | .... | ೧೪೪.೭೪ ,, | ೫೦.೨೯ ,, |
| ೧೯೩೦–೩೧ | .... | ೧೪೩.೨೮ ,, | ೫೩.೫೦ ,, |
| ೧೯೪೦–೪೧ | .... | ೨೭೧.೩೭ ,, | ೫೦.೬೭ ,, |

## ೨. ಸಮಾಜದ ರಕ್ಷಣೆಗಾಗಿ ವೆಚ್ಚ

(a) ಶತ್ರುಭಯದಿಂದ ಪ್ರಜೆಗಳನ್ನು ಕಾಪಾಡುವುದು ಸರಕಾರದ ಮುಖ್ಯ ಕರ್ತವ್ಯ. ಇದಕ್ಕಾಗಿ ಶಸ್ತ್ರಸಜ್ಜಿತವಾದ ಸೈನ್ಯವನ್ನು ಇಡಬೇಕು. ಪೊಗದಿ ಮೊದಲಾದ ಇತರ ವಿಧದ ವೆಚ್ಚಗಳನ್ನು ಸೇರಿಸಿ ಈ ಬಾಬಿನ ವೆಚ್ಚವನ್ನು ನಿರ್ಧರಿಸುವುದು ರೂಢಿಯಲ್ಲಿದೆ.

ಸ್ವತಂತ್ರ ದೇಶಗಳಲ್ಲಿ ರಕ್ಷಣೆಯ ಬಾಬಿಗಾಗಿ ಹೆಚ್ಚಿನ ವೆಚ್ಚಮಾಡಬೇಕಾಗುತ್ತದೆ. ಮೈಸೂರಿನಂತೆ ದೇಶದ ಒಳನಾಡಿನಲ್ಲಿರುವ ದೇಶೀಯ ಸಂಸ್ಥಾನದಲ್ಲಿ ಶತ್ರುಭಯ ಹೆಚ್ಚಾಗಿರುವುದಿಲ್ಲ. ಇದರಿಂದ ನಮ್ಮ ಸರಕಾರದ ರಕ್ಷಣಾವ್ಯಯ ಕಡಿಮೆ. ಆದರೆ ರಕ್ಷಣೆಗೋಸ್ಕರ ಮೈಸೂರು ಸರಕಾರ ಮಾಡುವ ಪ್ರತ್ಯಕ್ಷವಾದ ವೆಚ್ಚಕ್ಕಿಂತಲೂ ಇಲ್ಲಿಯ ಪ್ರಜೆಗಳು ಇಂಡಿಯಾ ಸರಕಾರಕ್ಕೆ ತೆರುವ ಪರೋಕ್ಷವಾದ ತೆರಿಗೆ ಹೊರೆ ಹೆಚ್ಚು.

ಮೈಸೂರು ಸರಕಾರದ ಸೈನ್ಯದ ಖಾತೆಯ ಖರ್ಚು ಮತ್ತು ಇಂಡಿಯಾ ಸರಕಾರಕ್ಕೆ ಸಲ್ಲಿಸುವ ಪೊಗದಿ, ರಕ್ಷಣಾವ್ಯಯದ ಪ್ರತ್ಯಕ್ಷಭಾಗ. ಮೈಸೂರು ಸರಕಾರದ ಖರ್ಚುವಹಿಸಿ ಇಟ್ಟಿರುವ ಸೈನ್ಯದ ಬಲ ೧,೫೦೦. ೧೯೧೦–೧೧ರಲ್ಲಿ ಸೈನ್ಯದ ಸಂಖ್ಯೆ ೩,೦೦೦ ಇದ್ದುದು ೧೯೩೭–೩೮ರಲ್ಲಿ ೧,೪೦೦ಕ್ಕೆ ಇಳಿಯಿತು. ಇದಕ್ಕಾಗಿ ೧೯೪೦–೪೧ರಲ್ಲಿ ಸುಮಾರು ಹದಿನೆಂಟೂವರೆ ಲಕ್ಷ ರೂಪಾಯಿಗಳ ಖರ್ಚು ಅಂದಾಜ ಮಾಡಲಾಗಿತ್ತು. ಇದರ ಜೊತೆಗೆ ಇಂಡಿಯಾ ಸರಕಾರಕ್ಕೆ ಸಲ್ಲಿಸುವ ಪೊಗದಿ ಮೊಬಲಗು ೧೯.೧೧ ಲಕ್ಷ ರೂಪಾಯಿಗಳನ್ನು ಸೇರಿಸಬೇಕು.

೧೮೮೧ರಲ್ಲಿ ಮೈಸೂರಿನಲ್ಲಿ ಪುನಃ ಒಡೆಯರ ಆಳ್ವಿಕೆ ಸ್ಥಾಪಿತವಾದಾಗ ಅಲ್ಲಿಂದ ಈಚೆಗೆ ಬ್ರಿಟಿಷ್ ಸರಕಾರ ನಮ್ಮ ರಾಜ್ಯದ ರಕ್ಷಣೆಗೋಸ್ಕರ ಪೊಗದಿಯನ್ನು ತೆಗೆದುಕೊಳ್ಳುವುದಾಗಿ ನಿಷ್ಕರ್ಷಿಸಿತು. ಇಂದಿನವರೆಗೂ ಈ ಒಪ್ಪಂದ ನಡೆದುಬಂದು ೧೮೯೬ರ ವರೆಗೆ ವರ್ಷಕ್ಕೆ ೨೪½ ಲಕ್ಷ ರೂಪಾಯಿಗಳನ್ನೂ ಅಲ್ಲಿಂದ ೧೯೨೭ರ ವರೆಗೆ ೩೫ ಲಕ್ಷ ರೂಪಾಯಿಗಳನ್ನೂ ೧೯೨೭ರಿಂದ ೧೯೩೮ರ ವರೆಗೆ ೨೪½ ಲಕ್ಷ ರೂಪಾಯಿಗಳನ್ನೂ, ಈಗ ೧೯ ಲಕ್ಷ ರೂಪಾಯಿಗಳನ್ನೂ ಸಲ್ಲಿಸುತ್ತಿದ್ದೇವೆ. ಇದುವರೆಗೆ ೧೭ ಕೋಟಿಗಿಂತ ಹೆಚ್ಚಾಗಿ ಪೊಗದಿ ಹಣವನ್ನು ಕೊಟ್ಟಿದ್ದೇವೆ.

ಮೈಸೂರಿನ ಪ್ರಜೆಗಳು ಪರೋಕ್ಷವಾಗಿ ಕೇಂದ್ರಸರಕಾರಕ್ಕೆ ಸಲ್ಲಿಸುವ ದ್ರವ್ಯಸಹಾಯ ನಾನಾ ಮುಖವಾಗಿರುತ್ತದೆ. ಪರದೇಶದ ವ್ಯಾಪಾರದ ಮೇಲಿನ ಎಂದರೆ ಆಮದು, ರಫ್ತುಗಳ ಮೇಲಿನ ಸುಂಕ, ಸೀಮೆಎಣ್ಣೆ, ಉಪ್ಪು ಮೊದಲಾದ ಆವಶ್ಯಕ ಸಾಮಗ್ರಿಗಳ ಮೇಲೆ ವಿಧಿಸುವ ಒಳಸುಂಕ, ಇಂಡಿಯ ಸರಕಾರದ ನಾಣ್ಯದ ಚಲಾವಣೆ, ಮತ್ತು ಅಂಚೆ ಮತ್ತು ತಂತಿ ಇಲಾಖೆಗಳಿಂದ ಕೇಂದ್ರ ಸರಕಾರಕ್ಕೆ ಒದಗುವ ಲಾಭದ ಭಾಗ ಇವೇ ಮೊದಲಾದ ಬಾಬುಗಳಿಂದ ಮೈಸೂರಿನ ಪ್ರಜೆಗಳು ಕೇಂದ್ರಸರಕಾರಕ್ಕೆ ವರ್ಷ ಒಂದಕ್ಕೆ ಸುಮಾರು ೧೪೧ ಲಕ್ಷ ರೂಪಾಯಿಗಳನ್ನು ಸಲ್ಲಿಸುತ್ತಾರೆಂದು ಲೆಕ್ಕಾಚಾರ ಮಾಡಿರುತ್ತಾರೆ. ಇಂಡಿಯಾ ಕೇಂದ್ರ ಸರಕಾರದಿಂದ ನಡೆಯುವ ಸಾಮಾಜಿಕ ಕಾರ್ಯಗಳಿಂದ ಮೈಸೂರು ಪ್ರಜೆಗಳಿಗೆ ಒದಗುವ ಸೌಲಭ್ಯಗಳನ್ನು ಇದೇರೀತಿ ಲೆಕ್ಕಾಚಾರಮಾಡಿ ಸುಮಾರು ೧೮ ಲಕ್ಷ ರೂಪಾಯಿಗಳಾಗುವುದೆಂದು ಅಂದಾಜಮಾಡಿರುತ್ತದೆ. ಇದರಿಂದ ಪರೋಕ್ಷ ರೂಪದಲ್ಲಿ ಇಂಡಿಯ ಸರಕಾರಕ್ಕೆ ವರ್ಷ ಒಂದಕ್ಕೆ ರಕ್ಷಣೆ ವೆಚ್ಚಕ್ಕಾಗಿ ಮೈಸೂರಿನ ಪ್ರಜೆಗಳು ಸುಮಾರು ೧೪೭ ಲಕ್ಷ ರೂಪಾಯಿಗಳನ್ನು ಸಲ್ಲಿಸುತ್ತಾರೆಂದು ಹೇಳಬಹುದು. ೧೯೪೦-೪೧ರಲ್ಲಿ ಇಂಡಿಯ ಪ್ರಾಂತಗಳ ಮತ್ತು ಕೇಂದ್ರಸರಕಾರದ ಒಟ್ಟು ವೆಚ್ಚದಲ್ಲಿ ಶೇಕಡ ೩೨ರಷ್ಟು ಮೊಬಲಗು ಸೈನ್ಯದ ಖಾತೆಗಾಗಿ ವೆಚ್ಚವಾಗಿರುತ್ತದೆ. ಪ್ರತ್ಯಕ್ಷ ಮತ್ತು ಪರೋಕ್ಷರೀತಿಯಾಗಿ ಮೈಸೂರಿನ ಸರಕಾರದ ರಕ್ಷಣಾವ್ಯಯವು ಒಟ್ಟು ಸರಕಾರದ ವೆಚ್ಚದಲ್ಲಿ ಸುಮಾರು ಶೇ. ೨೮ರಷ್ಟಾಗಿರುತ್ತದೆ.

(*b*) ಸಮಾಜದಲ್ಲಿ ಶಾಂತಿಯನ್ನು ಪಾಲಿಸಲು, ಎಂದರೆ ಒಳರಕ್ಷಣೆಗಾಗಿ ಪೋಲೀಸ್ ಸಿಬ್ಬಂದಿ, ಜೈಲು ಇಲಾಖೆ, ಕೋರ್ಟುಗಳು ಏರ್ಪಾಡಾಗುತ್ತವೆ. ಇದಕ್ಕಾಗಿ ತಗಲುವ ಒಳಶಿಸ್ತಿನ ವೆಚ್ಚದ ವಿವರವನ್ನು ಇಲ್ಲಿ ಕೊಟ್ಟಿರುತ್ತದೆ :—

| ವರ್ಷ | ಕೋರ್ಟು ಲಕ್ಷ ರೂ. | ಪೋಲೀಸ್ ಲಕ್ಷ ರೂ. | ಜೈಲು ಲಕ್ಷ ರೂ. | ಒಟ್ಟು ಲಕ್ಷ ರೂ. | ಒಟ್ಟು ವೆಚ್ಚದಲ್ಲಿ ಶೇ.ಭಾಗ |
|---|---|---|---|---|---|
| ೧೯೧೦-೧೧ | ೭·೫ | ೯·೪ | ೧·೨ | ೧೮·೧ | ೯·೦ |
| ೧೯೨೦-೨೧ | ೧೦·೩೩ | ೧೭·೨೦ | ೧·೬೮ | ೨೯·೨ | ೮·೯ |
| ೧೯೩೦-೩೧ | ೧೧·೫ | ೧೩·೩ | ೧·೦ | ೨೫·೮ | ೮·೦ |
| ೧೯೪೦-೪೧ | ೧೨·೩೩ | ೨೧·೧೯ | ೧·೯೨ | ೩೫·೪೪ | ೭·೫ |

ಕೋರ್ಟುಗಳ ಸಂಖ್ಯೆ ಮತ್ತು ಪೋಲೀಸ್ ಸಿಬ್ಬಂದಿಯ ಸಂಖ್ಯೆ ಪ್ರಜಾಸಂಖ್ಯೆಯ ಬೆಳವಣಿಗೆಯನ್ನು ಮೀರಿ ಬಹಳಮಟ್ಟಿಗೆ ಹೆಚ್ಚದಿದ್ದರೂ ಈ ಬಾಬಿನಲ್ಲಿ ವೆಚ್ಚ ಕಾಲಾನುಗುಣವಾಗಿ ಹೆಚ್ಚಿರುತ್ತದೆ. ಪೋಲಿಸ್ ಸಿಬ್ಬಂದಿಯ ಸಂಬಳ ಸಾರಿಗೆಗಳು ೧೯೧೩-೧೪, ೧೯೧೪-೧೫ ಮತ್ತು ೧೯೧೮-೧೯ರಲ್ಲಿ ಪುನರ್ವ್ಯವಸ್ಥೆಗೊಳಿಸಲ್ಪಟ್ಟವು. ೧೯೩೭-೩೮ರಿಂದೀಚೆಗೆ ರಾಜಕೀಯ ಚಳುವಳಿ ಮತ್ತು ಇತರ ಕಾರಣಗಳಿಗಾಗಿ ಒಳರಕ್ಷಣೆಗಾಗಿ ಹೆಚ್ಚಿನ ವೆಚ್ಚ ಮಾಡಬೇಕಾಯಿತು. ೧೯೧೦-೧೧ರಲ್ಲಿನ ಕೆಲಸದ ಸ್ಥಿತಿಗೂ ೧೯೩೭-೩೮ರಲ್ಲಿನ ಕೆಲಸದ ಸ್ಥಿತಿಗೂ ಇರುವ ವ್ಯತ್ಯಾಸವನ್ನು ನೋಡಿದರೆ ಒಳಶಿಸ್ತಿನ ವೆಚ್ಚ ಹೆಚ್ಚಲು ಕಾರಣ ಸ್ಪಷ್ಟವಾಗುವುದು.

| | | ವರ್ಷ ೧೯೧೦–೧೧ | ವರ್ಷ ೧೯೩೭–೩೮ |
|---|---|---|---|
| ಅಪರಾಧಿಗಳ ಸಂಖ್ಯೆ | ... ... | ೧೧,೦೭೧ | ೨೮,೭೭೯ |
| ದಸ್ತಗಿರಿಯಾದ ಅಪರಾಧಿಗಳ ಸಂಖ್ಯೆ | ... | ೫,೪೮೮ | ೨೭,೭೮೯ |
| ವಿಚಾರಣೆಗೆ ದಾಖಲಾದ ಅಪರಾಧಿಗಳ ಸಂಖ್ಯೆ | ... | ೫,೨೪೭ | ೨೪,೦೩೪ |
| ಶಿಕ್ಷಿಸಲ್ಪಟ್ಟ ಅಪರಾಧಿಗಳ ಸಂಖ್ಯೆ | ... | ೩,೨೫೮ | ೧೯,೫೫೬ |

## ೩. ರಾಜ್ಯಾಡಳಿತದ ವೆಚ್ಚ

ಶ್ರೀಮನ್ ಮಹಾರಾಜರವರ ಪರಿವಾರ ಮತ್ತು ಸಿಬ್ಬಂದಿ ಖರ್ಚು, ದಿವಾನರ ಮತ್ತು ಮಂತ್ರಿಗಳ ಸಂಬಳ ಸಾರಿಗೆಗಳು, ಸೆಕ್ರೆಟರಿಯೇಟ್ ಕಛೇರಿ, ನ್ಯಾಯವಿಧಾಯಕಸಭೆ, ಪ್ರಜಾಪ್ರತಿನಿಧಿ ಸಭೆ, ಪಬ್ಲಿಸಿಟಿ ಕಛೇರಿ, ಕಂಟ್ರೋಲರ ಕಛೇರಿ ಮತ್ತು ಸಿಬ್ಬಂದಿ ಮತ್ತು ಟ್ರಾನ್ಸ್ಲೇಟರ್‌ಅವರ ಕಛೇರಿ, ಮುಜರಾಯಿ ಇಲಾಖೆ, ಸಾದಿಲ್ವಾರು ಮತ್ತು ಪ್ರಿಂಟಿಂಗ್ ಮತ್ತು ಪೆನ್‌ಷನ್, ಈ ಮೊಬಲಗುಗಳು, ರಾಜ್ಯಾಡಳಿತ ವೆಚ್ಚದ ಬಾಬಿನಲ್ಲಿ ಅಡಕವಾಗಿವೆ. ಈಚೆಗೆ ಅನೇಕ ದೇಶಗಳಲ್ಲಿ ರಾಜ್ಯಾಡಳಿತದ ಖರ್ಚು ಹಲವಾರು ಕಾರಣಗಳಿಂದ ಹೆಚ್ಚಿರುತ್ತದೆ. ಸರಕಾರದ ಕಾರ್ಯವಿಸ್ತರಣೆ, ಜನಜೀವನದ ಮಟ್ಟ ಹೆಚ್ಚಿ ಜೀವನಕ್ಕೆ ಬೇಕಾಗುವ ವೆಚ್ಚದ ಮಿತಿ ಏರಿರುವುದು, ಆಡಳಿತದ ಕ್ರಮದಲ್ಲಿ ಬದಲಾವಣೆಗಳಾಗುವುದು ಇವೇ ಮೊದಲಾದ ಕಾರಣಗಳಿಂದ ಈ ಬಗೆಯ ವೆಚ್ಚವು ಹೆಚ್ಚುತ್ತದೆ. ನಮ್ಮ ದೇಶದಲ್ಲಿ ನ್ಯಾಯ ವಿಧಾಯಕ ಸಭೆ, ಪ್ರಜಾಪ್ರತಿನಿಧಿ ಸಭೆ, ಮೊದಲಾದ ಶಾಸನ ಸಂಸ್ಥೆಗಳು ಅಭಿವೃದ್ಧಿಗೆ ಬಂದಂತೆಲ್ಲ ಈ ಸಂಬಂಧದ ಖರ್ಚು ಬೆಳೆದಿರುವುದೂ ಸಹಜವಾಗಿದೆ. ಸುವ್ಯವಸ್ಥಿತವಾದ ಆಡಳಿತದ ಕ್ರಮ ನಡೆದುಬಂದಂತೆ, ಸರಕಾರದಲ್ಲಿ ದುಡಿದ ನೌಕರರ ವಿಶ್ರಾಂತಿ ವೇತನಗಳಿಗೋಸ್ಕರ ಹೆಚ್ಚು ಹಣ ಬೇಕಾಗುತ್ತದೆ. ಕಳೆದ ಮೂವತ್ತು ವರುಷಗಳಲ್ಲಿ ರಾಜ್ಯಾಡಳಿತದ ವೆಚ್ಚ ಸುಮಾರು ೩೨ ಲಕ್ಷಗಳಷ್ಟು ರೂ. ಹೆಚ್ಚಾಗಿದೆ. ವಿಶ್ರಾಂತಿವೇತನದ ಬಾಬಿನ ವೆಚ್ಚ ೧೯೧೦-೧೧ರಲ್ಲಿ ೮ ಲಕ್ಷ ರೂ. ಗಳಿಂದ ೧೯೪೦-೪೧ರಲ್ಲಿ ೨೮ ಲಕ್ಷ ರೂ.ಗಳಿಗೆ ಹೆಚ್ಚಿದೆ.

ರಾಜ್ಯಾಡಳಿತದ ಬಾಬಿನಲ್ಲಿ ನಮ್ಮ ಸರಕಾರ ನೆರೆಹೊರೆ ಬ್ರಿಟಿಷ್ ಇಂಡಿಯಾ ಪ್ರಾಂತಗಳಿಗಿಂತಲೂ ಕಡಮೆ ಖರ್ಚುಮಾಡುತ್ತದೆ.

ಒಟ್ಟು ವೆಚ್ಚದ ರಾಜ್ಯಾಡಳಿತದ ವೆಚ್ಚದ ಪ್ರಮಾಣ ಶೇಕಡ

| ವರ್ಷ | | ಮೈಸೂರು | ಬೊಂಬಾಯಿ | ಮದರಾಸು |
|---|---|---|---|---|
| ೧೯೨೫–೨೬ | ... | ೪·೩ | ೧೩·೮ | ೧೫·೯ |
| ೧೯೩೦–೩೧ | ... | ೪·೧ | ೧೩·೮ | ೧೫·೯ |
| ೧೯೩೭–೩೭ | ... | ೩·೯ | ೮·೩ | ೧೭·೯ |

"ಆಡಳಿತದಲ್ಲಿ ದಕ್ಷತೆಯೂ ಖರ್ಚಿನಲ್ಲಿ ಬಿಗಿಯೂ ಅಧಿಕಾರಗಳಿಗೆ ದೇಶೀಯರನ್ನೇ ನೇಮಿಸಿರುವುದೂ, ಯಾರಿಗೂ ಮಿತಿಮೀರಿ ಸಂಬಳ ಕೊಡದೆ ಇರುವುದೂ ನಮ್ಮ ಸಂಸ್ಥಾನದ ಕಡಮೆ ಖರ್ಚಿಗೆ ಮುಖ್ಯಕಾರಣಗಳು" *

---

* ಡಾ॥ ಎಂ. ಎಚ್. ಗೋಪಾಲ್‌ರವರ 'ಸಾರ್ವಜನಿಕ ವೆಚ್ಚ (ಪುಟ ೫೨).

## ४. ಸಮಾಜ ಸೇವೆಯ ವೆಚ್ಚ

ಸಾರ್ವಜನಿಕವೆಚ್ಚವನ್ನು ಸಮಾಜದ ರಕ್ಷಣೆಗಾಗಿ, ಸಮಾಜ ಸೇವೆಗಾಗಿ, ಸಮಾಜದ ಸಂಪದಭಿವೃದ್ಧಿಗಾಗಿ ಎಂದು ಮೂರು ವರ್ಗಗಳಾಗಿ ವಿಂಗಡಿಸಿದರೆ ಇದುವರೆಗೆ ವಿಮರ್ಶಿಸಿರುವ ಬಾಬುಗಳು ಮೊದಲನೆಯ ವರ್ಗಕ್ಕೆ ಸೇರಿರುತ್ತವೆ. ವಿದ್ಯಾಭ್ಯಾಸ, ವೈದ್ಯಸಹಾಯ ಮತ್ತು ಆರೋಗ್ಯರಕ್ಷಣೆಗೆ ಸರಕಾರ ಒದಗಿಸುವ ಸೌಲಭ್ಯಗಳು ಈ ಬಾಬುಗಳು ಪ್ರತ್ಯಕ್ಷವಾಗಿ ಸಮಾಜದ ಹಿತವನ್ನು ಸಾಧಿಸತಕ್ಕ ವೆಚ್ಚದ ಗುಂಪಿಗೆ ಸೇರುತವೆ. ಮೈಸೂರು ಸರಕಾರದ ಬಡ್ಜೆಟ' ವಿಂಗಡಣೆಯಲ್ಲಿ ವೈದ್ಯ ಮತ್ತು ಆರೋಗ್ಯರಕ್ಷಣೆ ವೆಚ್ಚವನ್ನು ಕೋರ್ಟು, ಜೈಲು ಮತ್ತು ಪೋಲೀಸ್ ಶಾಖೆಗಳೊಂದಿಗೆ ಸೇರಿಸಿ 'ರಕ್ಷಣೆ' ಎಂದು ವರ್ಣಿಸಿರುತ್ತಾರೆ.

ವಿದ್ಯಾಭ್ಯಾಸ, ವ್ಯವಸಾಯ, ಕೈಗಾರಿಕೆ, ಪರಸ್ಪರ ಸಹಾಯ ಸಂಘ ಇವುಗಳನ್ನು ಒಟ್ಟುಗೂಡಿಸಿ ವಿದ್ಯಾಭಿವೃದ್ಧಿ ಮತ್ತು ಭಾಗ್ಯಾಭಿವೃದ್ಧಿ ಎಂದು ವಿಂಗಡಿಸಿದೆ. ಸಮಾಜಸೇವೆಯ ವೆಚ್ಚ ಮೈಸೂರು ಸರಕಾರದ ಆಯವ್ಯಯ ರಚನೆಯಲ್ಲಿ ಹೆಚ್ಚು ಪ್ರಾಶಸ್ತ್ಯ ಪಡೆದಿರುತ್ತದೆ.

(i) ವೈದ್ಯ ಮತ್ತು ಆರೋಗ್ಯ ರಕ್ಷಣೆಗಾಗಿ ತಗಲುವ ವೆಚ್ಚದ ಮೊತ್ತ ಈಚೆಗೆ ಹೇಗೆ ಬೆಳೆದಿದೆ ಎಂಬುದನ್ನು ಕೆಳಗಿನ ಪಟ್ಟಿಯಿಂದ ಕಾಣಬಹುದು.—

| ವರ್ಷ | ವೈದ್ಯಸಹಾಯ ಲಕ್ಷ ರೂ. | ಆರೋಗ್ಯ ರಕ್ಷಣೆ ಲಕ್ಷ ರೂ. | ಒಟ್ಟು ಲಕ್ಷ ರೂ | ಒಟ್ಟು ವೆಚ್ಚದಲ್ಲಿ ಶೇಕಡ ಭಾಗ |
|---|---|---|---|---|
| ೧೯೧೦-೧೧ | ೬·೦೮ | ೧·೦೩ | ೭·೨೧ | ೩·೦ |
| ೧೯೨೦-೨೧ | ೧೦·೯೫ | ೧·೨೬ | ೧೨·೨೧ | ೩·೭ |
| ೧೯೩೦-೩೧ | ೧೨·೧೮ | ೨·೧೨ | ೧೪·೩೦ | ೩·೬ |
| ೧೯೪೦-೪೧ | ೧೭·೨೩ | ೨·೭೦ | ೧೯·೯೩ | ೪·೨ |

ವೈದ್ಯ ಸಹಾಯ ಮತ್ತು ಆರೋಗ್ಯರಕ್ಷಣೆಗಾಗಿ ನಮ್ಮ ಸರಕಾರದವರು ತಲೆಗೆ ಸರಾಸರಿ ರೂ. 0-3-2ನಂತೆ ಖರ್ಚುಮಾಡುತ್ತಾರೆ. ಮದರಾಸು ಪ್ರಾಂತದಲ್ಲಿ ರೂ. 0-2-7ನಂತೆಯೂ ಬೊಂಬಾಯಿ ಪ್ರಾಂತದಲ್ಲಿ ರೂ. 0-4-9ನಂತೆಯೂ ಖರ್ಚಾಗುತ್ತದೆ. ಬೊಂಬಾಯಿಗಿಂತ ಸರಾಸರಿ ವೆಚ್ಚದ ಪ್ರಮಾಣದಲ್ಲಿ ಕಡಿಮೆಯಾದರೂ ಮೈಸೂರು ದೇಶದಲ್ಲಿ ೨೩,೦೦೦ ಪ್ರಜೆಗೊಂದು ಆಸ್ಪತ್ರೆ ಇರುತ್ತದೆ. ಬೊಂಬಾಯಿನಲ್ಲಿ ೭೬,೦೦೦ ಪ್ರಜೆಗೊಂದರಂತೆಯೂ, ಮದರಾಸಿನಲ್ಲಿ ೪೦,೦೦೦ ಪ್ರಜೆಗೊಂದರಂತೆಯೂ ಆಸ್ಪತ್ರೆಗಳಿರುವುವು. ವೈದ್ಯಸಹಾಯವನ್ನು ಹೆಚ್ಚು ಹೆಚ್ಚಾಗಿ ಪ್ರಜೆಗಳು ಪಡೆಯುತ್ತಿರುವುದೂ, ಸಾವಿನ ಸಂಖ್ಯೆ ಕಡಮೆಯಾಗುತ್ತಿರುವುದೂ ಈ ವೆಚ್ಚದಿಂದ ಉಂಟಾಗಿರುವ ಸತ್ಪರಿಣಾಮದ ಚಿಹ್ನೆ. ಮೇಲಾಗಿ ಹಳ್ಳಿಗಾಡಿನಲ್ಲಿಯೂ ಮಲೆನಾಡು ಪ್ರಾಂತದಲ್ಲಿಯೂ ವೈದ್ಯಸೌಲಭ್ಯಗಳನ್ನು ಸುಲಭ

ವಾಗಿ ಪಡೆಯುವಂತೆ ವಿಶೇಷ ಏರ್ಪಾಡುಗಳನ್ನು ಮಾಡಿರುವುದು ಒಂದು ವಿಶೇಷ ಸಂಗತಿ.

(ii) ವಿದ್ಯೆ ಮತ್ತು ಸಂಪದಭಿವೃದ್ಧಿಕಾರ್ಯಗಳಿಗಾಗಿ ಮೈಸೂರು ಸರಕಾರ ಈಚೆಗೆ ಹೆಚ್ಚು ಹಣವನ್ನು ವಿನಿಯೋಗಿಸುತ್ತಿದೆ. ೧೯೧೦-೧೧ರಲ್ಲಿ ಈ ಬಾಬಿನ ವೆಚ್ಚ ಸುಮಾರು ೧೫ ಲಕ್ಷ ರೂಪಾಯಿಗಳಿದ್ದದ್ದು ೧೯೪೦-೪೧ ರಲ್ಲಿ ಸುಮಾರು ೭೫ ಲಕ್ಷಕ್ಕೆ ಏರಿತು. ಮೂವತ್ತು ವರುಷಗಳಲ್ಲಿ ಈ ಬಾಬಿನ ವೆಚ್ಚ ಐದರಷ್ಟು ಹೆಚ್ಚಿತು. ಒಟ್ಟು ವೆಚ್ಚದಲ್ಲಿ ೧೯೧೦-೧೧ರಲ್ಲಿ ಶೇಕಡ ೭·೫ರಂತೆ ವೆಚ್ಚವಾಗುತ್ತಿದ್ದು, ೧೯೪೦-೪೧ರಲ್ಲಿ ೧೬·೫ರಂತೆ ವೆಚ್ಚಮಾಡಬೇಕೆಂದು ನಿರ್ಧರಿಸಲ್ಪಟ್ಟಿತು. ಈ ಬಾಬಿನಲ್ಲಿ ವಿದ್ಯಾಭ್ಯಾಸಕ್ಕೆ ವಿನಿಯೋಗವಾಗುವ ಹಣವೇ ಮುಖ್ಯವಾದುದರಿಂದ, ಆ ವೆಚ್ಚವನ್ನು ಸ್ವಲ್ಪಮಟ್ಟಿಗೆ ಇಲ್ಲಿ ವಿಮರ್ಶಿಸಿರುತ್ತದೆ. ಭಾಗ್ಯಾಭಿವೃದ್ಧಿಗೆ ಸಂಬಂಧಪಟ್ಟ ಬಾಬುಗಳನ್ನು ಮುಂದೆ ಸೂಚಿಸಿದೆ. ವಿದ್ಯಾಭಿವೃದ್ಧಿ ಸರಕಾರದ ಮುಖ್ಯ ಧ್ಯೇಯವಾಗಿರುವುದರಿಂದ ಇದಕ್ಕೆ ಹೆಚ್ಚು ಹಣವನ್ನು ಖರ್ಚುಮಾಡುವುದು ಸಹಜ. ಸರಕಾರದ ಒಟ್ಟುವೆಚ್ಚದಲ್ಲಿ ಶೇಕಡ ೧೭ರಷ್ಟು ಭಾಗವನ್ನು ಮೈಸೂರು ಸರಕಾರವೂ ೧೫ರಷ್ಟು ಭಾಗವನ್ನು ಮದರಾಸು ಪ್ರಾಂತ ಸರಕಾರವೂ, ೧೩ರಷ್ಟು ಭಾಗವನ್ನು ಬೊಂಬಾಯಿ ಪ್ರಾಂತ ಸರಕಾರವೂ ವಿದ್ಯಾಭ್ಯಾಸಕ್ಕಾಗಿ ವೆಚ್ಚಮಾಡುತ್ತಿವೆ. ವಿದ್ಯಾಭ್ಯಾಸದ ವೆಚ್ಚವನ್ನು ಸ್ಥಳೀಯ ಸಂಸ್ಥೆಗಳು ಮತ್ತು ಖಾಸಗೀ ಸಂಘಗಳು ಸ್ವಲ್ಪಮಟ್ಟಿಗೆ ಹೊರುವುದು ನಮ್ಮ ದೇಶದಲ್ಲಿಯೂ ರೂಢಿಯಲ್ಲಿದೆ. ೧೯೩೭-೩೮ರಲ್ಲಿನ ವೆಚ್ಚವನ್ನು ನೋಡಿದರೆ ಮೈಸೂರಿನಲ್ಲಿ ಸ್ಥಳೀಯ ಸಂಸ್ಥೆಗಳ ಭಾಗ ಶೇಕಡ ೭·೫ ಮತ್ತು ಇತರ ಖಾಸಗಿ ಸಂಸ್ಥೆಗಳ ಭಾಗ ೨·೨ ಮಾತ್ರವಿದ್ದಿತು.

ನಮ್ಮ ನೆರೆಹೊರೆಯ ಇಂಡಿಯಾಪ್ರಾಂತಗಳಾದ ಮದರಾಸು, ಬೊಂಬಾಯಿ ಪ್ರಾಂತಗಳಲ್ಲಿರುವ ವಿದ್ಯಾಭ್ಯಾಸದ ವೆಚ್ಚದ ಕ್ರಮಕ್ಕೂ ಮೈಸೂರಿನ ರೀತಿಗೂ ವ್ಯತ್ಯಾಸವುಂಟು. ವಿದ್ಯಾಭ್ಯಾಸದ ಖರ್ಚಿನಲ್ಲಿ ಸರಕಾರದಿಂದ ದೊರೆಯುವ ದ್ರವ್ಯಭಾಗ, ಫೀ ಮತ್ತು ಇತರ ವಿಧಗಳಲ್ಲಿ ಒದಗುವ ಸಹಾಯ ಯಾವ ಯಾವ ಪ್ರಮಾಣದಲ್ಲಿದೆಯೆಂಬುದನ್ನು ಪರಿಶೀಲಿಸುವುದರಿಂದ ಈ ವ್ಯತ್ಯಾಸ ತಿಳಿಯುವುದು.

| | ಮೈಸೂರು ಶೇಕಡಭಾಗ | ಮದರಾಸು ಶೇಕಡಭಾಗ | ಬೊಂಬಾಯಿ ಶೇಕಡಭಾಗ |
|---|---|---|---|
| ಸರಕಾರದ ವೆಚ್ಚ .... | ೭೯·೯ | ೪೫·೭ | ೪೧·೨ |
| ಫೀ ವರಮಾನದಿಂದ ಬಂದದ್ದು .... | ೮·೧ | ೧೮·೧ | ೨೪·೪ |
| ಇತರ ವಿಧದ ದ್ರವ್ಯಸಹಾಯ .... | ೨·೭ | ೨೦·೯ | ೧೪·೭ |
| ಸ್ಥಳೀಯ ಸಂಸ್ಥೆಗಳಿಂದ ದೊರೆಯುವ ಸಹಾಯ .... | ೯·೩ | ೧೫·೩ | ೧೯·೭ |
| | ೧೦೦ | ೧೦೦ | ೧೦೦ |

ಮೈಸೂರಿನಲ್ಲಿ ವಿದ್ಯಾಭ್ಯಾಸದ ವೆಚ್ಚದಲ್ಲಿ ಬಹುಭಾಗವನ್ನು ಸರಕಾರ ನೇರವಾಗಿ ವಹಿಸುತ್ತಾರೆಯೆಂಬುದು ವ್ಯಕ್ತವಾಗುತ್ತದೆ. ವಿದ್ಯಾಭ್ಯಾಸದ ಬೆಳವಣಿಗೆಗೂ, ಕಾಲಾನುಗುಣವಾಗಿ ಬದಲಾವಣೆಗಳನ್ನು ಆಚರಣೆಗೆ ತರುವುದಕ್ಕೂ ಮೈಸೂರಿನಲ್ಲಿಗುವಷ್ಟು ಅನುಕೂಲಗಳು ಇತರಕಡೆ ಇರಲು ಸಾಧ್ಯವಾಗಲಾರದು. ೧೯೧೦ರಲ್ಲಿ ಪ್ರತಿಯೊಬ್ಬ ಮೈಸೂರು ವಿದ್ಯಾರ್ಥಿಯ ವ್ಯಾಸಂಗಕ್ಕೆ ೧೬·೫ ರೂಪಾಯಿ ವೆಚ್ಚಮಾಡುತ್ತಿದ್ದ ಸರಕಾರ ೧೯೩೭ರಲ್ಲಿ ಸುಮಾರು ೧೯·೫ ರೂಪಾಯಿ ಖರ್ಚು ಮಾಡಿತು. ಪ್ರಾಥಮಿಕ ವಿದ್ಯಾಭ್ಯಾಸದಿಂದ ವಿಶ್ವವಿದ್ಯಾನಿಲಯದವರೆಗೂ, ಎಲ್ಲಾ ದರ್ಜೆಯ ಮತ್ತು ಎಲ್ಲಾ ವಿಧದ ವ್ಯಾಸಂಗಕ್ಕೂ ಹೆಚ್ಚು ಹಣ ವ್ಯಯವಾಗುತ್ತಿದೆ.

ಜನತೆಯ ವಿದ್ಯಾಭ್ಯಾಸಕ್ಕೆ ವೆಚ್ಚಮಾಡಬಹುದಾದ ಹಣಕ್ಕೆ ಮಿತಿ ಇಲ್ಲವೆಂದೇ ಒಂದು ದೃಷ್ಟಿಯಿಂದ ವಾದಿಸಬಹುದು. ಸರಕಾರದ ಹುಟ್ಟುವಳಿಮಾತ್ರ ಮನಸ್ಸಿ ಹೆಚ್ಚಲಾರದು. ಇದರಿಂದ ಸರಕಾರ ವಿದ್ಯಾಭ್ಯಾಸಕ್ಕೆ ಮಾಡುವ ವೆಚ್ಚಕ್ಕೆ ಒಂದು ಮಿತಿ ಗೊತ್ತುಮಾಡಿಕೊಳ್ಳಬೇಕಾಗುವುದು. ಈ ತತ್ವವನ್ನು ಮನಗಂಡು ಈಚೆಗೆ ಖಾಸಗೀ ವಿದ್ಯಾಸಂಸ್ಥೆಗಳ ಸ್ಥಾಪನೆ ಮತ್ತು ಬೆಳವಣಿಗೆಗೆ, ಮೈಸೂರು ಸರಕಾರ ಹೆಚ್ಚು ಉತ್ತೇಜನ ಕೊಡಲಾರಂಭಿಸಿದೆ.

ಇಲ್ಲಿ ಸರಕಾರ ದೇಶದ ಪ್ರಜೆಗಳ ಏಳಿಗೆಗೆ ಅಡಿಗಲ್ಲಿನಂತಿರುವ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಹೆಚ್ಚುಗಮನ ಕೊಡುತ್ತಿದೆ. ಈ ತರಗತಿಯ ಶಾಲೆಗಳು ೧೯೧೦ರಲ್ಲಿ ೨೦೦೦ಕ್ಕಿಂತ ಕಡಿಮೆಯಿದ್ದವು. ೧೯೩೮ರಲ್ಲಿ ೬೦೦೦ಕ್ಕೆ ಮೀರಿದ್ದವು. ೧೯೧೦ರಲ್ಲಿ ೨೯೦೦ ಪ್ರಜೆಗಳಿಗೆ ಒಂದು ಶಾಲೆಯಿದ್ದುದು ೧೯೩೮ರಲ್ಲಿ ೧೧೦೦ ಜನಕ್ಕೆ ಒಂದು ಶಾಲೆ ಇರುವಂತಾಯಿತು. ೧೯೧೦ರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ೩·೫ ಲಕ್ಷ ರೂಪಾಯಿಗಳು ವೆಚ್ಚವಾಗುತ್ತಿತ್ತು. ೧೯೩೮ರಲ್ಲಿ ಈ ವೆಚ್ಚ ೨೩ ಲಕ್ಷ ರೂಪಾಯಿಗಳಿಗೆ ಹೆಚ್ಚಿತು. ಈ ಅವಧಿಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದ ಸೌಕರ್ಯವನ್ನು ಪಡೆಯುವ ಮಕ್ಕಳ ಸಂಖ್ಯೆ ಒಟ್ಟು ಮಕ್ಕಳ ಸಂಖ್ಯೆಯಲ್ಲಿ ಶೇಕಡ ೧೬ರಿಂದ ೩೬ಕ್ಕೆ ಹೆಚ್ಚಿತು. ಪ್ರಜೆಗಳೆಲ್ಲರಿಗೂ ಉಚಿತವಾದ ಪ್ರಾಥಮಿಕ ವಿದ್ಯಾಭ್ಯಾಸವನ್ನು ಒದಗಿಸಬೇಕೆಂಬ ಧ್ಯೇಯವನ್ನು ಅನುಸರಿಸಿ, ಪ್ರಾಥಮಿಕ ವಿದ್ಯಾಭ್ಯಾಸದ ಆಡಳಿತವನ್ನು ೧೯೪೧ರಲ್ಲಿ ಸ್ಥಳೀಯ ಸಂಸ್ಥೆಗಳಿಂದ ಪುನಃ ಸರಕಾರವೇ ವಹಿಸಿಕೊಂಡಿತು. ಮುಂದಿನ ನಾಲ್ಕು ವರ್ಷಗಳಲ್ಲಿ, ಎಂದರೆ ೧೯೪೫ರೊಳಗೆ, ೧೦೦೦ ಪಾಠಶಾಲೆಗಳನ್ನು ಸ್ಥಾಪಿಸುವ ಒಂದು ಯೋಜನೆಯನ್ನು ಸರಕಾರ ಅನುಸರಿಸಿ ಕಾರ್ಯ ನಡೆಸಲು ನಿರ್ಧರಿಸಿರುತ್ತದೆ. ಸಂಸ್ಥಾನದಲ್ಲಿ ಓದುಬರಹ ಬಲ್ಲವರ ಸಂಖ್ಯೆ ಅಭಿವೃದ್ಧಿಯಾಗುತ್ತಿದೆ ಎಂಬ ಅಂಶವನ್ನು ತಿಳಿಯುವುದರಿಂದ, ಸ್ವಲ್ಪಮಟ್ಟಿಗೆ ವಿದ್ಯಾಭ್ಯಾಸಕ್ಕೆ ವಿನಿಯೋಗಿಸುತ್ತಿರುವ ಖರ್ಚು ಸಾರ್ಥಕವಾಗುತ್ತಿದೆ ಎಂಬುದು ಗೊತ್ತಾಗುವುದು. ಇದರ ಅಭಿವೃದ್ಧಿಗೆ ಹೆಚ್ಚು ಗಮನ ಕೊಡುವ ಉದ್ದೇಶದಿಂದ ಈಚೆಗೆ ವಯಸ್ಕರ ಶಿಕ್ಷಣಕ್ಕಾಗಿ ಹಣವನ್ನು ಮೀಸಲಾಗಿಟ್ಟು ತ್ವರಿತವಾಗಿ ಕಾರ್ಯ ನಡೆಯುತ್ತಿದೆ.

## ೫. ಸಂಪದಭಿವೃದ್ಧಿದಾಯಕವಾದ ವೆಚ್ಚ

ಮೈಸೂರಿನ ಪ್ರಜಾವರ್ಗದ ಸಂಪದಭಿವೃದ್ಧಿಗಾಗಿ ಇಲ್ಲಿನ ಸರಕಾರ ನಾನಾ ವಿಧದಲ್ಲಿ ಪ್ರಯತ್ನಪಡುತ್ತಿರುವುದು ಸರ್ವವಿದಿತವಾಗಿದೆ. ಸರಕಾರದ ಆದಾಯ ವೆಚ್ಚದ ಕ್ರಮದಿಂದ ದೇಶದ ಸಂಪದಭಿವೃದ್ಧಿಗೆ ಉಂಟಾಗುವ ಸಾಧಕಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಿದೆ. ವ್ಯವಸಾಯದ ಖಾತೆ ಮತ್ತು ಸಹಕಾರ ಸಂಘಗಳ ಇಲಾಖೆಗಳು ರೈತರ ಅಭಿವೃದ್ಧಿಗೆ ಸಹಾಯಮಾಡುತ್ತವೆ. ಉತ್ತಮ ಫಸಲನ್ನು ತೆಗೆಯುವುದು, ಒಳ್ಳೆಯ ಬಿತ್ತನೆ ಬೀಜಗಳನ್ನು ಒದಗಿಸುವುದು, ಉತ್ತಮರೀತಿಯ ವ್ಯವಸಾಯಕ್ರಮವನ್ನು ಪ್ರಚಾರಮಾಡುವುದು, ಸಸ್ಯರೋಗಗಳಿಗೆ ಸರಿಯಾದ ಪರಿಹಾರಕ್ರಮವನ್ನು ತಿಳಿಸುವುದು ಇವೇ ಮೊದಲಾದ ರೀತಿಯಲ್ಲಿ ವ್ಯವಸಾಯದ ಇಲಾಖೆಯಿಂದ ರೈತನ ಅಭಿವೃದ್ಧಿಗೆ ಸಹಾಯವಾಗುತ್ತದೆ. ಈ ಖಾತೆಯ ಅಂಗವಾದ ಪಶುವೈದ್ಯ ಇಲಾಖೆಯಿಂದ ರೈತರ ಜಾನುವಾರುಗಳ ಆರೋಗ್ಯ ಮತ್ತು ಅಭಿವೃದ್ಧಿಗೆ ಹೆಚ್ಚಿನ ಸಹಾಯ ದೊರಕುತ್ತದೆ. ಈ ವೆಚ್ಚದ ಬೆಳವಣಿಗೆ ಸಂಪದಭಿವೃದ್ಧಿದಾಯಕವಾದುದರಿಂದ, ಮೈಸೂರಿನಲ್ಲಿ ಕಳೆದ ಮೂವತ್ತು ವರ್ಷಗಳಲ್ಲಿ ಇದಕ್ಕೆ ಹೆಚ್ಚು ಗಮನ ದೊರೆತಿದೆ.

| ವರ್ಷ | | ವ್ಯವಸಾಯದ ಶಾಖೆ | ಪಶುವೈದ್ಯಶಾಖೆ |
|---|---|---|---|
| ೧೯೧೦-೧೧ | .... | ೦·೫೮ ಲಕ್ಷ ರೂ. | ೦·೪೧ ಲಕ್ಷ ರೂ. |
| ೧೯೨೦-೨೧ | .... | ೩·೪೬ ,, | ೧·೧೫ ,, |
| ೧೯೩೦-೩೧ | .... | ೫·೩೮ ,, | ೩·೪೨ ,, |
| ೧೯೪೦-೪೧ | .... | ೫·೦೮ ,, | ೩·೮೨ ,, |

ಪರಸ್ಪರ ಸಹಾಯಸಂಘಗಳು ಹಳ್ಳಿಗಾಡಿನಲ್ಲಿ ಮುಖ್ಯವಾಗಿ ರೈತಾಪಿ ಜನಗಳಿಗೆ ಸ್ವಾವಲಂಬನ, ಮಿತವ್ಯಯಗಳನ್ನು ಅಭ್ಯಾಸಮಾಡಿಸಲೂ, ಸಾಲದ ಸೌಲಭ್ಯಗಳನ್ನು ಒದಗಿಸಲೂ ಸ್ಥಾಪಿತವಾದುವು. ಸಹಕಾರ ಚಳುವಳಿಯಲ್ಲಿ ಸರಕಾರದ ಪಾತ್ರ ಮುಖ್ಯವೆಂಬುದನ್ನು ಅರಿತು ಮೊದಲಿನಿಂದಲೂ ಈ ಶಾಖೆಗೆ ಮೈಸೂರಿನಲ್ಲಿ ತಕ್ಕ ಪ್ರೋತ್ಸಾಹ ದೊರಕುತ್ತಿದೆ. ಈ ಚಳುವಳಿಯಲ್ಲಿ ಸರಕಾರ ಅತಿಯಾಗಿ ಕೈಹಾಕಿದರೆ ಜನರಲ್ಲಿ ಸ್ವಾವಲಂಬನ ಗುಣ ಬೆಳೆಯದಿರಬಹುದು. ಸಂಘಗಳ ಸ್ಥಾಪನೆ ಮತ್ತು ಮೇಲ್ವಿಚಾರಣೆಗೆ ಸರಕಾರ ಗಮನಕೊಡದಿದ್ದರೆ ಚಳುವಳಿ ನಿರ್ಜೀವವಾಗಬಹುದು. ಲೋಪದೋಷಗಳನ್ನು ತಪ್ಪಿಸಿ ಸಂಘಗಳು ಸರಿಯಾಗಿ ಕೆಲಸ ಮಾಡುವಂತೆ ಮೇಲ್ವಿಚಾರಣೆ ನಡೆಸುವುದು ಸಹಕಾರ ಶಾಖೆಯ ಜವಾಬ್ದಾರಿ. ೧೯೧೦-೧೧ ರಲ್ಲಿ ಈ ಶಾಖೆಗಾಗಿ ೧೭,೦೦೦ ರೂಪಾಯಿ ವೆಚ್ಚವಾಗುತ್ತಿತ್ತು; ೧೯೪೦-೪೧ರಲ್ಲಿ ಈ ಶಾಖೆಯ ವೆಚ್ಚ ಒಂದೂವರೆ ಲಕ್ಷ ರೂಪಾಯಿನಷ್ಟಾಗಿರುತ್ತದೆ. ಸಹಕಾರಸಂಘಗಳು ಹೆಚ್ಚಿರುವುದಲ್ಲದೆ ಅವುಗಳ ಬಂಡವಾಳ ಮತ್ತು ವ್ಯಾಪ್ತಿಯೂ ಹೆಚ್ಚುತ್ತಿರುತ್ತವೆ.

ಕೈಗಾರಿಕೆಗಳ ಬೆಳವಣಿಗೆಗೂ ಇದೇ ರೀತಿಯು ಉತ್ತೇಜನ ದೊರಕುತ್ತಿದೆ. ಕೈಗಾರಿಕೆ, ಕಾರ್ಖಾನೆಗಳ ಸ್ಥಾಪನೆ ಮತ್ತು ಮೇಲ್ವಿಚಾರಣೆ, ವ್ಯವಸಾಯ, ವ್ಯಾಪಾರ ಇವೇ ಮೊದಲಾದ ಇಲಾಖೆಗಳಿಗಾಗಿ ಹುಟ್ಟುವಳಿಯಿಂದ ವೆಚ್ಚವಾಗುವ ಮೊತ್ತವು ೧೯೧೦ರಲ್ಲಿ ೧.೫ ಲಕ್ಷ ರೂಗಳಿದ್ದು ೧೯೪೧ರಲ್ಲಿ ೧೫ ಲಕ್ಷ ರೂ. ಗಳನ್ನು ಮೀರಿತು. ದೊಡ್ಡ ಕಾರ್ಖಾನೆಗಳಿಗೆ ಸಹಾಯ ಒದಗಿಸಿರುವಂತೆ ಗ್ರಾಮ ಕೈಗಾರಿಕೆಗಳಿಗೆ ಉತ್ತೇಜನ ಕೊಡುವುದೂ ಈ ವಿಧದ ವೆಚ್ಚದ ಉದ್ದೇಶವಾಗಿರುತ್ತೆ.

ಇದಕ್ಕಿಂತಲೂ ಹೆಚ್ಚಾಗಿ ಮೈಸೂರಿನಲ್ಲಿ ಸರಕಾರ ಲಕ್ಷೋಪಲಕ್ಷ ರೂಪಾಯಿಗಳನ್ನು ಬಂಡವಾಳದ ರೂಪಿನಲ್ಲಿ ದೊಡ್ಡ ಸಂಪದಭಿವೃದ್ಧಿ ಕಾರ್ಯಗಳಿಗಾಗಿ ವ್ಯಯ ಮಾಡಿರುತ್ತದೆ. ಮೈಸೂರಿನ ಸಾರ್ವಜನಿಕ ಸಾಲವನ್ನು ವಿವರಿಸುವ ಮುಂದಿನ ಪ್ರಕರಣದಲ್ಲಿ ಈ ಅಂಶವನ್ನು ವಿಶದವಾಗಿ ತಿಳಿಸಿರುತ್ತದೆ.

ಮೈಸೂರಿನ ಸಾರ್ವಜನಿಕ ವೆಚ್ಚ ಬೆಳೆಯುತ್ತಿರುವುದಲ್ಲದೆ ಸಮಾಜ ಸೇವೆಗೂ ಸಂಪದಭಿವೃದ್ಧಿಗೂ ಮಾಡುತ್ತಿರುವ ಖರ್ಚು ಇಲ್ಲಿ ವಿಶೇಷವಾಗಿದೆ. ಇದು ವರ್ಷ ವರ್ಷಕ್ಕೂ ಬೆಳೆಯುತ್ತಿದೆ. "ಆದರೆ ಸಾರ್ವಜನಿಕ ವೆಚ್ಚದ ಒರೆಗಲ್ಲು ಖರ್ಚಿನ ಮೊತ್ತವಲ್ಲ. ತಲೆಗೆ ಬೀಳುವ ಖರ್ಚು, ಅದರ ರೀತಿ ಮತ್ತು ಹಂಚಿಕೆ" ಈ ದೃಷ್ಟಿಯಿಂದ ಮೈಸೂರಿನ ವೆಚ್ಚವನ್ನು ಪರೀಕ್ಷಿಸಿ ಶ್ರೀಮಾನ್ ಎಂ. ಹೆಚ್. ಗೋಪಾಲ್‌ರವರು ತಮ್ಮ ಗ್ರಂಥದಲ್ಲಿ ಕೆಲವು ಉಪಯುಕ್ತವಾದ ಅಂಶಗಳನ್ನು ತಿಳಿಸಿರುತ್ತಾರೆ. ಅವುಗಳನ್ನು ಇಲ್ಲಿ ಕೊಡಲಾಗಿದೆ:—

"ತಲೆಗೆ ಬೀಳುವ ಖರ್ಚು, ೧೯೩೯–೪೦"

| | | ರೂ. ಆ. ಕಾ. | |
|---|---|---|---|
| ಮೈಸೂರು | .... | ೭ ೧೪ ೧೦ | (ಇದರಲ್ಲಿ ರೂ. ೧-೧೨-೧೦ ಬಂಡವಾಳಕ್ಕಾಗಿ ಹಾಕಿದ ಹಣ) |
| ಮದರಾಸು | .... | ೩ ೧೦ ೧೦ | |
| ಒಟ್ಟು—ಇಂಡಿಯಾ ಪ್ರಾಂತಗಳಲ್ಲಿ | .... | ೩ ೩ ೪ | |

ಇದರಿಂದ ನಮ್ಮ ಸರಕಾರದವರು ಪ್ರಜೆಗಳಿಗೋಸ್ಕರ ಇಂಡಿಯ ಪ್ರಾಂತಗಳಿಗಿಂತ ಎರಡರಷ್ಟು ಖರ್ಚು ಮಾಡುತ್ತಾರೆಂದು ಗೊತ್ತಾಗುತ್ತದೆ.

## ಖರ್ಚಿನ ರೀತಿ

| | | ಮೈಸೂರು | | | ಮದರಾಸು | | | ಒಟ್ಟು—ಇಂಡಿಯಾ ಪ್ರಾಂತಗಳಲ್ಲಿ. | | |
|---|---|---|---|---|---|---|---|---|---|---|
| | | ರೂ. | ಆ. | ಕಾ | ರೂ. | ಆ. | ಕಾ. | ರೂ. | ಆ. | ಕಾ. |
| ರಕ್ಷಣೆ | .... | ೨ | ೭ | ೭ | ೧ | ೪ | ೬ | ೧ | ೨ | ೦ |
| ಸಮಾಜಸೇವೆ | .... | ೧ | ೦ | ೬ | ೦ | ೧೪ | ೦ | ೦ | ೧೧ | ೩ |
| ಸಂಪದಭಿವೃದ್ಧಿ ಮತ್ತು ಇತರ | .... | ೪ | ೬ | ೯ | ೧ | ೮ | ೪ | ೧ | ೬ | ೨ |

ಇದರಿಂದ ನಮ್ಮ ಸರಕಾರ ಸಮಾಜಸೇವೆ ಮತ್ತು ಸಂಪದಭಿವೃದ್ಧಿ ಮೊದಲಾದ ಬಾಬುಗಳಿಗೆ ಎಷ್ಟು ಹೆಚ್ಚಾಗಿ ವ್ಯಯ ಮಾಡುತ್ತಿದೆ ಎಂಬುದು ವಿಶದವಾಗುತ್ತದೆ. ಮೈಸೂರಿನ ರಕ್ಷಣೆಯ ಖರ್ಚಿನಲ್ಲಿ ಸುಮಾರು ತಲೆಗೊಂದು ರೂಪಾಯಿನಷ್ಟು ಪೊಗದಿ, ಸೈನ್ಯ ಮತ್ತು ಅರಮನೆ ವೆಚ್ಚಗಳು ಸೇರಿವೆ. ಈ ರೀತಿಯ ವೆಚ್ಚವು ಇಂಡಿಯಾದೇಶದಲ್ಲಿನ ಪ್ರಾಂತಗಳಲ್ಲಿಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ತಲೆಗೆ ಬೀಳುವ ವೆಚ್ಚದ ಸರಾಸರಿ ಮೊಬಲಗಿನಲ್ಲಿ ಮಾತ್ರವಲ್ಲದೆ ವೆಚ್ಚದ ರೀತಿಯಲ್ಲಿಯೂ ಕೂಡ ನಮ್ಮ ಸರಕಾರದ ನೀತಿ ಬಹಳ ಮುಂದುವರಿದಿದೆ. ಇನ್ನು ಮೈಸೂರಿನ ಆದಾಯದ ರೀತಿಯನ್ನು ಪರೀಕ್ಷಿಸೋಣ.

———

# ಪ್ರಕರಣ ೩

## ಸರಕಾರದ ಹುಟ್ಟುವಳಿ—ತೆರಿಗೆ ಬಾಬುಗಳು

ಮೈಸೂರು ಸರಕಾರದ ಹುಟ್ಟುವಳಿ ಈ ಶತಮಾನದ ಆದಿಭಾಗದಲ್ಲಿ ೧೯೨ ಲಕ್ಷ ರೂಪಾಯಿಗಳಿದ್ದು ಈಗ ಸುಮಾರು ಐದು ಕೋಟಿಯಷ್ಟಾಗಿದೆ. ಸಾರ್ವಜನಿಕ ಆಯವ್ಯಯದ ಸಾಮಾನ್ಯ ನಿಯಮಗಳನ್ನು ವಿವರಿಸಿರುವ ಪ್ರಕರಣಗಳಲ್ಲಿ ಹೇಳಿರುವಂತೆ ತೆರಿಗೆ ಬಾಬಿನಿಂದಲೂ, ತೆರಿಗೆಯಲ್ಲದ ಇತರ ಬಾಬುಗಳಿಂದಲೂ ನಮ್ಮ ಸರಕಾರದ ಬೊಕ್ಕಸಕ್ಕೆ ಹಣ ಬಂದು ಸೇರುತ್ತದೆ. ಭೂಕಂದಾಯ, ಅಬ್ಕಾರಿ ವರಮಾನ, ವರಮಾನದ ತೆರಿಗೆ, ಸ್ಟ್ಯಾಂಪು ಮತ್ತು ರಿಜಿಸ್ಟ್ರೇಷನ್ ಫೀ ವರಮಾನ, ಬೆಂಕಿಪೆಟ್ಟಿಗೆ, ಸಕ್ಕರೆ ಇವುಗಳ ಮೇಲಿನ ಸುಂಕ, ಜೂಜಿನ ತೆರಿಗೆ ಇವೇ ಮೊದಲಾದ ತೆರಿಗೆ ರೂಪದ ಹುಟ್ಟುವಳಿಯಿಂದಲೂ, ಚಿನ್ನದ ಗಣಿಯ ರಾಜಾದಾಯ, ಕಾಡು ಖಾತೆಯಿಂದ ಬರುವ ನಿವ್ವಳಾದಾಯ ಮತ್ತು ಸರಕಾರದ ಆಡಳಿತಕ್ಕೊಳಪಟ್ಟ ದೊಡ್ಡ ಕೈಗಾರಿಕೆಗಳು ಮತ್ತು ನೀರಾವರಿ ಉದ್ಯಮಗಳಿಂದ ಬರುವ ಆದಾಯ ಇವೇ ಮೊದಲಾದ ತೆರಿಗೆಯಲ್ಲದೆ ಹುಟ್ಟುವಳಿ ಬಾಬುಗಳಿಂದಲೂ ಸರಕಾರದವರು ತಮ್ಮ ವೆಚ್ಚಕ್ಕೆ ಬೇಕಾಗುವ ಹಣವನ್ನು ಶೇಖರಿಸುವರು. ಕಳೆದ ಮೂವತ್ತು ವರ್ಷಗಳಲ್ಲಿ ವರಮಾನದ ಬೆಳವಣಿಗೆಯನ್ನು ಸ್ಥೂಲವಾಗಿ ತಿಳಿಸುವ ಕೆಲವು ಅಂಕಿಗಳನ್ನು ಇಲ್ಲಿ ಕೊಟ್ಟಿದೆ:—

ಮೈಸೂರು ಸರಕಾರದ ಹುಟ್ಟುವಳಿಯ ಬೆಳವಣಿಗೆ (ಲಕ್ಷ ರೂಪಾಯಿಗಳಲ್ಲಿ)

| ವರ್ಷ | ಒಟ್ಟು ಹುಟ್ಟುವಳಿ (ಲಕ್ಷ ರೂ.) | ತೆರಿಗೆಗಳಿಂದ ಹುಟ್ಟುವಳಿ (ಲಕ್ಷ ರೂ.) | ಇತರ ಬಾಬುಗಳಿಂದ ಹುಟ್ಟುವಳಿ (ಲಕ್ಷ ರೂ.) | ತೆರಿಗೆ ಹುಟ್ಟುವಳಿಯ ಶೇ. ಪ್ರಮಾಣ | ಇತರ ಹುಟ್ಟುವಳಿಯ ಶೇ. ಪ್ರಮಾಣ |
|---|---|---|---|---|---|
| ೧೯೧೦–೧೧ | ೨೨೭·೮೫ | ೧೫೯·೩೩ | ೬೮·೫೨ | ೭೦·೦ | ೩೦·೦ |
| ೧೯೨೦–೨೧ | ೩೧೩·೧೩ | ೨೧೨·೪೩ | ೧೦೦·೭೦ | ೬೭·೮ | ೩೨·೨ |
| ೧೯೩೦–೩೧ | ೩೩೨·೩೫ | ೨೧೨·೦೩ | ೧೨೦·೩೨ | ೬೩·೮ | ೩೬·೨ |
| ೧೯೪೦–೪೧ | ೪೭೫·೧೮ | ೨೬೮·೬೨ | ೨೦೬·೫೬ | ೫೬·೫ | ೪೩·೫ |

ತೆರಿಗೆ ಮತ್ತು ಇದರಿಂದ ಪ್ರತ್ಯೇಕವಾದ ವರಮಾನದ ಬಾಬುಗಳನ್ನು ವಿವರವಾಗಿ ತಿಳಿಸುವ ಕೆಲವು ಅಂಕಿಗಳನ್ನು ಇಲ್ಲಿ ಕೊಟ್ಟಿದೆ:—

### ತೆರಿಗೆ ಹುಟ್ಟುವಳಿ ಬೆಳವಣಿಗೆಯ ವಿವರ (ಲಕ್ಷ ರೂ. ಗಳಲ್ಲಿ)

| ವರ್ಷ | ತೆರಿಗೆಗಳಿಂದ ಒಟ್ಟು ಹುಟ್ಟುವಳಿ | ಭೂ ಕಂದಾಯ | ಅಬ್ಕಾರಿ | ಆದಾಯ ತೆರಿಗೆ | ಸ್ಟಾಂಪು | ರಿಜಿಸ್ಟ್ರೇಷನ್ | ಇತರ ತೆರಿಗೆಗಳು |
|---|---|---|---|---|---|---|---|
| ೧೯೧೦-೧೧ | ೧೫೯·೩೩ | ೧೦೫·೦೯ | ೪೧·೭೨ | ... | ೭·೯೭ | ೧·೬೨ | ೨.೬೩(೧) |
| ೧೯೨೦-೨೧ | ೨೧೨·೪೩ | ೧೦೮·೩೦ | ೭೭·೨೨ | ೮·೧೧ | ೧೫·೭೦ | ೩·೧೦ | ... |
| ೧೯೩೦-೩೧ | ೨೧೨·೦೩ | ೧೧೧·೦೬ | ೬೬·೫೪ | ೧೨·೩೬ | ೧೯·೧೪ | ೨·೯೩ | ... |
| ೧೯೪೦-೪೧ | ೨೬೮·೬೨ | ೧೨೬·೭೭ | ೫೩·೩೩ | ೪೫·೧೨ | ೧೮·೫೩ | ೩·೦೨ | ೩೧·೮೫ (೨) |

### ಇತರ—ತೆರಿಗೆಯಲ್ಲದ ಹುಟ್ಟುವಳಿ ಬೆಳವಣಿಗೆಯ ವಿವರ (ಲಕ್ಷ ರೂ.ಗಳಲ್ಲಿ)

| ಬಾಬುಗಳು | ೧೯೧೦-೧೧ | ೧೯೨೦-೨೧ | ೧೯೩೦-೩೧ | ೧೯೪೦-೪೧ |
|---|---|---|---|---|
| ೧. ಚಿನ್ನದ ಗಣಿಯಿಂದ ರಾಜಾದಾಯ. | ೧೭·೯೯ | ೧೪·೮೨ | ೧೦·೬೪ | ೨೦·೩೨ ೨೬·೩೪ (೩) |
| ೨. ಕಾಡುಖಾತೆ ಹುಟ್ಟುವಳಿ ... | ೨೦·೯೧ | ೧೪·೬೭ | ೧೩·೯೨ | ೨೧·೨೦ |
| ೩. ಸರಕಾರಿ ಉದ್ಯಮಗಳಿಂದ ನಿವ್ವಳ ಆದಾಯ ಒಟ್ಟು | ೧೪·೯೬ | ೫೦·೦೦ | ೫೯·೩೨ | ೧೦೪·೯೮ |
| (ಎ) ಕೃಷ್ಣರಾಜ ಸಾಗರ— | | | | |
| (ಬಿ) ನೀರಾವರಿ ಮತ್ತು ವಿದ್ಯುಚ್ಛಕ್ತಿ ಕಾಮಗಾರಿ. | ೯·೭೫ | ೧೭·೧೨ | ೩೩·೭೮ | ೫೭·೮೭ |
| (ಸಿ) ರೈಲ್ವೆ ... | ೩·೪೨ | ೧೦·೯೧ | ೧೪·೫೫ | ೨೬·೬೦ |
| (ಡಿ) ಗಂಧದೆಣ್ಣೆ ... | ... | ೧೭·೬೫ | ೧೭·೩೩ | ೧೦·೨೦ |
| (ಇ) ಕೈಗಾರಿಕೆ ಉದ್ಯಮಗಳು ... | ೧·೭೯ | ೪·೩೨ | —೬·೩೪ | ೯·೩೧ |
| ೪. ಬಡ್ಡಿ ... | ೭·೯೯ | ೧೦·೬೪ | ೧೮·೮೩ | ೨೯·೫೭ |
| ೫. ಇರಾಖೆ ಜಮಗಳು ... | ೬ ೬೭ | ೧೦·೫೭ | ೧೪·೭೧ | ೧೧·೫೮ |
| ೬. ಬೆಂಗಳೂರು ದಂಡಿನ ಆಡಳಿತದಿಂದ ಸಂದಾಯವಾದ ಆದಾಯ | ... | ... | ೨·೯೨ | ೧·೫೭ |
| ಒಟ್ಟು— | ೬೮·೫೨' | ೧೦೦·೭೦ | ೧೨೦·೩೨ | ೨೦೬·೫೬ |

(೧) ಮನೆಗಂದಾಯ.

(೨) ಎ. ಬೆಂಕಿಕಡ್ಡಿ ಸುಂಕದಿಂದ ೪·೧೪ ಲಕ್ಷ ರೂ. ಗಳೂ; ಸಕ್ಕರೆ ಸುಂಕದಿಂದ ೧೬·೬೮ ಲಕ್ಷ ರೂ. ಗಳೂ; ಜೂಜಿನ ತೆರಿಗೆಯಿಂದ ೦.೫೧ ಲಕ್ಷ ರೂ. ಗಳೂ ಬಂದಿವೆ.

(೩) ಚಿನ್ನದ ಮೇಲಿನ ಸುಂಕ ಇದರಲ್ಲಿ ಸೇರಿರುತ್ತೆ.

ಸರಕಾರದ ಹುಟ್ಟುವಳಿಯಲ್ಲಿ ಬಹುಭಾಗ ತೆರಿಗೆಗಳಿಂದ ಸಂದಾಯವಾದರೂ ಕ್ರಮಕ್ರಮವಾಗಿ ಇತರ ಬಾಬುಗಳ ಹುಟ್ಟುವಳಿ ಬೆಳೆಯುತ್ತಿರುವುದು ಮೇಲಿನ ಅಂಕಿ ಪಟ್ಟಿಗಳಿಂದ ಸ್ಪಷ್ಟವಾಗುತ್ತದೆ. ಪ್ರಜೆಗಳು ಹೊರೆಯೆಂದು ತಿಳಿಯಲಾಗದ ರೀತಿಯಲ್ಲಿ ಸರಕಾರ ಹುಟ್ಟುವಳಿಯ ಹೊಸ ಬಾಬುಗಳನ್ನು ಕಲ್ಪಿಸಿಕೊಂಡು ಪ್ರಜಾಸೌಖ್ಯವನ್ನು ಹೆಚ್ಚಿಸುವ ಶಾಖೆಗಳಿಗಾಗಿ ವೆಚ್ಚಮಾಡುತ್ತಿರುವುದು ಮೈಸೂರು ಸರಕಾರದ ಈಚಿನ ಆಯವ್ಯಯ ನೀತಿಯ ವೈಶಿಷ್ಟ್ಯವೆಂದು ಹೇಳಬಹುದು. ಕಳೆದ ಮೂವತ್ತು ವರ್ಷಗಳಲ್ಲಿ ಸರಕಾರದ ವೆಚ್ಚದ ಮೊತ್ತ ಶೇಕಡ ಸುಮಾರು ಎಂಬತ್ತ ರಷ್ಟು ಹೆಚ್ಚಿದೆ. ತೆರಿಗೆಗಳಿಂದ ಬರುವ ಹುಟ್ಟುವಳಿ ಶೇಕಡ ಸುಮಾರು ನಲವತ್ತೊಂಬತ್ತರಷ್ಟು ಮಾತ್ರ ಹೆಚ್ಚಿದೆ. ಸರಕಾರದ ಕಾರ್ಯಕ್ಷೇತ್ರ ವಿಸ್ತರಿಸುತ್ತಿದ್ದರೂ, ಆದಾಯದ ಮೂಲಗಳು ಅದೇ ಪ್ರಮಾಣದಲ್ಲಿ ಹೆಚ್ಚಿಲ್ಲ. ಸರಕಾರದ ಖಜಾನೆಗೆ ಹಣ ತರುವ ಕೆಲವು ಮುಖ್ಯವಾದ ತೆರಿಗೆ ಬಾಬುಗಳನ್ನು ಸ್ವಲ್ಪಮಟ್ಟಿಗೆ ವಿಮರ್ಶಿಸೋಣ.

## ೧. ಭೂಕಂದಾಯ

ಬೇಸಾಯವೇ ಜೀವನದ ಸರ್ವಸ್ವವಾಗಿರುವ ನಮ್ಮ ದೇಶದಲ್ಲಿ ಹಿಂದಿನಿಂದಲೂ ಭೂಕಂದಾಯ ಸರಕಾರದ ಆದಾಯದ ಆಧಾರಸ್ತಂಭವಾಗಿದೆ. ಬಹಳ ಹಿಂದೆ, ಎಂದರೆ, ಕದಂಬರ ಕಾಲದಲ್ಲಿ ಭೂಕಂದಾಯದ ಸಿಸ್ತು ನಿಯಮಾನುಸಾರವಾಗಿ, ಭೂಗುಣ, ಸ್ಥಳಸನ್ನಿವೇಶಗಳು, ನೀರಾವರಿ ಸೌಲಭ್ಯಗಳು ಇವುಗಳಿಗನುಗುಣವಾಗಿ ವ್ಯವಸ್ಥೆಯಾಗಿದ್ದಂತೆ ಇತಿಹಾಸದಿಂದ ಗೊತ್ತಾಗುತ್ತದೆ. ಹೊಯ್ಸಳರಾಜರು ಖುಷ್ಕಿ ಫಸಲಿನ ಐದನೇ ಒಂದು ಭಾಗವನ್ನೂ, ತರೀ ಫಸಲಿನ ಮೂರನೇ ಒಂದು ಭಾಗವನ್ನೂ ಕಂದಾಯದ ರೂಪದಲ್ಲಿ ತೆಗೆದುಕೊಳ್ಳುತ್ತಿದ್ದರು. ವಿಜಯನಗರದ ಅರಸರು ಫಸಲಿನ ನಾಲ್ಕನೇ ಒಂದು ಭಾಗವನ್ನು ತೆಗೆದುಕೊಂಡಂತೆ ಕಂಡುಬಂದಿದೆ. ಒಡೆಯರ ಆಳಿಕೆಯಲ್ಲಿ (೧೫೭೪–೧೭೬೧) ಬೆಳೆಯ ಆರನೇ ಒಂದು ಭಾಗವನ್ನು ಕಂದಾಯವಾಗಿ ತೆಗೆದುಕೊಳ್ಳುವ ವಾಡಿಕೆ ಇತ್ತು. ಇದೇ ಕಾಲದಲ್ಲಿ ಬಿದನೂರಿನ ಶಿವಪ್ಪ ನಾಯಕನ ಶಿಸ್ತು ಸುಪ್ರಸಿದ್ಧವಾದುದು. ಈತನು ೧೨ ವರ್ಷಗಳ ಧಾರಣೆವಾಸಿಗಳ ಸರಾಸರಿಯನ್ನ ಲೆಕ್ಕಾಚಾರಮಾಡಿಸಿ, ಬೆಳೆಯ ಮೂರನೇ ಒಂದು ಭಾಗವನ್ನು ಸರಕಾರಕ್ಕೆ ಸಲ್ಲಿಸುವುದು ನ್ಯಾಯಸಮ್ಮತವೆಂದು ಭಾವಿಸಿ ಕಂದಾಯದ ಸಿಸ್ತನ್ನು ಏರ್ಪಡಿಸಿದನು. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಒಡೆಯರ ಆಳಿಕೆಯಲ್ಲಿದ್ದ ಭೂಕಂದಾಯದ ಸಿಸ್ತನ್ನು ಬದಲಾಯಿಸಲಿಲ್ಲ. ಕಂದಾಯದ ವಸೂಲಿ ಹಕ್ಕನ್ನು ಹರಾಜು ಹಾಕುತ್ತಿದ್ದರು. ದಿವಾನ್ ಪೂರ್ಣಯ್ಯನವರು ರೀಜನ್ಸಿ ಕಾಲದಲ್ಲಿ ಮೈಸೂರು ಸಂಸ್ಥಾನದ ಭೂಕಂದಾಯದ ಸಿಸ್ತನ್ನು ಪುನರ್ವ್ಯವಸ್ಥೆಗೊಳಿಸಲು ಶ್ರಮಪಟ್ಟರು. ಬೇಸಾಯಮಾಡಿದ ಭೂಮಿಯ ವಿಸ್ತೀರ್ಣವನ್ನು ಅಳತೆಮಾಡಿ ಕಂದಾಯವನ್ನು ಗೊತ್ತು ಮಾಡಬೇಕೆಂಬುದು ಈ ವ್ಯವಸ್ಥೆಯ ಮುಖ್ಯ ಉದ್ದೇಶ

ವಾಗಿತ್ತು. ಸಂಸ್ಥಾನದ ಎಲ್ಲ ಭಾಗಗಳಲ್ಲೂ ಈ ಕ್ರಮವನ್ನು ಅನುಸರಿಸಲು ಆಗ ಸಾಧ್ಯವಾಗಲಿಲ್ಲ. ಕುಷ್ಕಿ ಫಸಲಿನ ಮೂರನೇ ಒಂದು ಭಾಗವೂ, ತರೀ ಫಸಲಿನ ಅರ್ಧ ಭಾಗವೂ ದವಸರೂಪದಲ್ಲಿಯಾಗಲಿ, ದವಸದ ಸರಾಸರಿ ಬೆಲೆಯ ರೂಪದಲ್ಲಿಯಾಗಲಿ ರೈತನು ಸರಕಾರಕ್ಕೆ ಕಂದಾಯವಾಗಿ ಕೊಡಬೇಕೆಂದು ನಿರ್ಧರವಾಯಿತು. ಸರಕಾರ ಕಂದಾಯ ವಸೂಲುಮಾಡುವ ಜವಾಬ್ದಾರಿಯನ್ನು ವಹಿಸಿತು. ಬ್ರಿಟಿಷರ ಆಡಳಿತಕ್ಕೊಳಗಾದ ಐವತ್ತು ವರ್ಷಗಳಲ್ಲಿ ಮೈಸೂರಿನ ಭೂಕಂದಾಯದ ವ್ಯವಸ್ಥೆ ಒಂದು ರೀತಿಯಲ್ಲಿ ನಿರುಕುಕೊಂಡಿತು. ೧೮೫೬ರಿಂದ ೧೮೬೨ರ ವರೆಗಿನ ಆರು ವರ್ಷಗಳಲ್ಲಿ ಬ್ರಿಟಿಷ್ ಕಮಿಷನ್‌ರವರು ಸಂಸ್ಥಾನದಲ್ಲಿ ಬೇಸಾಯ ಮಾಡಿದ್ದ ಭೂಮಿಯನ್ನೆಲ್ಲಾ ಹಿಡುವಳಿಗೆ ತಕ್ಕಂತೆ, ತರಿ, ಕುಷ್ಕಿ ಮತ್ತು ಬಾಗಾಯಿತು ಎಂಬುದಾಗಿ ವಿಂಗಡಿಸಿ, ಗ್ರಾಮಗಳ ತಃಖ್ತೆಗಳನ್ನು ಏರ್ಪಡಿಸಿದರು. ಭೂಕಂದಾಯಕ್ಕೆ ಸಂಬಂಧಪಟ್ಟ ಈ ದಾಖಲೆಗಳಿಂದ ಮತ್ತು ಸರ್ವೆ ಸೆಟಲ್‌ಮೆಂಟ್ ಕ್ರಮಗಳಿಂದ ರೈತನು ತನ್ನ ಹಕ್ಕು ಬಾಧ್ಯತೆಗಳನ್ನು ಖಚಿತವಾಗಿ ತಿಳಿಯಲು ಅನುಕೂಲವಾಯಿತು. ಇದರಿಂದ ವ್ಯವಸಾಯ ಅಭಿವೃದ್ಧಿ ಹೊಂದಲು ಸಹಾಯವಾಯಿತು ಸರ್ವೆ ಸೆಟಲ್‌ಮೆಂಟ್ ಸಿಸ್ತನ್ನು ಅನುಸರಿಸಿ ಭೂಕಂದಾಯವನ್ನು ವಿಧಿಸಬೇಕೆಂಬ ನಿಯಮ ೧೮೮೮ರಲ್ಲಿ ಮೈಸೂರು ದೇಶದಲ್ಲಿ ಆಚರಣೆಗೆ ಬಂದಿತು. ಈ ರೀತಿ ಕಂದಾಯ ನಿರ್ಣಯಿಸಲು ಬೇಕಾದ ಸೌಕರ್ಯಗಳನ್ನೂ ಕಾಯಿದೆ ಕಟ್ಟಳೆಗಳನ್ನೂ ಇಲಾಖೆಗಳನ್ನೂ ಸರಕಾರ ಏರ್ಪಾಡುಮಾಡಿ ಕಂದಾಯದ ಶಿಸ್ತನ್ನು ಸಾರ್ವಜನಿಕ ಆಯವ್ಯಯಶಾಸ್ತ್ರದ ನಿಯಮಗಳಿಗೆ ಸರಿಹೋಗುವಂತೆ ಸರಕಾರ ಬದಲಾಯಿಸಿತು. ಈ ಸಿಸ್ತು ಹೆಚ್ಚುಕಡಮೆ ಈಗ ಜಾರಿಯಲ್ಲಿದೆ. ಕಾಲಾನುಗುಣವಾಗಿ ಕಾಯಿದೆ ಕಟ್ಟಲೆಗಳಲ್ಲಿ ಬದಲಾವಣೆಗಳಾಗಿವೆ. ಭೂಕಂದಾಯದ ಕಾನೂನುಗಳಿಗೆ ಮತ್ತು ಸರ್ವೆ ಸೆಟಲ್‌ಮೆಂಟ್ ಏರ್ಪಾಡುಗಳಿಗೆ ಒಳಪಟ್ಟು ಸಾಗುವಳಿಯಾದ ಭೂಮಿ ಸುಮಾರು ೧೧ ಲಕ್ಷ ಹಿಡುವಳಿದಾರರಿಗೆ ಸೇರಿದೆ. ಸುಮಾರು ಶೇಕಡ ೮೫ರಷ್ಟು ಹಿಡುವಳಿ ಜಮೀನಿನ ವಿಸ್ತೀರ್ಣ ಹತ್ತು ಎಕರೆಗಳಿಗೆ ಕಡಮೆಯಾಗಿರುತ್ತದೆ. ಹಿಡುವಳಿದಾರರಲ್ಲಿ ಶೇಕಡ ೮೯ರಷ್ಟು ರೈತರು ಸರಾಸರಿ ತಲೆ ಒಂದಕ್ಕೆ ೨೫ ರೂಪಾಯಿ ಮತ್ತು ಅದಕ್ಕೆ ಕಮ್ಮಿಯಾದ ಕಂದಾಯವನ್ನು ಸರಕಾರಕ್ಕೆ ಸಲ್ಲಿಸುತ್ತಾರೆ. ಸರಕಾರಕ್ಕೆ ಭೂಕಂದಾಯದ ರೂಪದಲ್ಲಿ ಬರುವ ಹುಟ್ಟುವಳಿಯಲ್ಲಿ ಅರ್ಧಕ್ಕೆ ಮೇಲ್ಪಟ್ಟು (೧೯೩೬-೩೭ರಲ್ಲಿ ಸುಮಾರು ೬೩.೬೮ ಲಕ್ಷ ರೂಪಾಯಿಗಳು) ಹೀಗೆ ಕಡಮೆ ಕಂದಾಯ ತೆರುವ ಹಿಡುವಳಿದಾರರಿಂದ ವಸೂಲಾಗುತ್ತದೆ. ಸಂಸ್ಥಾನದ ವ್ಯವಸಾಯ ಮತ್ತು ಭೂಕಂದಾಯಗಳ ಸಿಸ್ತಿನಲ್ಲಿ ಸಣ್ಣ ಹಿಡುವಳಿದಾರನ ಸ್ಥಾನವನ್ನು ಕೆಳಗಿರುವ ಅಂಕಿಗಳಿಂದ ತಿಳಿಯಬಹುದು.

## ಹಿಡುವಳಿ ವಿವರ

| | ಹಿಡುವಳಿಯ ವಿಸ್ತೀರ್ಣದ ಮಿತಿ | ಹಿಡುವಳಿಯ ಸಂಖ್ಯೆ | ಹಿಡುವಳಿ ಜಮೀನಿನ ಒಟ್ಟು ವಿಸ್ತೀರ್ಣ (ಎಕರೆಗಳು) |
|---|---|---|---|
| ೧. | ೧ ಎಕರೆ ಮತ್ತು ಅದಕ್ಕೆ ಕಡಿಮೆ ಇರುವುದು | ೧,೭೩,೯೭೨ | ೧,೪೭,೩೬೬ |
| ೨. | ೧ ಎಕರೆಗೆ ಮೇಲ್ಪಟ್ಟು ೫ ಎಕರೆಗೆ ಮೀರದ ಇರುವುದು ... ... | ೫,೦೬,೬೯೧ | ೧,೩೭೯,೬೧೪ |
| ೩. | ೫ ಎಕರೆಗೆ ಮೇಲ್ಪಟ್ಟು ೧೦ ಎಕರೆಗೆ ಮೀರದಿರುವುದು ... | ೨,೬೭,೯೧೫ | ೧,೭೮೭,೧೯೦ |
| ೪. | ೧೦ ಎಕರೆಗೆ ಮೇಲ್ಪಟ್ಟು ೫೦ ಎಕರೆಗೆ ಮೀರದಿರುವುದು ... ... | ೧,೫೧,೪೯೨ | ೨೯,೨೭,೯೪೪ |
| ೫. | ೫೦ ಎಕರೆಗೆ ಮೇಲ್ಪಟ್ಟು ೧೦೦ ಎಕರೆಗೆ ಮೀರದಿರುವುದು ... ... | ೧೫,೦೩೨ | ೧೦,೨೧,೧೦೮ |
| ೬. | ೧೦೦ ಎಕರೆಗೆ ಮೇಲ್ಪಟ್ಟು ೫೦೦ ಎಕರೆಗೆ ಮೀರದಿರುವುದು ... ... | ೨,೩೩೩ | ೪೪,೫೯,೯೨೩ |
| ೭. | ೫೦೦ ಎಕರೆಗೆ ಮೀರಿರುವುದು ... | ೧೦೬ | ೧,೧೫,೨೭೨ |

## ಭೂ ಕಂದಾಯದ ವಿಂಗಡಣೆ

| | ಕಂದಾಯದ ವಿವರ | | ಸಂಖ್ಯೆ | ಒಟ್ಟು ಮೊತ್ತ ಲಕ್ಷ ರೂ. ಗಳು |
|---|---|---|---|---|
| ೧. | ೫ ರೂ. ಮತ್ತು ಅದಕ್ಕೆ ಕಡಿಮೆ ಕಂದಾಯ ಕೊಡುವವರು | | ೫,೦೮,೧೨೭ | ೧೬·೪೨ |
| ೨. | ೬ ರೂಪಾಯಿನಿಂದ ೨೫ ರೂಪಾಯಿಗಳು | ,, | ೪,೮೩,೪೭೪ | ೪೭ ೨೬ |
| ೩. | ೨೬ ರೂಪಾಯಿನಿಂದ ೧೦೦ ರೂಪಾಯಿಗಳು | ,, | ೧,೧೯,೬೫೦ | ೩೭·೫೫ |
| ೪. | ೧೦೧ ರೂಪಾಯಿನಿಂದ ೫೦೦ ರೂಪಾಯಿಗಳು | ,, | ೭,೦೫೧ | ೧೩·೪೯ |
| ೫. | ೫೦೦ ರೂಪಾಯಿಗಳಿಗೆ ಮೇಲ್ಪಟ್ಟು | ,, | ೨೭೫ | ೨·೯೧ |

ಸಾಗುವಳಿ ಕ್ರಮದಲ್ಲಾಗಲಿ ಕಂದಾಯದ ಸಿಸ್ತಿನಲ್ಲಾಗಲಿ ಬದಲಾವಣೆಗಳನ್ನು ಸೂಚಿಸುವಾಗ ಮತ್ತು ಆಚರಣೆಯಲ್ಲಿ ತರಲು ಸಣ್ಣ ಹಿಡುವಳಿದಾರರ ಮೇಲೆ ಆ ಬದಲಾವಣೆಗಳ ಪ್ರಭಾವವನ್ನು ತಿಳಿಯಬೇಕಾದುದು ಅವಶ್ಯಕ.

ಇನ್ನು ಭೂಕಂದಾಯದ ನಿರ್ಣಯಕ್ಕೆ ಸಂಬಂಧಪಟ್ಟ ಕೆಲವು ವಿಷಯಗಳನ್ನು ವಿಮರ್ಶಿಸೋಣ. ಸರಕಾರದವರು ಭೂಮಿಯನ್ನು ಅಳತೆಮಾಡಿ ಕೆಲವು ಗೊತ್ತಾದ ನಿಯಮಗಳಿಗನುಸಾರವಾಗಿ ಕಂದಾಯವನ್ನು ನಿಶ್ಚಯಿಸುತ್ತಾರೆಂದು ಹಿಂದೆ ಹೇಳಿದೆ. ಭೂಮಿಯ ಅಳತೆ ಮೈಸೂರಿನಲ್ಲಿ ೧೮೬೩ರಲ್ಲಿ ಮೊದಲು ಪ್ರಾರಂಭವಾಯಿತು. ಸುಮಾರು ೩೨ ವರ್ಷಗಳಲ್ಲಿ ರೈತವಾರಿ ಜಮೀನುಗಳನ್ನೆಲ್ಲಾ ಅಳತೆಮಾಡಿ ಆ ಜಮೀನಿನ ಕಂದಾಯವನ್ನು ಮೊದಲು ನಿಗದಿ ಮಾಡಲಾಯಿತು. ಮೊದಲು ಕಂದಾಯ ಗೊತ್ತುಮಾಡಿದಾಗ ಅನುಸರಿಸಿದ ಕ್ರಮ ಹೀಗಿತ್ತು.

ಒಂದು ಗ್ರಾಮದ ಜಮೀನನ್ನು ನಿರ್ದಿಷ್ಟ ಭಾಗಮಾಡಿ ಕಣಗಳಾಗಿ ಮೊದಲು ವಿಂಗಡಿಸಲಾಯಿತು. ಕಣದ ವಿಸ್ತೀರ್ಣವನ್ನು ಬಾಂದುಕಲ್ಲು ನೆಟ್ಟು ಅದರ ವಿಸ್ತೀರ್ಣದ ದಾಖಲೆಯನ್ನು ಸುಲಭವಾಗಿ ತಿಳಿಯಲು ತಕ್ಕ ಏರ್ಪಾಡಾಯಿತು. ಹೆಚ್ಚು ಅನುಕೂಲವಿಲ್ಲದಿರುವ ರೈತನು ಒಂದು ಜೊತೆ ಎತ್ತುಗಳಿಂದ ಉಳಬಹುದಾದ ವಿಸ್ತೀರ್ಣವೂ ಕಣದ ಪರಿಮಿತಿಯನ್ನು ಗೊತ್ತುಮಾಡಿತು. ಇದರಿಂದ ಕಣದ ವಿಸ್ತೀರ್ಣ ಹಳ್ಳಿಹಳ್ಳಿಗೂ ಅಲ್ಲಿಯ ಭೂಗುಣ, ವ್ಯವಸಾಯಕ್ರಮ, ಸಾಗುವಳಿಯಾದ ಬೆಳೆ ಇವುಗಳನ್ನು ಅನುಸರಿಸಿ ಹೆಚ್ಚು ಕಡಿಮೆಯಾಗುತ್ತಿತ್ತು. ಹೀಗೆ ವಿಂಗಡಿಸಿದ ಭೂಮಿಯನ್ನು ಅದರ ಫಲವತ್ತಿಗನುಸಾರವಾಗಿ ಸುಮಾರು ಒಂಭತ್ತು ವರ್ಗಗಳಾಗಿ ಭಾಗಿಸುವುದು. ಎರಡನೆ ವಿಂಗಡಣೆಯ ಕ್ರಮ. ಮಣ್ಣಿನ ಆಳ, ಬಣ್ಣ, ನೀರಾವರಿಯ ಸೌಲಭ್ಯ ಇವೇ ಮೊದಲಾದ ಅಂಶಗಳನ್ನು ಗಮನಿಸಿ ಭೂಮಿಯ ಬೆಲೆಯನ್ನು ನಿರ್ಧರಿಸುವರು. ಉತ್ತಮ ದರ್ಜೆಯ ಭೂಮಿಯನ್ನು ೧೬ ಆಣೆ ಬೆಳೆಯಂತೆ ಭಾವಿಸಿ, ಇತರ ಭೂಮಿಯ ಅಂದಾಜು ಬೆಲೆ ನಿರ್ಧರಿಸುವುದು ಸಾಮಾನ್ಯ ಪದ್ಧತಿ. ಇದಾದಮೇಲೆ ಒಂದು ತಾಲ್ಲೂಕಿನ ಗ್ರಾಮಗಳನ್ನು ಅಲ್ಲಿನ ಮಳೆ, ವ್ಯಾಪಾರ ಸೌಕರ್ಯ, ಅಲ್ಲಿನ ಒಕ್ಕಲುತನದ ಸ್ಥಿತಿಗತಿ ಇವುಗಳಿಗೆ ತಕ್ಕಂತೆ ಬೇರೆಬೇರೆ ಗುಂಪುಗಳಾಗಿ ಗಣಿಸಿ, ಆಯಾ ಗುಂಪಿಗೆ ಸೇರಿದ ಗ್ರಾಮಗಳಲ್ಲಿ ವಿಧಿಸುವ ಕಂದಾಯದ ಹೊರೆಯಲ್ಲಿ ಒಂದು ವಿಧದ ಸಮಾನತೆಯನ್ನು ಉಂಟುಮಾಡಲು ಪ್ರಯತ್ನಪಡುವರು. ಒಂದೊಂದು ಗುಂಪಿಗೆ ಸೇರಿದ ಬೇರೆ ಬೇರೆ ವರ್ಗದ ಭೂಮಿಗೂ ಭೂಕಂದಾಯದ ಪರಮಾವಧಿ ದರಗಳನ್ನು ಮೊದಲು ಸರಕಾರವು ನಿರ್ಧರಿಸುತ್ತದೆ. ಪರಮಾವಧಿ ದರಗಳನ್ನು ನಿರ್ಧರಿಸುವಾಗ, ಹಿಂದೆ ವಿಧಿಸಿದ್ದ ಕಂದಾಯದ ದರಗಳು, ಬೇಸಾಯದಲ್ಲಿ ಉಂಟಾದ ಮತ್ತು ಉಂಟಾಗಬಹುದಾದ ಬದಲಾವಣೆಗಳು ಇವೇ ಮೊದಲಾದ ಅಂಶಗಳನ್ನು ವಿಮರ್ಶಿಸುವುದು ವಾಡಿಕೆಯಲ್ಲಿದೆ. ಜನ ರೊಪ್ಪುವ ರೀತಿ ಕ್ರಮಬದ್ಧವಾದ ತತ್ವಗಳ ಆಧಾರದಮೇಲೆ ಭೂಕಂದಾಯವನ್ನು ನಿರ್ಧರಿಸಬೇಕೆಂಬ ಅಭಿಲಾಷೆಯಿಂದ ಮೇಲೆ ವಿವರಿಸುವ ಕ್ರಮಗಳನ್ನು ಕಾನೂನಿನಲ್ಲಿ ಸೇರಿಸಿರುವರು. ಹೀಗೆ ವಿಧಿಸಿದ ಕಂದಾಯವನ್ನು ಮೂವತ್ತು ವರ್ಷಗಳಿಗೊಂದು ಸಲ ಪುನರ್ವಿಮರ್ಶೆ ಮಾಡುತ್ತಾರೆ. ಹೀಗೆ ಮಾಡುವಾಗ ಎಂದರೆ ಮೊದಲು ವಿಧಿಸಿದ ಕಂದಾಯದ ದರಗಳನ್ನು ಹೆಚ್ಚುಕಡಿಮೆ ಮಾಡುವಾಗ, ಧಾರಣೆವಾಸಿಗಳ ಬದಲಾವಣೆ, ಸ್ಥಳವಸತಿಯಲ್ಲುಂಟಾಗಿರುವ ವಿಶೇಷ ಸನ್ನಿವೇಶಗಳು, ಮಾರ್ಗಸೌಲಭ್ಯಗಳಲ್ಲುಂಟಾಗಿರುವ ಬದಲಾವಣೆ ಇವೇ ಮೊದಲಾದ ರೀತಿಯಲ್ಲಿ ಸಾರ್ವಜನಿಕ ವೆಚ್ಚದಿಂದ ಭೂಸ್ಥಿತಿಯಲ್ಲುಂಟಾಗಿರುವ ವ್ಯತ್ಯಾಸಗಳನ್ನು ಪರಿಗಣಿಸುವರು. ರೈತನು ತನ್ನ ಸ್ವಂತ ಲಾಗೋಡಿನಿಂದ ತನ್ನ ಜಮೀನಿನ ಸ್ಥಿತಿಯನ್ನು ಉತ್ತಮ ಪಡಿಸಿದ್ದರೆ ಇದನ್ನು ಲೆಕ್ಕಾಚಾರಮಾಡಿ ಕಂದಾಯದ ದರವನ್ನು ಹೆಚ್ಚಿಸುವುದಿಲ್ಲ. ಹೀಗೆ ಕೆಲವು ನಿಯಮಗಳನ್ನು ವಿಧಿಸಿರುವುದರಿಂದ ಕಂದಾಯದ ದರಗಳನ್ನು ಸ್ವೇಚ್ಛೆಯಾಗಿ ಹೆಚ್ಚಿಸಲು

ಅವಕಾಶವಿರುವುದಿಲ್ಲ. ಒಂದು ಹಿಡುವಳಿಗೆ ವಿಧಿಸುವ ಕಂದಾಯದ ಮೊತ್ತ ಶೇಕಡ ೧೦೦ಕ್ಕಿಂತ ಹೆಚ್ಚದ ರೀತಿಯಲ್ಲಿ, ಒಂದು ಗ್ರಾಮಕ್ಕೆ ವಿಧಿಸುವ ಕಂದಾಯದ ಮೊತ್ತ ಶೇಕಡ ೭೬ಕ್ಕೆ ಮೀರದ ರೀತಿಯಲ್ಲಿ, ಒಂದು ತಾಲ್ಲೂಕಿನ ಕಂದಾಯದ ಮೊತ್ತ ಶೇಕಡ ೩೩ಕ್ಕಿಂತ ಹೆಚ್ಚದ ರೀತಿಯಲ್ಲಿ ಕಂದಾಯದ ದರ ಗಳನ್ನು ಪುನರ್ವಿಮರ್ಶಿಸಿದ ಕಾಲದಲ್ಲಿ ನಿರ್ಣಯಮಾಡಬೇಕೆಂಬ ನಿಯಮವುಂಟು.

ರೈತನ ಹಿತವನ್ನು ಕಾಪಾಡಿ ಸರಕಾರಕ್ಕೆ ಹೆಚ್ಚು ಹಣ ಕೂಡಿಸುವ ರೀತಿ ಯಲ್ಲಿ ಗೊತ್ತಾದ ನಿಯಮಗಳನ್ನು ಅನುಸರಿಸಿ ವಿಧಿಸಲ್ಪಟ್ಟಿರುವ ಮೈಸೂರು ಭೂಕಂದಾಯದ ಸಿಸ್ತಿನಲ್ಲಿ ಕೆಲವು ದೋಷಗಳುಂಟು. ಕಂದಾಯದ ದರಗಳು ಪ್ರಜಾಪ್ರತಿನಿಧಿಗಳ ಸಮ್ಮತಿಗೆ ಒಳಪಡಬೇಕೆಂಬ ನಿಯಮವಿರುವುದಿಲ್ಲ. ಇದೊಂದು ಕೊರತೆ. ಜನರು ಒಪ್ಪಿ ತೆರುವ ಕಂದಾಯದ ಹೊರೆ ಅವರಿಗೆ ಅಷ್ಟಾಗಿ ಕಾಣಿಸು ವುದಿಲ್ಲ. ಅಲ್ಲದೆ ಆಡಳಿತ ವರ್ಗದವರಿಗೆ ಇದರ ವಸೂಲಿಯೂ ಸುಲಭವಾಗುತ್ತದೆ. ಬೆಳೆಯಲ್ಲಿ ಎಷ್ಟು ಭಾಗವನ್ನು ಸರಕಾರಕ್ಕೆ ಸಲ್ಲಿಸಬೇಕೆಂಬ ವಿಷಯದಲ್ಲಿಯೂ ನಿಕರವಾದ ನಿಯಮಗಳಿಲ್ಲದಿರುವುದು ಮತ್ತೊಂದು ದೋಷ. ಮೈಸೂರಿನಲ್ಲಿ ಭೂಕಂದಾಯದ ದರಗಳು ಅನೂಚಾನವಾಗಿ ಬಂದಿರುವ ಒಟ್ಟು ಬೆಳೆಯ ಆರನೇ ಒಂದು ಭಾಗಕ್ಕೆ ಅಥವ ವೆಚ್ಚ ಕಳೆದು ನಿಲ್ಲುವ ನಿವ್ವಳಬೆಳೆಯ ಅರ್ಧಭಾಗಕ್ಕೆ ಹೆಚ್ಚಿಲ್ಲ ವೆಂದು ಆಡಳಿತವರ್ಗದವರು ಎಷ್ಟೇ ಹೇಳಿದರೂ, ಶಾಸ್ತ್ರೀಯವಾಗಿ ಇದನ್ನು ನಿರ್ಧರಿಸಿ ಭೂಕಂದಾಯದ ಕಾನೂನಿನಲ್ಲಿ ಸ್ಪಷ್ಟಪಡಿಸದಿರುವುದೊಂದು ದೋಷ. ಒಟ್ಟು ಬೆಳೆಯಲ್ಲಿ ಅಥವ ನಿವ್ವಳ ಬೆಳೆಯಲ್ಲಿ ಯಾವ ಪ್ರಮಾಣದಲ್ಲಿ ಕಂದಾಯದ ದರವನ್ನು ಗೊತ್ತು ಮಾಡಬೇಕೆಂಬ ಅಂಶವನ್ನು ನಿರ್ಧರಿಸುವುದು ಅವಶ್ಯಕ. ೧೯೦೦ರಲ್ಲಿ ಬೊಂಬಾಯಿ ಪ್ರಾಂತದಲ್ಲಿ ರೈತರ ಹಕ್ಕುದಾರಿ ತಃಖ್ತೆ (ರಿಕಾರ್ಡ್ಸ್ ಆಫ್ ರೈಟ್ಸ್) ಕಾನೂನು ಜಾರಿಗೆ ಬಂದಿತು. ಅದರಿಂದ ಜಮೀನುದಾರನಿಗೆ ದೊರೆಯುವ ಗುತ್ತಿಗೆ, ವಾರ ಇವುಗಳ ವಿಷಯದಲ್ಲಿ ಖಚಿತವಾದ ಅಂಕಿ ಅಂಶ ಗಳನ್ನು ಪಡೆಯಲು ಅಲ್ಲಿನ ಸರಕಾರಕ್ಕೆ ಸಾಧ್ಯವಾಯಿತು. ರೈತನು ಕೊಡುವ ಗುತ್ತಿಗೆಯಲ್ಲಿ ಮೂರನೇ ಒಂದು ಭಾಗಕ್ಕಿಂತ ಹೆಚ್ಚದಂತೆ ಕಂದಾಯದ ದರಗಳನ್ನು ವಿಧಿಸಬೇಕೆಂಬ ನಿಯಮವನ್ನು ಬೊಂಬಾಯಿ ಪ್ರಾಂತ ಸರಕಾರ ಅನುಸರಿಸಿತು. ಮೈಸೂರು ಸಂಸ್ಥಾನದಲ್ಲಿಯೂ ಹಕ್ಕುದಾರಿ ತಃಖ್ತೆ ಕಾನೂನು ೧೯೨೭ರಿಂದಲೂ ಆಚರಣೆಯಲ್ಲಿದೆ. ಈ ತಃಖ್ತೆಗಳಿಂದ ದೊರೆಯುವ ಅಂಕಿ ಅಂಶಗಳನ್ನು ಪರೀಕ್ಷಿಸಿ ದೇಸಾಯಗಾರನ ಸ್ಥಿತಿಗತಿಗಳನ್ನು ಮನವರಿತು ನಿವ್ವಳ ಫಸಲಿನಲ್ಲಿ ಗೊತ್ತಾದ ಭಾಗಕ್ಕಿಂತ ಕಂದಾಯದ ದರದ ಸಮಿತಿ ಮಿತಿಮೀರಕೂಡದೆಂದು ಗೊತ್ತುಮಾಡು ವುದು ಸುಲಭ. ಇದು ಸಾಧುವಾದದ್ದೂ ಹೌದು. ಹೀಗೆ ಮಾಡಿದರೆ ಭೂಕಂದಾ ಯದ ತತ್ವವನ್ನು ಅನುಸರಿಸಿದಂತೆಯೂ ಆಗುವುದು.

ಕೇವಲ ತಾರ್ಕಿಕ ದೃಷ್ಟಿಯಿಂದ ನೋಡಿದರೆ, ಬೆಳೆಯು ಬರಲಿ, ಬರದಿರಲಿ, ಕಂದಾಯವನ್ನು ಕಡ್ಡಾಯವಾಗಿ ವಸೂಲು ಮಾಡುವ ಹಕ್ಕು ಸರಕಾರಕ್ಕಿದೆ. ಕಂಧಾಯ ಗೊತ್ತುಮಾಡುವಾಗ ಬೆಳೆ ಬಂದ ಮತ್ತು ಬಾರದ ವರ್ಷಗಳ ಸರಾಸರಿ

ಯನ್ನು ಲೆಕ್ಕಮಾಡಿ ಕಂದಾಯದ ದರಗಳನ್ನು ಗೊತ್ತು ಮಾಡುತ್ತಾರಷ್ಟೆ. ಹೆಚ್ಚು ಬೆಳೆ ಕಟಾವಾದ ವರ್ಷಗಳಲ್ಲಿ ಹಣ ಮಿಗಿಸಿ, ಫಸಲು ಸರಿಯಾಗಿ ಬಾರದ ವರ್ಷಗಳಲ್ಲಿ ಕಂದಾಯ ಕೊಡಲು ಅವಕಾಶವಿರುವುದೆಂಬ ವಾದದಲ್ಲಿ ನ್ಯಾಯವಿರುವುದು. ದಿಟ. ಆದರೆ ವಾಸ್ತವವಾಗಿ ಈ ರೀತಿಯ ಆಚರಣೆ ನಮ್ಮ ಬಡ ರೈತನಿಗೆ ಅಸಾಧ್ಯ.

ನಮ್ಮ ಭೂಕಂದಾಯದ ಸಿಸ್ಟಿನಲ್ಲಿ ಮತ್ತೊಂದು ದೋಷವುಂಟು. ರಿಸೆಟಲ್‌ಮೆಂಟ್ ಆಗುವುದಕ್ಕೆ ಮುಂಚೆ ಇರುವ ನೀರಾವರಿ ಸೌಕರ್ಯಗಳು ಅಚ್ಚಳಿಯದೆ ಒಂದೇ ರೀತಿ ಇರುವುದೆಂಬ ಭಾವನೆಯಮೇಲೆ ಕಂದಾಯವನ್ನು ಗೊತ್ತು ಮಾಡುವರು. ಮೂವತ್ತು ವರ್ಷದ ಅವಧಿಯಲ್ಲಿ ಅನೇಕವೇಳೆ ಕೆರೆ ನಾಲೆಗಳು ದುರಸ್ತಾಗದೆ ಅದಕ್ಕೆ ಸಂಬಂಧಪಟ್ಟ ಅಚ್ಚುಕಟ್ಟು ಕೆಡಬಹುದು. ಕೆರೆಗಳಲ್ಲಿ ಸಾಕಾದಷ್ಟು ನೀರಿಲ್ಲದಿದ್ದರೂ ಹೆಚ್ಚು ಹೆಚ್ಚು ಜಮೀನುಗಳನ್ನು ಸರಕಾರದವರು ಅಲ್ಲಿನ ಅಚ್ಚುಕಟ್ಟಿಗೆ ಸೇರಿಸುತ್ತಾರೆಂಬ ಅಹವಾಲುಗಳು ಆಗಾಗ ಬಂದಿರುತ್ತವೆ. ಇದರಿಂದ ಮೂವತ್ತು ವರ್ಷಗಳಲ್ಲಿ ಬದಲಾವಣೆ ಹೊಂದದ ವ್ಯವಸ್ಥೆಯಿಂದ ಕಂದಾಯದ ಹೊರೆ ಕೆಲವು ವೇಳೆ ರೈತನಿಗೆ ಭಾರವಾಗುವುದು.

ಮೈಸೂರು ಸಂಸ್ಥಾನದಲ್ಲಿ ಭೂಕಂದಾಯದ ತೆರಿಗೆಯೊಂದಿಗೆ ನೀರಿಗಾಗಿ ವಿಧಿಸುವ ತೆರಿಗೆಯನ್ನು ಸೇರಿಸುವುದರಿಂದ ಕೆಲವು ತೊಂದರೆಗಳುಂಟು. ಬೇಸಾಯಕ್ಕೆ ತರಲ್ಪಟ್ಟ ೬೯ ಲಕ್ಷ ಎಕರೆ ಜಮೀನಿನಲ್ಲಿ ಸುಮಾರು ೧೧ ಲಕ್ಷ ಎಕರೆಗಳಿಗೆ ನೀರಾವರಿ ಉದ್ಯಮಗಳಿಂದ ಸೌಕರ್ಯ ಒದಗಿರುತ್ತದೆ. ಸರಕಾರದಿಂದ ಒದಗಿದ ನೀರಿಗಾಗಿ ಕೊಡುವ ತೆರಿಗೆ ಒಟ್ಟು ಭೂಕಂದಾಯದಲ್ಲಿ ಸುಮಾರು ೪೦ ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಿರುತ್ತದೆ. ನೀರಾವರಿ ತೆರಿಗೆಯನ್ನು ಕೆಲವು ಆಧಾರಗಳಮೇಲೆ ಗೊತ್ತು ಮಾಡುತ್ತಾರೆ. ಸದಾಕಾಲದಲ್ಲಿ ನೀರಿನ ಅನುಕೂಲವಿರುವುದೋ ಇಲ್ಲವೋ, ಭೂಮಿ ಎತ್ತರದಲ್ಲಿರುವುದೋ ತಗ್ಗಿನಲ್ಲಿರುವುದೋ, ಅಕ್ಕಪಕ್ಕದಲ್ಲಿ ಇರುವ ನೀರಾವರಿ ತೆರಿಗೆ ಪ್ರಮಾಣ, ಇವೇ ಮೊದಲಾದ ಅಂಶಗಳನ್ನು ವಿಮರ್ಶಿಸಿ ಹೊಸ ನಾಲೆಯಿಂದ ಆಬಾದಾಗುವ ಜಮೀನುಗಳಿಗೆ ನೀರಿನ ತೆರಿಗೆಯನ್ನು ನಿಷ್ಕರ್ಷಿಸುವರು. ಹೀಗೆ ಗೊತ್ತಾದ ತೆರಿಗೆಯನ್ನು ಮುಂದೆ ಭೂಕಂದಾಯವನ್ನು ಬದಲಾಯಿಸಿದ ಕಾಲದಲ್ಲಿ ನೀರಿನ ತೆರಿಗೆ ಮತ್ತು ಕಂದಾಯಗಳನ್ನು ಸೇರಿಸಿ ಒಟ್ಟು ಮೊತ್ತವನ್ನು ಕಂದಾಯವಾಗಿ ಪರಿಗಣಿಸುತ್ತಾರೆ. ಆಯವ್ಯಯ ಶಾಸ್ತ್ರದೃಷ್ಟಿಯಿಂದ ಹೀಗೆ ಸೇರಿಸುವುದು ಸರಿಯಲ್ಲ. ನೀರಿನ ತೆರವು ಸರಕಾರದಿಂದ ಒದಗುವ ನೀರಿನ ಸೌಕರ್ಯಕ್ಕಾಗಿ ರೈತನು ಕೊಡುವ ಬೆಲೆಯಾಗಿರುವುದು; ಭೂಕಂದಾಯ ಸ್ಥಿರಸ್ವತ್ತಿನ ಅನುಭವದಾರನಮೇಲೆ ಸರಕಾರ ಕಡ್ಡಾಯವಾಗಿ ಹೇರುವ ತೆರಿಗೆ. ಇವೆರಡರ ಸ್ವರೂಪದಲ್ಲಿ ವ್ಯತ್ಯಾಸವಿರುವಾಗ, ಇವೆರಡನ್ನೂ ಒಟ್ಟುಗೂಡಿಸುವುದು ಸರಿಯಲ್ಲವೆಂದು ಆಗಾಗ ಸೂಚನೆಗಳು ಬಂದಿವೆ. ನೀರಿನ ಉಪಯೋಗಕ್ಕಾಗಿ ಕೊಡುವ ತೆರ, ನೀರಿನ ಸರಬರಾಜಿಗೆ ತಗಲುವ ವೆಚ್ಚ ಮತ್ತು ನೀರಿನ ಬೆಲೆಗೆ ಅನುಗುಣವಾಗಿರಬೇಕು. ನೀರಿಗಿರುವ ದರದು, ನೀರಿನ ಅಭಾವ,

ನೀರನ್ನು ಒದಗಿಸಲು ಸರಕಾರಕ್ಕಾದ ವೆಚ್ಚ, ದಾರಣಿವಾಸಿಗಳು, ಈ ಅಂಶಗಳನ್ನು ವಿಮರ್ಶಿಸಿ ಬೇಸಾಯಕ್ಕೆ ಒದಗುವ ನೀರಿನ ಬೆಲೆಯನ್ನು ನಿರ್ಧರಿಸಬೇಕಾಗುವುದು. ಭೂಕಂದಾಯದೊಡನೆ ಇದನ್ನು ಸೇರಿಸುವುದರಿಂದ ನೀರಿನ ದರವನ್ನು ಕಾಲಾನುಗುಣವಾಗಿ ಹೆಚ್ಚು ಕಡಿಮೆಮಾಡಲು ಸಾಧ್ಯವಾಗುವುದಿಲ್ಲ. ಆದರೆ ೧೯೩೨ರಲ್ಲಿ ಜಾರಿಗೆ ಬಂದ ನೀರಾವರಿ ಉದ್ಯಮಗಳಿಗೆ ಸಂಬಂಧಪಟ್ಟ ಕಾನೂನಿನಮೇಲೆ, ಅಲ್ಲಿಂದೀಚೆಗೆ ಹೊಸ ನೀರಾವರಿ ಉದ್ಯಮಗಳಿಂದ ಆಬಾದಾಗುವ ಜಮೀನುಗಳಲ್ಲಿ ನೀರಿನ ತೆರ ಮತ್ತು ಭೂಕಂದಾಯವನ್ನು ಬೇರೆಯಾಗಿ ಇಡಬೇಕಾಗಿದೆ. ಮೊದಲು ವಿಧಿಸಿದ ನೀರಾವರಿ ತೆರವನ್ನು ೧೦–೧೫ ವರ್ಷಗಳ ಅವಧಿಯಲ್ಲಿ ಪುನರ್ವಿಮರ್ಶೆ ಮಾಡಬೇಕೆಂಬ ನಿಯಮವಿದೆ. ನೀರಿನ ತೆರವನ್ನು ಭೂಕಂದಾಯದಿಂದ ಬೇರ್ಪಡಿಸುವ ಸುಧಾರಣೆಯನ್ನು ಎಲ್ಲ ಜಮೀನುಗಳಿಗೂ ಅನ್ವಯಿಸುವುದು ಉತ್ತಮ.

ಕಂದಾಯದ ವಸೂಲಿಗಾಗಿ ಸರಕಾರಕ್ಕೆ ಬೇಕಾದಷ್ಟು ಭದ್ರತೆ ಇರುವಂತೆ ಕಾನೂನಿನಲ್ಲಿ ಏರ್ಪಡಿಸಿರುವಂತೆಯೇ ಫಸಲು ಬಾರದೆ ತೊಂದರೆಯಾದಾಗ ರೈತನಿಗೆ ಕಂದಾಯದ ರಿಯಾಯಿತಿ ದೊರೆಯಲು ಬೇಕಾದ ಸೌಲಭ್ಯಗಳನ್ನೂ ಅದರಲ್ಲಿ ಏರ್ಪಡಿಸಿದೆ. ಕೆರೆಯ ಅಚ್ಚುಕಟ್ಟಿನಲ್ಲಿ ಅರ್ಧಭಾಗ ಜಮೀನು ಬೇಸಾಯವಾಗದಿದ್ದರೆ ಅಥವಾ ಬೇಸಾಯವಾಗಿ ರೂಪಾಯಿನಲ್ಲಿ ನಾಲ್ಕಾಣೆ ಭಾಗದಷ್ಟು ಬೆಳೆ ಬಾರದೆ ಹೋದರೆ ಕಂದಾಯ ಮಾಫಿ ಮಾಡಲು ಅವಕಾಶವಿರುತ್ತದೆ. ಆಯಾ ಸಂದರ್ಭಗಳಿಗೆ ತಕ್ಕಂತೆ ಮಾಫಿಯಾಗಬಹುದಾದ ಕಂದಾಯದ ಮಿತಿಯನ್ನು ಗೊತ್ತುಮಾಡಿ ಕಾನೂನಿನಲ್ಲಿ ಸೇರಿಸುವುದರಿಂದ ಇದರ ಸೌಕರ್ಯ ರೈತರಿಗೆ ಕಡ್ಡಾಯವಾಗಿ ದೊರೆಯುವುದೆಂದು ಹೇಳಬಹುದು. ಮದರಾಸು, ಬೊಂಬಾಯಿ ಪಂಜಾಬು ಪ್ರಾಂತಗಳಲ್ಲಿ ಈ ಏರ್ಪಾಡು ಆಚರಣೆಯಲ್ಲಿದೆ.

ಮೊಟ್ಟಮೊದಲು ಭೂಮಿಯನ್ನು ಅಳತೆಮಾಡಿ ಆಯಾ ಡಿಸ್ಟ್ರಿಕ್ಟ್‌ಗಳಲ್ಲಿ ಹಿಂದಿದ್ದ ಸರಾಸರಿ ವಸೂಲಿಯ ಆಧಾರದಮೇಲೆ ಅಲ್ಲಿನ ಕಂದಾಯದ ದರಗಳನ್ನು ನಿರ್ಧರಿಸಿತು. ಇದರಿಂದ ಭೂಕಂದಾಯದ ಹೊರೆಯಲ್ಲಿ ಸಂಸ್ಥಾನದ ಬೇರೆಬೇರೆ ಭಾಗಗಳಲ್ಲಿ ಒಂದು ಬಗೆಯ ಅಸಮತೆ ಕಾಣುವುದು. ೧೮೩೦ಕ್ಕೆ ಹಿಂದೆ ಒಂದು ಶತಮಾನದವರೆಗೆ ಪಾಳೆಯಗಾರರ ದಾಂಧಲೆಗೆ ಸಿಕ್ಕಿದ್ದ ಕೋಲಾರ ಜಿಲ್ಲೆಯಲ್ಲಿ ಕಂದಾಯದ ಹೊರೆ ಹೆಚ್ಚಾಗಲು ಅವಕಾಶವಾಯಿತು. ಸರ್ವೆ ಮತ್ತು ಸೆಟಲ್‌ಮೆಂಟ್ ಮೊದಲು ಜಾರಿಗೆ ಬಂದ ಚಿತ್ರದುರ್ಗ ಜಿಲ್ಲೆಯಲ್ಲಿ ಕಂದಾಯದ ದರಗಳು ಕಡಮೆಯಾದವು. ಪುನರ್ವಿಮರ್ಶೆಯ ಕಾಲದಲ್ಲಿ ಕಂದಾಯದ ದರಗಳನ್ನು ಹೆಚ್ಚಿಸಲು ಕೆಲವು ನಿರ್ಬಂಧಗಳಿರುವುದರಿಂದ ಮೇಲಿನ ತಾರತಮ್ಯಗಳು ಈಗಲೂ ಮುಂದುವರಿದು ಬಂದಿರುತ್ತವೆ.

ಮೈಸೂರು ಸಂಸ್ಥಾನದ ಜಿಲ್ಲೆಗಳಲ್ಲಿ ಉತ್ತ ಎಕರೆ ಒಂದಕ್ಕೆ ಸರಾಸರಿ ಕಂದಾಯದ ಹೊರೆಯನ್ನು ಇಲ್ಲಿ ಕೊಟ್ಟಿರುವ ಪಟ್ಟಿಯಿಂದ ತಿಳಿಯಬಹುದು :—*

* ೧೯೩೬–೩೭ನೇ ಸಾಲಿಗೆ ಸಂಬಂಧಪಟ್ಟ ಅಂಕಿಗಳ ಆಧಾರದಮೇಲೆ ಲೆಕ್ಕಮಾಡಿದೆ.

| | ರೂ. | ಆ. | ಪೈ. | | ರೂ. | ಆ. | ಪೈ. |
|---|---|---|---|---|---|---|---|
| ಕೋಲಾರ | ೨ | ೮ | ೭ | ಬೆಂಗಳೂರು | ೨ | ೦ | ೫ |
| ಹಾಸನ | ೨ | ೭ | ೫ | ಮೈಸೂರು | ೧ | ೧೨ | ೩ |
| ಶಿವಮೊಗ್ಗ | ೨ | ೪ | ೪ | ತುಮಕೂರು | ೧ | ೯ | ೭ |
| ಕಡೂರು | ೨ | ೧ | ೨ | ಚಿತ್ರದುರ್ಗ | ೦ | ೧೨ | ೧೧ |

ನಮ್ಮ ಭೂಕಂದಾಯದಲ್ಲಿ ಉತ್ತಮ ತೆರಿಗೆಗಿರಬೇಕಾದ ಆದರ್ಶ ಲಕ್ಷಣಗಳಲ್ಲಿ ಅನೇಕವಿರುವುವು. ಕಂದಾಯದ ದರ, ವಸೂಲಿಯ ಕಾಲ ಮತ್ತು ಕಂತುಗಳು ರೈತನಿಗೆ ಅನುಕೂಲವಾಗಿರುವಂತೆ ಗೊತ್ತುಮಾಡಲ್ಪಟ್ಟಿವೆ. ವಸೂಲಿಗಾಗಿ ತಗಲುವ ಖರ್ಚು ಮಿತವಾಗಿದೆ. ಮೈಸೂರಿನ ಸರ್ಕಾರದ ರೆವಿನ್ಯೂ ಇಲಾಖೆಯ ಅಧಿಕಾರಿಗಳು ನಿರ್ವಹಿಸುವ ಕೆಲಸಗಳನ್ನು ಗಮನದಲ್ಲಿಟ್ಟು ವಸೂಲಾತಿಗಾಗಿ ಆಗುವ ವೆಚ್ಚವನ್ನು ನಾವು ವಿಮರ್ಶಿಸಬೇಕು. ಭೂಕಂದಾಯಕ್ಕೆ ಸಂಬಂಧಪಟ್ಟ ಕೆಲಸವಲ್ಲದೆ ಅಬ್ಕಾರಿ, ವರಮಾನತೆರಿಗೆ, ಕಾಡು ಖಾತೆ ರೈಲ್ವೆಗೆ ಭೂಮಿಯನ್ನು ಸ್ವಾಧೀನಪಡಿಸುವುದು. ಪಟ್ಟಣಗಳ ಅಭಿವೃದ್ಧಿ, ನ್ಯಾಯಾಂಗದ ಒಂದು ಭಾಗ ಇವೇ ಮೊದಲಾದ ಆಡಳಿತವನ್ನು ರೆವಿನ್ಯೂ ಇಲಾಖೆ ಅಧಿಕಾರಿಗಳು ನಿರ್ವಹಿಸುವರು. ಒಟ್ಟು ಭೂಕಂದಾಯದ ಹುಟ್ಟುವಳಿಯಲ್ಲಿ ಶೇಕಡ ೨೪·೧ರಷ್ಟು ಮೊಬಲಗು ಈ ಇಲಾಖೆಯ ಆಡಳಿತಕ್ಕೆ ವೆಚ್ಚವಾಗುವುದು.

ತೆರಿಗೆಯು ತೆರುವವರ ಶಕ್ತಿಗನುಗುಣವಾಗಿರಬೇಕೆಂಬ ತತ್ವವನ್ನು ಒಂದು ತೆರಿಗೆಯನ್ನು ಪ್ರತ್ಯೇಕವಾಗಿ ತೆಗೆದುಕೊಂಡು ಅದು ಈ ತತ್ವವನ್ನು ಅನುಸರಿಸಿದೆಯೋ ಎಂದು ನೋಡುವುದು ಸರಿಯಲ್ಲವೆಂಬ ವಿಷಯವನ್ನು ಹಿಂದಿನ ಪ್ರಕರಣಗಳಲ್ಲಿ ಹೇಳಿದೆ. ಭೂಕಂದಾಯವನ್ನು ತೆರಿಗೆ ಕೊಡುವವರ ಶಕ್ತಿಗೆ ಸಮನಾಗಿರುವಂತೆ ಮಾಡುವುದು ಸುಲಭವಲ್ಲ. ಇದು ತೆರಿಗೆಯೋ ಅಥವಾ ರೈತನು ಸರಕಾರಕ್ಕೆ ಸಲ್ಲಿಸುವ ಗುತ್ತಿಗೆಯೋ ಎಂಬ ವಿಷಯದಲ್ಲೇ ವಿವಾದವು ಇನ್ನೂ ಇತ್ಯರ್ಥವಾಗಿಲ್ಲ. ವರಮಾನದ ತೆರಿಗೆಯಂತೆ ಒಂದು ಮಿತಿಯನ್ನು ವಿಧಿಸಿ ಅದಕ್ಕೆ ಹೆಚ್ಚಾಗಿ ಆದಾಯ ಪಡೆಯುವ ರೈತರು ಜಮೀನಿನ ಆದಾಯಕ್ಕೆ ತಕ್ಕಂತೆ ಕಂದಾಯ ಸಲ್ಲಿಸಬೇಕೆಂಬ ನಿಯಮ ಸರಕಾರದಿಂದ ಒಪ್ಪಿಗೆ ಪಡೆದರೆ ಭೂಕಂದಾಯದ ಹೊರೆಯನ್ನು ಅಳೆಯುವುದಕ್ಕೆ ಹೆಚ್ಚಿನ ಸಾಧನಗಳು ದೊರೆಯುವುವು. ಒಟ್ಟಿನಲ್ಲಿ ನೋಡಿದರೆ ನಮ್ಮ ನೆರೆಹೊರೆಯ ಇಂಡಿಯಾ ಪ್ರಾಂತಗಳ ಕಂದಾಯದ ಹೊರೆಗಿಂತ ನಮ್ಮ ದೇಶದಲ್ಲಿ ಕಂದಾಯದ ಹೊರೆ ಕಡಿಮೆಯಾಗಿದೆಯೆಂದು ಹೇಳಬಹುದು.

ಎಕರೆ ೧ಕ್ಕೆ ಕಂದಾಯದ ಸರಾಸರಿ ದರ

| | | ರೂ. | ಆ. | ಪೈ. |
|---|---|---|---|---|
| ಮದರಾಸು ಪ್ರಾಂತ (೧೯೩೮–೩೯) | ... | ೧ | ೧೪ | ೭ |
| ಮೈಸೂರು | ... | ೧ | ೮ | ೬ |

ಭೂಕಂದಾಯವನ್ನು ನಿಷ್ಕರ್ಷಿಸುವುದು, ಅದನ್ನು ವಸೂಲು ಮಾಡುವುದು ಇವುಗಳಲ್ಲಿ ರೈತನ ಹಿತವನ್ನು ಆದಷ್ಟು ರಕ್ಷಿಸಲು ಸರಕಾರ ಪ್ರಯತ್ನಪಡುತ್ತದೆ. ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಧಾರಣೆವಾಸಿಗಳ ಏರಿಳಿತಕ್ಕೂ ಭೂಕಂದಾಯ ದಲ್ಲುಂಟಾಗುವ ಬದಲಾವಣೆಗಳಿಗೂ ಇರುವ ಅಂತರವನ್ನು ನೋಡಿದರೆ ಈ ಅಂಶ ಸ್ಪಷ್ಟವಾಗುತ್ತದೆ. ದವಸಧಾನ್ಯಗಳ ಬೆಲೆ ಏರಿ ಅದರಿಂದ ಬಂದ ಲಾಭ ದಲ್ಲಿ ಹೆಚ್ಚಿನ ಭಾಗವನ್ನು ರೈತರು ಅನುಭವಿಸಲು ಅವಕಾಶವಿರುತ್ತದೆ.

ಸಾಗುವಳಿ ಜಮೀನು ಧಾರಣೆವಾಸಿಗಳು ಮತ್ತು ಭೂಕಂದಾಯ ಇವುಗಳಲ್ಲಿನ ಬದಲಾವಣೆ (೧೯೧೩-೧೪ರಲ್ಲಿನ ಸ್ಥಿತಿಯನ್ನು ೧೦೦ ಎಂದು ಭಾವಿಸಿದೆ)

| ವರ್ಷ | | ಸಾಗುವಳಿಯಾದ ಭೂಮಿ ವಿಸ್ತೀರ್ಣ (ಲಕ್ಷ ಎಕರೆಗಳಲ್ಲಿ) | ಶೇಕಡಾ ದಾಮಾಷಾ | ಭೂಕಂದಾಯ ಲಕ್ಷ ರೂ. ಗಳಲ್ಲಿ | ಶೇಕಡಾ ದಾಮಾಷಾ | ಧಾರಣೆವಾಸಿಗಳು ಶೇಕಡ ದಾಮಾಷಾ |
|---|---|---|---|---|---|---|
| ೧೯೧೩-೧೪ | ... | ೬೦·೬೦ | ೧೦೦ | ೯೫·೯೩ | ೧೦೦ | ೧೦೦ |
| ೧೯೧೮-೧೯ | ... | ೫೮·೮೮ | ೯೬ | ೯೦·೦೬ | ೯೫ | ೨೦೪ |
| ೧೯೨೮-೨೯ | ... | ೬೫·೩೦ | ೧೦೬ | ೧೧೨·೩೨ | ೧೧೬ | ೧೫೨ |
| ೧೯೩೮-೩೯ | ... | ೬೨·೪೩ | ೧೦೩ | ೧೧೮·೮೨ | ೧೨೪ | ೧೩೦ |

ಇದುವರೆಗೆ ರೈತವಾರಿ ಹಿಡುವಳಿ ಜಮೀನಿನ ಭೂಕಂದಾಯದ ವಿಷಯವಾಗಿ ಮುಖ್ಯವಾದ ಅಂಶಗಳನ್ನು ಹೇಳಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಕೆಲವು ಹಕ್ಕುದಾರಿ ಹಿಡುವಳಿಗಳುಂಟು. ಈ ಹಿಡುವಳಿ ಜಮೀನುಗಳು ಸುಮಾರು ೧೮೧೦-೧೮೩೦ರಲ್ಲಿ ಹೇರಳವಾಗಿ ಹುಟ್ಟಿ ಬೆಳೆದಂತೆ ಚರಿತ್ರೆಯಿಂದ ತಿಳಿಯಬರುತ್ತದೆ. ಇವುಗಳಲ್ಲಿ ಕೆಲವು ಸರ್ವಮಾನ್ಯ, ಕೆಲವು ಅರ್ಧಮಾನ್ಯ, ಹಲವಾರು ಅಲ್ಪ ಕಂದಾಯ ಕೊಡತಕ್ಕವು. ಹೀಗೆ ಸುಮಾರು ಆರೂವರೆ ಲಕ್ಷ ಎಕರೆಗಳಷ್ಟು ಜಮೀನು ಕಂದಾಯದ ರಿಯಾಯಿತಿಯನ್ನು ಅನುಭವಿಸುತ್ತಿದೆ. ಪ್ರಾರಂಭದಲ್ಲಿ ಕಂದಾಯದ ರಿಯಾಯಿತಿಯನ್ನು ಕೊಟ್ಟ ಉದ್ದೇಶ ಕಾಲಾನುಕ್ರಮದಲ್ಲಿ ಜಮೀನು ಇನಾಮುದಾರರ ಕೈಬಿಟ್ಟುಹೋಗಿ ಅನೇಕವೇಳೆ ಇನಾಮಿನ ಉದ್ದೇಶ ಸಫಲ ವಾದಂತೆ ಕಾಣುವುದಿಲ್ಲ.

ಕಂದಾಯದ ರಿಯಾಯಿತಿ ಮತ್ತು ಹಿಡುವಳಿ ಹಕ್ಕುದಾರಿಯಿಂದ ಎರಡು ಮೂರು ಸಮಸ್ಯೆಗಳು ನಮ್ಮ ಭೂಕಂದಾಯದ ಶಿಸ್ತಿನಲ್ಲಿ ಕಂಡು ಬಂದಿವೆ.

---

ಲಾಭದ ದೃಷ್ಟಿಯಿಂದಲೇ ಬೇಸಾಯ ನಡೆಸುವ ರೈತರಿಗೆ ಸೌಕರ್ಯಗಳನ್ನು ಕೊಡುವುದಕ್ಕೆ ಕಾನೂನಿನಲ್ಲಿ ಅವಕಾಶವಿರುತ್ತದೆ. ಕಾಫಿ, ಏಲಕ್ಕಿ, ಸಿಂಕೋನ ಮತ್ತು ರಬ್ಬರ್ ಬೆಳೆಗಳಿಗೆ ಜಮೀನುಗಳನ್ನು ಅಲ್ಪ ಬೆಲೆಗೆ ಕೊಡುವುದಲ್ಲದೆ ಸರಕಾರ ಹಲವು ಕಂದಾಯದ ರಿಯಾಯಿತಿಗಳನ್ನು ಕೊಟ್ಟು ರೈತನ ಅಭಿವೃದ್ಧಿಗೆ ಸಹಾಯ ಮಾಡಿದೆ. ಇವರಿಂದ ಪ್ರಕೃತಿ ಸೌಲಭ್ಯವನ್ನು ಪಡೆದ ಮಲೆನಾಡು ಅಭಿವೃದ್ಧಿ ಹೊಂದಲು ಸಹಾಯವಾಯಿತೆನ್ನಬಹುದು.

೧. ಇನಾಮುದಾರರು ಮತ್ತು ಜೋಡಿದಾರರುಗಳಿಗೂ ಅವರ ರೈತರಿಗೂ ಗೊತ್ತಾದ ಕರಾರಾಗದೆ ವ್ಯಾಜ್ಯಗಳೂ ತಕರಾರುಗಳೂ ಆಗಿಂದಾಗ ಹುಟ್ಟಿ ಜಮೀನುಗಳು ಪಾಳುಬೀಳುತ್ತಿರುವುದನ್ನು ಮೊದಲನೆಯ ಸಮಸ್ಯೆ ಎನ್ನಬಹುದು.

೨. ಕಂದಾಯದಲ್ಲಿ ಕೊಟ್ಟ ರಿಯಾಯಿತಿಯನ್ನು ಹಕ್ಕುದಾರಿಯಾಗಿ ಭಾವಿಸಿರುವುದರಿಂದ ಈ ರೀತಿ ಕಂದಾಯದ ಸೋಡಿಯಿಂದ ಸರಕಾರಕ್ಕೆ ಉಂಟಾಗಿರುವ ನಷ್ಟ.

೩. ವಂಶಪಾರಂಪರ್ಯವಾಗಿ ಹಕ್ಕುಗಳನ್ನು ಅನುಭವಿಸುವ ಕದೀಮ್ ರೈತರನ್ನು ಬಿಟ್ಟರೆ ಇನಾಮು ಜಮೀನುಗಳ ವ್ಯವಸಾಯಾಭಿವೃದ್ಧಿಯಲ್ಲಿ ಇತರ ರೈತರಿಗೆ ನಿಜವಾದ ಉತ್ಸಾಹವಿಲ್ಲದಿರುವುದು ಮತ್ತು ಇದರಿಂದ ಜಮೀನುಗಳ ಬೇಸಾಯ ಹದಗೆಟ್ಟಿರುವುದು ಮೂರನೆ ಸಮಸ್ಯೆ.

ಈ ಕಾರಣಗಳಿಂದ ಇನಾಮು ಜಮೀನುದಾರನ ಹಿಡಿತಕ್ಕೆ ಸಿಕ್ಕಿದ ರೈತನ ಸ್ಥಿತಿ ಕೆಟ್ಟಿರುವುದಲ್ಲದೆ ಫಲವತ್ತಾದ ಪ್ರದೇಶಗಳೂ ಕೂಡ ಬಂಜರಾಗಿ ನಿಂತು ವ್ಯವಸಾಯ ಸರಿಯಾಗಿ ನಡೆಯದೇ ಇರಲು ಅವಕಾಶವಾಗಿರುತ್ತದೆ. ಈ ವಿಷಯಗಳನ್ನು ವಿಮರ್ಶಿಸಿ ಸಲಹೆಕೊಡಲು ಸರಕಾರ ಆಗಾಗ ಸಮಿತಿಗಳನ್ನು ಏರ್ಪಡಿಸಿ ಆ ಸಮಿತಿಗಳ ಸಲಹೆಗಳಲ್ಲಿ ಕೆಲವನ್ನು ಜಾರಿಗೆ ತಂದು, ರೈತರ ಪರಿಸ್ಥಿತಿಯನ್ನು ಉತ್ತಮಪಡಿಸುವ ಪ್ರಯತ್ನ ಮಾಡಿರುತ್ತದೆ.

ಸರಕಾರದ ಭೂಕಂದಾಯದ ರೂಪದಲ್ಲಿನ ಆದಾಯದ ದೃಷ್ಟಿಯಿಂದ ನೋಡಿದರೆ ಸುಮಾರು ಹನ್ನೊಂದುವರೆ ಲಕ್ಷ ರೂಪಾಯಿಗಳಷ್ಟು ಕಂದಾಯ ಬರುವ ಜಮೀನುಗಳನ್ನು ಆರೂವರೆ ಲಕ್ಷ ರೂಪಾಯಿಗಳ ಗುತ್ತಿಗೆಕೊಡುವ ರಿಯಾಯಿತಿ ಸಾಗುವಳಿಗಾಗಿ ಕೊಟ್ಟಿರುತ್ತದೆ.* ಕಂದಾಯದ ದರಗಳನ್ನು ಹೆಚ್ಚಿಸಿರುವ ಅಂಶವನ್ನು ಲೆಕ್ಕಹಾಕಿ ನೋಡಿದರೆ ಸರಕಾರಕ್ಕೆ ಎಂಟು ಲಕ್ಷ ರೂಪಾಯಿಗಳ ವರಮಾನ ಹೋದಂತೆ ಆಗುತ್ತದೆ. ಇನಾಮತಿಗಳ ಉದ್ದೇಶವೂ ಫಲಿಸದೆ ಇರುವುದರಿಂದ ಸರಕಾರಕ್ಕುಂಟಾದ ನಷ್ಟಕ್ಕೆ ಯಾವ ಪ್ರತಿಫಲವೂ ದೊರೆಯುತ್ತಿಲ್ಲವೆಂದೇ ಹೇಳಬಹುದು. ಇನಾಮತಿ ಮತ್ತು ಇತರ ವಿಧದ ಕಂದಾಯದ ರಿಯಾಯಿತಿ ಹಕ್ಕುಗಳು ಈಗ ಅನುಭವಿಸುತ್ತಿರುವವರ ಜೀವಮಾನ ಪರ್ಯಂತ ಮಾತ್ರ ಇರಬೇಕೆಂದು ನಿರ್ಣಯಮಾಡಿ ಈ ಹಕ್ಕುದಾರಿ ಭೂಸ್ವಾಮ್ಯವನ್ನು ವಜಾ ಮಾಡುವುದರಿಂದ ಸರಕಾರಕ್ಕೆ ಹೆಚ್ಚಿನ ಅನುಕೂಲವೆಂದು ಆಗಾಗ ಕೆಲವರು ಸಲಹೆಗಳನ್ನು ಮಾಡಿರುತ್ತಾರೆ. ಆಸ್ತಿಪಾಸ್ತಿ ಹಕ್ಕುಬಾಧ್ಯತೆಗೆ ಸಂಬಂಧಿಸಿದ ಕಾನೂನನ್ನು ಹೀಗೆ ಮಾರ್ಪಾಡುಮಾಡುವುದು ಸುಲಭವಲ್ಲವೆಂಬ ಅಂಶವನ್ನು ನಾವು ಮರೆಯಬಾರದು. ಇದರಿಂದ ಸರಕಾರಕ್ಕೆ ಉಳಿದಿರುವುದೊಂದೇ ಮಾರ್ಗವೆನ್ನಬಹುದು.

---

* ೧, ೧೯೦೧ರಲ್ಲಿ ವರದಿಮಾಡಿದ ಇನಾಮು ಕಮಿಷನ'ರವರ ವರದಿ, ಪುಟ ೧೨–೧೩.

ಇನಾಮತಿಗಳು ಮಾರಾಟಕ್ಕೆ ಬಂದಾಗ, ಸರಕಾರದವರು ಆ ಜಮೀನುಗಳನ್ನು ಕೊಂಡು ರೈತಾಪಿ ಜನಗಳಿಗೆ ಸಾಧಾರಣ ಷರತ್ತುಗಳ ಮೇಲೆ ಸಾಗುವಳಿಗಾಗಿ ಕೊಡುವುದರಿಂದ ಕಾಲಾನುಕ್ರಮದಲ್ಲಿ ಮೇಲೆ ಸೂಚಿಸಿದ ಸಮಸ್ಯೆಗಳನ್ನು ಪರಿಹರಿಸ ಬಹುದು. ಮಾರಾಟ ಮಾಡದಿರುವ ಇನಾಮುದಾರರು ಉತ್ತಮತರದ ಬೇಸಾಯ ವನ್ನು ತಮ್ಮ ಜಮೀನುಗಳಲ್ಲಿ ಅನುಸರಿಸುವಂತೆ ಒತ್ತಾಯಪಡಿಸಲು ಇದರಿಂದ ಸಾಧ್ಯವಾಗಬಹುದು.

## ೨. ಅಬ್ಕಾರಿ

ಈ ಬಾಬಿನ ಹುಟ್ಟುವಳಿ ಕೆಲವು ವರ್ಷಗಳಿಂದೀಚೆಗೆ ಕಡಮೆಯಾಗಿದೆ. ಇದು ೧೯೧೦–೧೧ರಲ್ಲಿ ೪೨ಲಕ್ಷ ರೂಪಾಯಿಗಳಿದ್ದದ್ದು ೧೯೨೦–೨೧ಕ್ಕೆ ಸುಮಾರು ೭೭ ಲಕ್ಷ ರೂಪಾಯಿಗಳಷ್ಟಾಯಿತು. ೧೯೩೦-೩೧ರಲ್ಲಿ ೬೬·೫ ಲಕ್ಷಕ್ಕಿಳಿದು ೧೯೪೦–೪೧ರಲ್ಲಿ ೫೩ ಲಕ್ಷ ರೂಪಾಯಿಗಳಷ್ಟಾಯಿತು. ಅಬ್ಕಾರಿ ತೆರಿಗೆಗಳ ಉದ್ದೇಶ ಎರಡು. ಸರಕಾರಕ್ಕೆ ಹಣ ಕೂಡಿಸುವುದು ಮತ್ತು ಮಾದಕ ದ್ರವ್ಯಗಳ ಸೇವನೆಯನ್ನು ಹತೋಟಿಯಲ್ಲಿಡುವುದು. ಸ್ವದೇಶಿ ಮಾದಕದ್ರವ್ಯಗಳಾದ ಸೇಂದಿ, ಸಾರಾಯಿ, ಗಾಂಜ ಮತ್ತು ಅಫೀಮು ಇವುಗಳು ಮತ್ತು ವಿದೇಶ ಮಾದಕ ದ್ರವ್ಯ ಗಳೂ ಬೇರೆ ಬೇರೆ ರೀತಿಯಲ್ಲಿ ಸುಂಕವನ್ನು ತೆರಬೇಕು. ಇವುಗಳ ತಯಾರಿಕೆ ಮತ್ತು ಮಾರಾಟ ಸರಕಾರದ ಹತೋಟಿಯಲ್ಲಿದೆ.

ಸೇಂದಿ, ಸಾರಾಯಿ, ಗಾಂಜ ಮತ್ತು ಅಫೀಮುಗಳನ್ನು ಚಿಲ್ಲರೆಯಾಗಿ ಬಿಕರಿಮಾಡುವ ಹಕ್ಕನ್ನು ಸರಕಾರ ಹರಾಜುಮಾಡುತ್ತದೆ. ಹರಾಜಿನಲ್ಲಿ ಹಕ್ಕು ಪಡೆದವರು ಗಿಡಗಳಿಂದ ಸೇಂದಿ ಇಳಿಸಬಹುದು ಸಾರಾಯಿ ತಯಾರಿಕೆ ೧೯೩೪ರ ವರೆಗೂ ಸರಕಾರದ ಮೇಲ್ವಿಚಾರಣೆಯಲ್ಲಿ ಅದನ್ನು ತಯಾರುಮಾಡುವ ಹಕ್ಕನ್ನು ಪಡೆದ ಖಾಸಗಿ ಜನರ ವಶದಲ್ಲಿತ್ತು. ಈಚೆಗೆ ಈ ಹಕ್ಕನ್ನು ಮೈಸೂರು ಸಕ್ಕರೆ ಕಾರ್ಖಾನೆಯವರಿಗೆ ಕೆಲವು ಷರತ್ತುಗಳಿಗೊಳಪಡಿಸಿ ವಹಿಸಿದೆ. ಗಾಂಜಾ ವನ್ನು ಗೋರೀಬಿದನೂರಿನಲ್ಲಿ ಸರಕಾರದಿಂದ ಅನುಮತಿ ಪಡೆದ ರೈತರು ಬೆಳೆಯು ತ್ತಾರೆ. ಅದನ್ನು ಸರಕಾರದವರೇ ಕೊಂಡು ಲೈಸೆನ್ಸ್ ಪಡೆದ ವರ್ತಕರಿಗೆ ಬಿಕರಿಗೆ ಕೊಡುತ್ತಾರೆ. ಇದರಂತೆಯೇ ಅಫೀಮನ್ನು ಮದರಾಸು ಪ್ರಾಂತ ಸರಕಾರದಿಂದ ಕೊಂಡು ಮಾರಾಟ ಮಾಡುತ್ತಾರೆ. ಮಾದಕದ್ರವ್ಯಗಳನ್ನು ಮಾರುವ ಸ್ಥಳ, ಸಮಯ, ಅಳತೆ, ಕಾಲ ಇವೆಲ್ಲವನ್ನೂ ಸರಕಾರ ಗೊತ್ತುಮಾಡು ತ್ತದೆ. ಈ ವಿಧದ ನಿರ್ಬಂಧಗಳಲ್ಲದೆ ಮದ್ಯಪಾನದಿಂದುಂಟಾಗುವ ಕೆಟ್ಟ ಪರಿ ಣಾಮಗಳ ವಿಷಯದಲ್ಲಿ ಉಪನ್ಯಾಸ ಮತ್ತು ಪ್ರದರ್ಶನಗಳ ಮೂಲಕ ಜನರಿಗೆ ತಿಳಿವಳಿಕೆ ಉಂಟುಮಾಡುವುದರಲ್ಲಿ ಸರಕಾರಕ್ಕೆ ಶ್ರದ್ಧೆಯುಂಟು. ಪಾನನಿರೋಧ ಕಾರ್ಯ ಮತ್ತು ಮಾದಕದ್ರವ್ಯದ ಮಾರಾಟದ ಹತೋಟಿ ಈ ಎರಡು ವಿಧದಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಕುಂದು ಬರದಂತೆ ಮೈಸೂರಿನ ಪಾನನಿರೋಧಕಾರ್ಯಕ್ರಮ ನಡೆದುಬರುತ್ತಿದೆ. ಎಷ್ಟರಮಟ್ಟಿಗೆ ಈ ಉದ್ದೇಶ ಫಲಿಸಿದೆ ಎಂಬುದರ ಮೊದಲ

ನಿದರ್ಶನವೆಂದರೆ ಕಾಲಕ್ರಮೇಣ ಆಬ್ಕಾರಿ ಬಾಬಿನಿಂದ ಸರಕಾರಕ್ಕೆ ಬರುತ್ತಿದ್ದ ಹುಟ್ಟುವಳಿ ಇಳಿಯುತ್ತಿರುವುದು ಎಂದು ಹೇಳಬಹುದು. ೧೯೨೦-೨೧ರಲ್ಲಿ ಈ ಬಾಬಿನ ಹುಟ್ಟುವಳಿಯಲ್ಲಿ ಸುಮಾರು ಮೂರರಲ್ಲಿ ಎರಡು ಭಾಗದಷ್ಟು ಮಾತ್ರ ಈಗ ಸರಕಾರದ ಬೊಕ್ಕಸಕ್ಕೆ ಸಲ್ಲುತ್ತಿದೆ. ಕೆಳಗೆ ಸೂಚಿಸಿರುವ ಅಂಕಿ ಅಂಶಗಳು ಸರಕಾರ ಅನುಸರಿಸಿರುವ ಆಬ್ಕಾರಿ ಖಾತೆಯ ರೀತಿಯನ್ನು ಮತ್ತಷ್ಟು ಸ್ಪಷ್ಟ ಪಡಿಸುತ್ತದೆ.

### ೧. ಮಾದಕ ದ್ರವ್ಯಗಳನ್ನು ಮಾರುವ ಅಂಗಡಿಗಳ ಸಂಖ್ಯೆ ಮತ್ತು ಸೇವನೆ ವಿವರ (ಮೊತ್ತ).

| ವರ್ಷ | ಸಾರಾಯಿ ಅಂಗಡಿಗಳು | ಸಾರಾಯಿ ಸೇವನೆ (ಗ್ಯಾಲನ್‌ಗಳು) | ಟಾಡಿ ಅಂಗಡಿಗಳು | ಟಾಡಿ ಸೇವನೆ (ಗಿಡಗಳು) |
|---|---|---|---|---|
| ೧೯೨೦-೨೧ | ... ೬೧೫ | ೩,೫೨,೪೦೬ | ೨,೬೪೫ | ೪,೫೬,೬೨೭ |
| ೧೯೩೦-೩೧ | ... ೫೪೬ | ೨,೨೧,೨೮೦ | ೨,೪೨೮ | ೨,೬೭,೪೯೮ |
| ೧೯೩೯-೪೦ | ... ೫೩೬ | ೧,೨೯,೫೫೧ | ೨,೨೭೫ | ೨,೨೧,೭೬೫ |

| ವರ್ಷ | ಗಾಂಜ ಅಂಗಡಿಗಳು | ಗಾಂಜ ಸೇವನೆ (ಸೇರು) | ಅಫೀಮು ಅಂಗಡಿಗಳು | ಅಫೀಮು ಸೇವನೆ (ಸೇರು) |
|---|---|---|---|---|
| ೧೯೨೦-೨೧ | ... ೨೫೪ | ೧೪,೫೭೩ | ೯೯ | ೧,೫೫೯ |
| ೧೯೩೦-೩೧ | ... ೨೪೭ | ೮,೮೪೭ | ೯೦ | ೧,೨೧೮ |
| ೧೯೩೯-೪೦ | ... ೨೬೧ | ೮,೧೩೯ | ೮೭ | ೬೨೮ |

### ೨. ಮಾದಕ ದ್ರವ್ಯಗಳ ಸೇವನೆ (ತಲೆ ೧ಕ್ಕೆ)

| ವರ್ಷ | ಸಾರಾಯಿ (ಡ್ರಾಮ್) | ಸೇಂದಿ (ಸೇರು) | ಗಾಂಜ ಮತ್ತು ಅಫೀಮು (ತೊಲ) |
|---|---|---|---|
| ೧೯೨೦-೨೧ | ... ೩.೨ | ೮.೭ | ೦.೨೨ |
| ೧೯೩೧-೩೧ | ... ೧.೯ | ೫.೯ | ೦.೧೩ |
| ೧೯೩೯-೪೦ | ... ೩.೫ ಗ್ಯಾಲನ್ (೧೦೦ ಜನರಿಗೆ) | ... | ೦.೧೩ |

ಕಳೆದ ಇಪ್ಪತ್ತು ವರ್ಷಗಳಲ್ಲಿ ಒಟ್ಟಿನಲ್ಲಿ ನೋಡಿದರೆ ಸಾರಾಯಿ ಸೇವನೆ ಸೇಕಡ ೬೩ ಭಾಗದಷ್ಟೂ, ಸೇಂದಿಯ ಸೇವನೆ ಸುಮಾರು ಅರ್ಧದಷ್ಟು ಕಡಮೆ ಯಾಗಿರುತ್ತದೆ.

ಕಾರ್ಖಾನೆಯಲ್ಲಿ ಕೆಲಸ ಮಾಡುವ ಕೂಲಿಗಳು ವಾಸಿಸುವ ಬೆಂಗಳೂರು, ಮೈಸೂರು, ಕೋಲಾರದ ಗಣಿಪ್ರದೇಶ, ಭದ್ರಾವತಿ ಇವೇ ಮೊದಲಾದ ಸ್ಥಳಗಳಲ್ಲಿ ಸಾರಾಯಿ ಸೇವನೆ ಹೆಚ್ಚು. ಶ್ರಮಜೀವಿಗಳ ತಿಳಿವಳಿಕೆ ಉತ್ತಮಗೊಂಡು, ಪಟ್ಟಣಗಳಲ್ಲಿರುವ ಇತರ ಬಗೆಯ ಜನಪ್ರಿಯವಾದ ಮನರಂಜನ ಸೌಕರ್ಯಗಳು ಬೆಳೆಯುತ್ತ ಬಂದಹಾಗೆ ಈ ಮಾದಕ ದ್ರವ್ಯಸೇವನೆ ಕಡಿಮೆಯಾಗುವಂತೆ ತೋರುತ್ತದೆ. ಸೇಂದಿ ಉಪಯೋಗಿಸುವವರು ಬಲುಮಟ್ಟಿಗೆ ಗ್ರಾಮವಾಸಿಗಳು. ಗಾಂಜ ಮತ್ತು ಅಫೀಮುಗಳ ಮಾರಾಟದ ಬೆಲೆ ಏರುತ್ತ ಬಂದಹಾಗೆ ಅದರ ಸೇವನೆ ತಗ್ಗುತ್ತಿದೆ. ಆದರೆ ವಿದೇಶಿ ನಡವಳಿಕೆಯ ಅನುಕರಣೆಯು ನಮ್ಮಲ್ಲಿ ಬೆಳೆಯುತ್ತ ಬಂದು, ಸಮಾಜದ ಧಾರ್ಮಿಕ ಕಟ್ಟು ಸಡಲಿದ ಹಾಗೆಲ್ಲಾ ವಿದೇಶಿ ಮಾದಕ ಪದಾರ್ಥಗಳ ಸೇವನೆ ಹೆಚ್ಚಿರುತ್ತದೆ.

ವಿದೇಶಿ ಮಾದಕ ದ್ರವ್ಯಗಳ ಸೇವನೆ.

| ವರ್ಷ | | ಅಂಗಡಿಗಳು | ಸೇವನೆ (ಗ್ಯಾಲನ್‌ಗಳು) |
|---|---|---|---|
| ೧೯೨೦–೨೧ | .... | ೭೬ | ೨೦,೫೩೭ |
| ೧೯೩೦–೩೧ | .... | ೭೪ | ೩೨,೭೭೬ |
| ೧೯೩೯–೪೦ | .... | ೭೮ | ೩೧,೦೧೩ |

ಮೈಸೂರು ಸರಕಾರದ ಅಬ್ಕಾರಿ ನೀತಿಯನ್ನು ಇನ್ನು ಸ್ಥೂಲವಾಗಿ ವಿಮರ್ಶಿಸೋಣ. [1] ಮಾದಕ ದ್ರವ್ಯಗಳ ಬೆಲೆಯನ್ನು ಹೆಚ್ಚಿಸಿ, ಇವುಗಳ ಸೇವನೆಯನ್ನು ತಗ್ಗಿಸುವ ನೀತಿಯನ್ನು ಅಬ್ಕಾರಿ ಇಲಾಖೆ ಅನುಸರಿಸುತ್ತ ಬಂದಿದೆ. ಸರಕಾರ ಹೇರುವ ಸುಂಕ, ಮಾರಾಟದ ಹಕ್ಕನ್ನು ಹರಾಜಿನಲ್ಲಿ ಕೊಳ್ಳಲು ತೆರುವ ಹಣ, ಇವೆರಡನ್ನೂ ಅವಲಂಬಿಸಿ ಮಾದಕ ದ್ರವ್ಯಗಳ ಬೆಲೆಯಲ್ಲಿ ಏರಿಳಿತಗಳಾಗಬೇಕು[2]; ಈ ಮಾರಾಟದ ಹಕ್ಕನ್ನು ಹರಾಜು ಮಾಡುವುದರಿಂದ ಬರುವ ಹಣವನ್ನು ನಿರ್ಧರಿಸುವುದು ಸಾಧ್ಯವಲ್ಲ ಆ ವರ್ಷದಲ್ಲಿನ ಮಳೆ ಬೆಳೆ, ಆ ಸ್ಥಳದಲ್ಲಿನ ಪೈಪೋಟಿ ಸ್ಥಿತಿ ಮೊದಲಾದ ಹಿಡಿತಕ್ಕೆ ಸಿಕ್ಕದಿರುವ ಅಂಶಗಳಿಂದ ಇದರ ಬೆಲೆ ನಿರ್ಧರಿಸಲ್ಪಡುವುದು. ಮದ್ಯಪಾನದ ಸೇವನೆಯನ್ನು ಹತೋಟಿಯಲ್ಲಿಡಲು ಇರುವ ಮತ್ತೊಂದು ಸಾಧನ, ಸರಕಾರ ಹೇರುವ ತೆರಿಗೆ ಅಥವಾ ಅಬ್ಕಾರಿ ಸುಂಕ ಇದನ್ನು ಬಹಳವಾಗಿ ಹೆಚ್ಚಿಸಿದರೆ ಕಳ್ಳತನದಲ್ಲಿ ಮದ್ಯದ ತಯಾರಿಕೆಗೆ ಉತ್ತೇಜನ ದೊರೆಯುವುದು. ಹೀಗಾಗದಂತೆಯೂ, ಮದ್ಯದ ಸೇವನೆ ತಗ್ಗುವಂತೆಯೂ ಇರುವ ಪ್ರಮಾಣದಲ್ಲಿ ಅಬ್ಕಾರಿ ಸುಂಕವನ್ನು ವಿಧಿಸಬೇಕು. ಶೇಂದಿ ಇಲಾಖೆಯ ಹುಟ್ಟುವಳಿಯಲ್ಲಿ ಹೆಚ್ಚಿನ ಭಾಗ ಈ ಸುಂಕದ ರೂಪದಲ್ಲಿ ಸರಕಾರಕ್ಕೆ ಒದಗುವುದು ಉತ್ತಮ. ಮಾರಾಟದ ಹಕ್ಕನ್ನು ಹರಾಜು ಮಾಡಿ ಶೇಖರಿಸುವ ರೀತಿಯನ್ನು ಅನುಸರಿಸುವುದರಿಂದ ಮದ್ಯದ

---

[1] ೧೯೪೭ರಿಂದೀಚೆಗೆ ಪಾನನಿರೋಧ ನೀತಿಯನ್ನು ಎಲ್ಲ ಸರಕಾರಗಳೂ ಅನುಸರಿಸಿರುವುದರಿಂದ, ಈ ಬಾಬಿನ ಆದಾಯ ಇನ್ನುಮುಂದೆ ದೊರೆಯಲು ಅವಕಾಶವಿರುವುದಿಲ್ಲ.

[2] ಈ ಬಾಬುಗಳೇ ಸರಕಾರದ ಖಜಾನೆಗೆ ಹಣವನ್ನು ತರುವುವು.

ಸೇವನೆಗೆ ಉತ್ತೇಜನ ದೊರೆಯುವ ಸಂಭವವುಂಟು. ಆದುದರಿಂದ ಸಾಧ್ಯವಾದ ಕಡೆಯಲ್ಲಿ ಮಾರಾಟಕ್ಕಿಡುವ ಶೇಂದಿಗೆ ಪರಮಾವಧಿ ಅಥವಾ ಒಂದು ಮಿತಿಯನ್ನು ಗೊತ್ತುಮಾಡಿ, ಅದಕ್ಕಿಂತ ಹೆಚ್ಚು ಮಾರಾಟವಾದರೆ ಸರಕಾರಕ್ಕೆ ಕಡವಾದ ಸುಂಕ ಕೊಡಬೇಕೆಂದು ವಿಧಿಸುವುದರಿಂದ ಮದ್ಯಪಾನನಿರೋಧಕ್ರಮಕ್ಕೆ ಹೆಚ್ಚಿನ ಸಹಾಯ ದೊರೆಯಬಹುದು.

ಬಹುಕಾಲದಿಂದ ಸರಕಾರದ ಹುಟ್ಟುವಳಿಯಲ್ಲಿ ಪ್ರಾಶಸ್ತ್ಯಪಡೆದ ಶೇಂದಿ ಬಾಬಿನ ವರಮಾನವನ್ನು ಪೂರ್ತಿಯಾಗಿ ತೊಡೆದುಹಾಕಿ ಮದ್ಯಪಾನವನ್ನು ನಿರ್ಮೂಲ ಮಾಡುವುದು ಸುಲಭಸಾಧ್ಯವಾಗಲಾರದು. ಸರಕಾರದ ಹಣಕಾಸಿನ ದೃಷ್ಟಿಯಿಂದಲೂ ವ್ಯವಹಾರದ ದೃಷ್ಟಿಯಿಂದಲೂ ಇದು ಸಾಧ್ಯವಲ್ಲವೆನ್ನಬಹುದು. ವರ್ಷವರ್ಷಕ್ಕೆ ಈ ಬಾಬಿನಿಂದ ಸರಕಾರ ನಿರೀಕ್ಷಿಸುವ ವರಮಾನದ ಮಿತಿಯನ್ನು ತಗ್ಗಿಸುತ್ತ ಅದಕ್ಕೆ ತಕ್ಕಂತೆ ಮದ್ಯಪಾನ ನಿರೋಧಕ್ರಮವನ್ನು ಕೈಕೊಂಡು, ಒಂದು ಗೊತ್ತಾದ ಅವಧಿಯಲ್ಲಿ ಮದ್ಯಪಾನವನ್ನು ತೊಡೆದುಹಾಕುವ ಕ್ರಮವನ್ನು ಅಂಗೀಕರಿಸುವುದು ಸಾಧುವಾದ ಮಾರ್ಗ. ಸ್ವೀಡನ್ ದೇಶದಲ್ಲಿ ಈ ಬಾಬಿನ ಹುಟ್ಟುವಳಿಯಲ್ಲಿ ಒಂದು ಗೊತ್ತಾದ ಭಾಗವನ್ನು ಮಾತ್ರ ಸರಕಾರ ವೆಚ್ಚಮಾಡಿ, ನಿಲ್ಲುವ ಹಣವನ್ನು ವಿಶೇಷ ನಿಧಿಗೆ ಸೇರಿಸಬೇಕೆಂಬ ನಿಯಮವುಂಟು. ಇದರಿಂದ ಸೇಂದಿ ಹುಟ್ಟುವಳಿಯನ್ನು ಹೆಚ್ಚಿಸುವುದರಲ್ಲಿ ಸರಕಾರಕ್ಕೆ ಆಸಕ್ತಿ ಕಡಿಮೆಯಾಗುವುದು ಸಹಜ. ಪಾನ ನಿರೋಧ ಕಾರ್ಯಕ್ಕೆ ಇದರಿಂದ ಸಹಾಯವಾಗುವುದು.

## ೩. ವರಮಾನದ ತೆರಿಗೆ

ವರಮಾನದ ತೆರಿಗೆ ನಮ್ಮ ಸಂಸ್ಥಾನದಲ್ಲಿ ೧೯೨೦ರಲ್ಲಿ ಮೊದಲು ಏರ್ಪಾಡಾಯಿತು. ಇದರಿಂದ ಸರಕಾರಕ್ಕೆ ಬರುವ ಹುಟ್ಟುವಳಿ ವರ್ಷವರ್ಷಕ್ಕೆ ಹೆಚ್ಚುತ್ತಿದೆ. ಪ್ರಾರಂಭದಲ್ಲಿ ೭.೪೧ ಲಕ್ಷ ರೂಪಾಯಿಗಳಿದ್ದು ೧೯೪೦–೪೧ರಲ್ಲಿ ೪೫.೧೨ ಲಕ್ಷ ರೂ. ಗಳಿಗೆ ಈ ಬಾಬಿನ ವರಮಾನ ಹೆಚ್ಚಿ ೧೯೪೯–೫೦ ರಲ್ಲಿ ೧೨೨.೭ ಲಕ್ಷಗಳಿಗೆ ಏರಿತು. ೧೯೫೦–೫೧ ರಿಂದ ಈ ತೆರಿಗೆ ಆಡಳಿತವು ಕೇಂದ್ರಸರಕಾರಕ್ಕೆ ಸೇರಿತು. ಆಧುನಿಕ ತೆರಿಗೆಗಳಲ್ಲಿ ಇದು ಜನಪ್ರಿಯವಾದ ಮತ್ತು ಶಾಸ್ತ್ರಸಮ್ಮತವಾದ ತೆರಿಗೆ. ವರಮಾನದ ತೆರಿಗೆ ಬಾಬಿನಲ್ಲಿ ಒಂದು ಮಿತಿಗೆ ಮೀರಿ ಸಂಪಾದನೆಯಾದ ವರಮಾನದ ಮೇಲೆ ಮೇಲ್ತೆರಿಗೆ ಎಂಬ ಹೆಚ್ಚಿನ ವರಮಾನದ ತೆರಿಗೆಯನ್ನು ವಿಧಿಸುತ್ತಾರೆ. ಇವೆರಡು ಬಾಬುಗಳ ವರಮಾನವನ್ನೂ ಒಟ್ಟಿಗೆ ಇಲ್ಲಿ ವಿಮರ್ಶಿಸಿರುತ್ತದೆ.*

ತೆರಿಗೆ ವಿಧಿಸುವ ಕಾನೂನಿನ ಪ್ರಕಾರ ವರಮಾನದ ಬಾಬುಗಳನ್ನು ಸಂಬಳ ಸಾರಿಗೆ, ಬಡ್ಡಿ, ಆಸ್ತಿಪಾಸ್ತಿಗಳಿಂದ ಬರುವ ಬಾಡಿಗೆ, ಗುತ್ತಿಗೆ ಇವೇ ಮೊದಲಾದ ಆದಾಯ, ವ್ಯಾಪಾರ ಮತ್ತು ವೃತ್ತಿ, ಕಸಬು ಇವುಗಳಿಂದ ಬರುವ ಲಾಭ ಮತ್ತು

* ೧೯೫೦-೫೧ ರಿಂದೀಚೆಗೆ ಈ ತೆರಿಗೆ ಆಡಳಿತ ಇಂಡಿಯ ಸರಕಾರಕ್ಕೆ ಸೇರಿರುತ್ತದೆ. ಮೈಸೂರು ಸರಕಾರದ ಆಡಳಿತಕ್ಕೆ ಒಳಪಟ್ಟಿದ್ದಾಗ ಅನುಸರಿಸುತ್ತಿದ್ದ ನಿಯಮಗಳನ್ನು ಇಲ್ಲಿ ಸೂಚಿಸಿರುತ್ತದೆ.

ಆದಾಯ ಎಂದು ಹಲವು ಭಾಗಗಳಾಗಿ ವಿಂಗಡಿಸಿರುತ್ತದೆ. ಈ ಎಲ್ಲ ಬಾಬುಗಳಿಂದ ಒಬ್ಬ ವ್ಯಕ್ತಿಗೆ, ಒಂದು ಸಂಘಕ್ಕೆ ಅಥವಾ ಕಂಪೆನಿಗೆ ಅಥವಾ ಅವಿಭಕ್ತ ಕುಟುಂಬದ ಸದಸ್ಯರಿಗೆ ಸಲ್ಲುವ ಆದಾಯದ ಮೇಲೆ ಈ ತೆರಿಗೆಯನ್ನು ಕೊಡಬೇಕೆಂಬ ನಿಯಮ ವಿರುತ್ತದೆ. ವರಮಾನ ಮೂಲಗಳ ವಿಂಗಡಣೆಯಲ್ಲಿ, ವ್ಯವಸಾಯೋದ್ಯವ ದಿಂದ ಬರುವ ಆದಾಯವನ್ನು ಸ್ಪಷ್ಟವಾಗಿ ವಿನಾಯಿಸಿದೆ. ವರಮಾನ ಸಂಸ್ಥಾನದಲ್ಲಿ ಉತ್ಪತ್ತಿಯಾಗಲಿ, ಅಥವಾ ಹೊರಗಡೆ ಉತ್ಪತ್ತಿಯಾಗಿ ಇಲ್ಲಿ ವಾಸಿಸುವ ಪ್ರಜೆ ಅನುಭವಿಸಲಿ, ಆ ಆದಾಯದ ಮೇಲೆ ಇಲ್ಲಿನ ಸರಕಾರಕ್ಕೆ ಆದಾಯ ತೆರಿಗೆ ಸಲ್ಲಿಸಬೇಕು. ವರಮಾನದ ಉತ್ಪತ್ತಿಸ್ಥಾನ, ತೆರಿಗೆ ಹೊರುವವನ ವಾಸಸ್ಥಳ ಈ ಎರಡು ಅಂಶಗಳೂ ಆದಾಯದ ತೆರಿಗೆ ವಿಧಿಸುವುದರಲ್ಲಿ ಸರಕಾರದ ಕಾನೂನಿನ ದೃಷ್ಟಿಯಿಂದ ಮುಖ್ಯವಾದುವು. ಈ ಎರಡು ತತ್ವಗಳನ್ನು ಗಮನದಲ್ಲಿಟ್ಟು ಇಲ್ಲಿನ ಪ್ರಜೆಗಳು ಅನುಭವಿಸುವ ಆದಾಯ ನಮ್ಮ ಸರಕಾರದ ತೆರಿಗೆ ಕಾನೂನಿಗೆ ಒಳಗಾಗುವಂತೆ ಸಾಕಾದಷ್ಟು ನಿಯಮಗಳು ಏರ್ಪಟ್ಟಿವೆ. ಸಾಮಾನ್ಯವಾಗಿ ತೆರಿಗೆ ವಿಧಿಸುವ ವರ್ಷಕ್ಕೆ ಹಿಂದಿರುವ ವರ್ಷದ ವರಮಾನದ ಮೇಲೆ ಈ ತೆರಿಗೆಯನ್ನು ವಿಧಿಸುವರು.

ಇಂಡಿಯ ಸರಕಾರಕ್ಕೂ ನಮ್ಮ ಸರಕಾರಕ್ಕೂ ಇರುವ ಒಪ್ಪಂದದ ಪ್ರಕಾರ ಇಂಡಿಯ ಪ್ರಾಂತಗಳಲ್ಲಿ ವ್ಯಾಪಾರೋದ್ಯಮಗಳಿಂದ ತೇಲುವ ಆದಾಯದ ಭಾಗದ ಮೇಲೆ ಕೊಡಬೇಕಾದ ತೆರಿಗೆಯನ್ನು ಇಂಡಿಯ ಸರಕಾರ ವಿಧಿಸುತ್ತದೆ. ಮೈಸೂರು ದೇಶದಲ್ಲಿ ವಾಸಮಾಡುವ ವರ್ತಕನು ಮೈಸೂರು ದೇಶಕ್ಕೆ ಹೊರಗಡೆಯ ಪ್ರದೇಶಗಳಲ್ಲಿ ತನಗೆ ಸೇರಿದ ವ್ಯಾಪಾರೋದ್ಯಮಗಳಿಂದ ಬರುವ ಆದಾಯದ ಮೇಲಿನ ತೆರಿಗೆಯನ್ನು ಇಲ್ಲಿನ ಸರಕಾರಕ್ಕೆ ಸಲ್ಲಿಸಬೇಕಾಗಿಲ್ಲ. ಆದರೆ ಸಂಸ್ಥಾನದೊಳಗೆ ನಡೆದ ವ್ಯಾಪಾರದ ಆದಾಯ ಮತ್ತು ಹೊರಗಡೆ ನಡೆದ ವ್ಯಾಪಾರದಿಂದ ಬರುವ ಆದಾಯ ಇವೆರಡನ್ನೂ ಸೇರಿಸಿ ತೆರಿಗೆದರವನ್ನು ಲೆಕ್ಕಾಚಾರಮಾಡಿ ಅದರಂತೆ ಇಲ್ಲಿ ಉತ್ಪತ್ತಿಯಾದ ಆದಾಯದ ಮೇಲೆ ಮಾತ್ರ ತೆರಿಗೆ ವಿಧಿಸಬೇಕೆಂಬ ನಿಯಮವುಂಟು. ಸರಕಾರಗಳು ಮಾಡಿಕೊಳ್ಳುವ ಒಪ್ಪಂದದ ಪ್ರಕಾರ ಆದಾಯದ ತೆರಿಗೆ ವಿಧಿಸುವುದರಲ್ಲಿ ಅನೇಕ ವಿಧದ ರಿಯಾಯಿತಿಗಳನ್ನು ಆಗಿಂದಾಗ ಮಾಡಿಕೊಡಬೇಕಾಗುತ್ತದೆ. ಉದಾಹರಣೆಗಾಗಿ, ಮೈಸೂರಿನಲ್ಲಿ ಇಂಡಿಯ ಸರಕಾರದ ಸಾಲದ ಪತ್ರಗಳಿಂದ ಸಲ್ಲುವ ಬಡ್ಡಿಗೆ ತೆರಿಗೆ ವಿಧಿಸುವುದಿಲ್ಲ. ಇಂಡಿಯಾದಲ್ಲಿ ಮೈಸೂರು ಸರಕಾರದ ಸಾಲದ ಪತ್ರಗಳಿಂದ ಸಲ್ಲುವ ಬಡ್ಡಿಗೆ ತೆರಿಗೆ ವಿಧಿಸುವಂತಿಲ್ಲ. ಹೀಗೆಯೇ ಇಲ್ಲಿ ಕೆಲಸಮಾಡಿ ತಮಗೆ ಬರುವ ಸಂಬಳ ಅಥವಾ ವಿಶ್ರಾಂತಿವೇತನ ಇವುಗಳಿಗೆ ಮೈಸೂರು ಸರಕಾರಕ್ಕೆ ಆದಾಯದ ತೆರಿಗೆ ಸಲ್ಲಿಸಿರುವಾಗ, ಇಂಡಿಯ ದೇಶದ ಇತರ ಪ್ರಾಂತಗಳಲ್ಲಿ ವಾಸಿಸಿದ ಮಾತ್ರದಿಂದಲೇ ಇಂಡಿಯ ಸರಕಾರಕ್ಕೆ ಪುನಃ ತೆರಿಗೆ ಕೊಡಬೇಕಾಗಿಲ್ಲ. ಇಲ್ಲಿ ಕೊಟ್ಟ ತೆರಿಗೆಯನ್ನು ಕಳೆದು ಲೆಕ್ಕಾಚಾರಮಾಡಿ ತೆರಿಗೆ ಸಲ್ಲಿಸಲು ಅವಕಾಶವಿರುತ್ತದೆ. ವ್ಯಾಪಾರ, ವೃತ್ತಿ ಮೊದಲಾದ ಬಾಬುಗಳಿಂದ ಬರುವ ಆದಾಯ ಇಂಡಿಯ

ಮತ್ತು ಮೈಸೂರು ತೆರಿಗೆಗಳೆರಡಕ್ಕೂ ಒಳಪಡುವ ಸಂದರ್ಭದಲ್ಲಿಯೂ ಈ ವಿಧದ ರಿಯಾಯಿತಿಗೆ, ಕಾನೂನಿನಲ್ಲಿ ಅವಕಾಶವಿರುತ್ತದೆ. ದ್ವಿಗುಣವಾಗಿ ಆದಾಯದ ತೆರಿಗೆ ವಿಧಿಸಲ್ಪಡದಂತೆ ಅವಕಾಶ ಕಲ್ಪಿಸುವುದಕ್ಕಾಗಿ ಆಗಾಗ ಈ ತೆರಿಗೆ ನಿಯಮ ಗಳಲ್ಲಿ ಬದಲಾವಣೆಯಾಗುತ್ತದೆ.

ಸ್ಥಳಸಂಸ್ಥೆ, ಸರಕಾರದ ಆಡಳಿತಕ್ಕೆ ಸೇರಿದ ಉದ್ಯಮಗಳು, ಮತ ಮತ್ತು ಧಾರ್ಮಿಕ ಮತ್ತು ವಿದ್ಯಾಭಿವೃದ್ಧಿಗಾಗಿ ದುಡಿಯುವ ಸಂಸ್ಥೆಗಳು ಮತ್ತು ಸಹಕಾರ ಸಂಘಗಳು ತಮಗೆ ಬರುವ ಆದಾಯದ ಮೇಲೆ ತೆರಿಗೆ ಕೊಡಬೇಕಾಗಿಲ್ಲ. ಪ್ರಾವಿಡೆಂಟು ಫಂಡುಗಳ ಬಡ್ಡಿ, ಪ್ರಯಾಣದಭತ್ಯ, ವಿಶ್ರಾಂತಿವೇತನದ ಭಾಗವನ್ನು ಪರಿವರ್ತನಮಾಡಿ ಬಂದ ಹಣ, ಜೀವವಿಮಾ ಹಣ, ಇವೇ ಮೊದಲಾದ ಆದಾಯಗಳನ್ನು, ನಿವ್ವಳ ಆದಾಯವನ್ನು ಲೆಕ್ಕಾಚಾರ ಮಾಡುವಾಗ ಸೇರಿಸಬೇಕಾಗಿಲ್ಲ. ಈ ರೀತಿ ಸಂಪಾದನೆಯಾದ ದ್ರವ್ಯ ನಮಗೆ ನಿಕರವಾಗಿ ಬರುವ ಮಾಸಾಶನ ಅಥವಾ ವರ್ಷಾಶನದಂತೆ ಪರಿಗಣಿಸಲ್ಪಡುವುದಿಲ್ಲ.

ಈ ತೆರಿಗೆ ವಿಧಿಸಲು ಸಂಪಾದನೆ ಮಾಡಲು ಅವಶ್ಯಕವಾಗಿ ಮಾಡಬೇಕಾದ ಕೆಲವು ವೆಚ್ಚಗಳನ್ನು ಕಳೆದು, ನಿಲ್ಲುವ ನಿವ್ವಳ ಆದಾಯವನ್ನು ಲೆಕ್ಕಾಚಾರ ಮಾಡಬೇಕೆಂಬ ತತ್ವಕ್ಕೆ ಪ್ರಾಶಸ್ತ್ಯವುಂಟು. ಇದು ನ್ಯಾಯವೂ ಹೌದು. ತೆರಿಗೆ ತೆರುವ ಆದಾಯವನ್ನು ಗೊತ್ತುಮಾಡುವಾಗ ಕೆಲವು ಬಗೆಯ ಸೋಡಿ ವಜಾವಟ್ಟಗಳಿಗೆ ಅವಕಾಶ ಮಾಡಿರುತ್ತದೆ. ವಿಮೆ, ಪ್ರಾವಿಡೆಂಟ್ ಫಂಡು ಮೊದಲಾದ ರಕ್ಷಣಾ ದ್ರವ್ಯವನ್ನು ಪಡೆಯಲು ಸಂಬಳದಲ್ಲಿ ಆರನೇಒಂದು ಭಾಗಕ್ಕೆ ಮೀರದಂತೆ ಆದಾಯವನ್ನು ವಿಂಗಿಸಬಹುದು. ಆದಾಯದ ತೆರಿಗೆಯಿಂದ ವಿನಾಯಿತಿ ಪಡೆದ ಸರಕಾರದ ಸಾಲಪತ್ರಗಳಿಂದ ಬರುವ ಬಡ್ಡಿ, ಆದಾಯದ ತೆರಿಗೆ ಒಟ್ಟಿನಲ್ಲಿ ಸಂದಾಯವಾಗಿ ಕಂಪೆನಿಯ ಡಿವಿಡೆಂಡು ಮೂಲಕ ಬರುವ ಆದಾಯ ಇವೇ ಮೊದಲಾದ ಮೊಬಲಗುಗಳನ್ನು, ತೆರಿಗೆದರವನ್ನು ನಿರ್ಧರಿಸಲು ಆದಾಯವೆಂದು ಭಾವಿಸಿದರೂ, ಈ ಹಣದಮೇಲೆ ತೆರಿಗೆ ವಿಧಿಸಲಾಗುವುದಿಲ್ಲ. ಒಂದು ವೃತ್ತಿ ಅಥವಾ ಕಸಬಿನಿಂದ ಬರುವ ವರಮಾನದಲ್ಲಿ ವೃತ್ತಿಗಾಗಿಯೇ ವೆಚ್ಚವಾಗುವ ಹಣವನ್ನು ಕಳೆದು ನಿವ್ವಳ ಆದಾಯ ಕಂಡುಹಿಡಿಯಬೇಕೆಂಬ ನಿಯಮವುಂಟು. ಚರಸ್ವತ್ತಿನ ಆದಾಯ ಎಂದರೆ ಮನೆಯಿಂದ ಬರುವ ಬಾಡಿಗೆಗೆ ತೆರಿಗೆ ಹಾಕುವಾಗ ಮನೆಯ ರಿಪೇರಿಗಾಗಿ ಬಾಡಿಗೆಯಲ್ಲಿ ಒಂದು ಭಾಗವನ್ನೂ ಮನೆಯನ್ನು ವಿಮೆಮಾಡಿದ್ದರೆ ಆ ವಿಮಾ ಪ್ರೀಮಿಯಂ ಮೊಬಲಗನ್ನೂ, ಮನೆಯ ಕಂದಾಯವನ್ನೂ ಕಳೆದು ನಿಲ್ಲುವ ಹಣದ ಮೇಲೆ ತೆರಿಗೆ ವಿಧಿಸುವರು. ವ್ಯಾಪಾರ ಕೈಗಾರಿಕೆ ಮೊದಲಾದ ಲಾಭದಾಯಕವಾದ ಉದ್ಯಮಗಳಿಂದ ಬರುವ ಆದಾಯವನ್ನು ನಿರ್ಧರಿಸುವಾಗ ಆ ಉದ್ಯಮಗಳಿಗಾಗಿ ತಗಲುವ ವೆಚ್ಚದಲ್ಲಿ ಒಂದು ಭಾಗವನ್ನು ಕಳೆದು ನಿಲ್ಲುವ ನಿವ್ವಳ ಆದಾಯದ ಮೇಲೆ ತೆರಿಗೆ ಕೊಡಬೇಕು. ಬಾಡಿಗೆ, ರಿಪೇರಿ ಖರ್ಚು, ಸಂಬಳ ಸಾರಿಗೆ, ಉದ್ಯಮಕ್ಕಾಗಿ ತಂದ ಸಾಲಕ್ಕಾಗಿ ಕೊಟ್ಟ ಬಡ್ಡಿ, ವಿಮಾ ಪ್ರೀಮಿಯಂ,

ಕಂದಾಯಗಳು, ಸ್ಥಿರ ಆಸ್ತಿಗಳ ಇಳಿವರಿಗಾಗಿ ಕಳೆಯುವ ಮೊಬಲಗು ಇವುಗಳ ನ್ನೆಲ್ಲಾ ಕಳೆದು ಉಳಿಯುವ ಆದಾಯದ ಮೇಲೆ ತೆರಿಗೆ ದರ ನಿರ್ಧರಿಸಲ್ಪಡು ವುದು.

ತೆರಿಗೆ ವಿಧಿಸುವ ವರ್ಷಕ್ಕೆ ಹಿಂದಿನ ವರ್ಷದಲ್ಲಿ ಸಂಪಾದಿಸಿದ ಆದಾಯವನ್ನು ಲೆಕ್ಕಾಚಾರಮಾಡಿ ವರಮಾನದ ತೆರಿಗೆಯನ್ನು ವಿಧಿಸುವುದು ರೂಢಿಯಲ್ಲಿದೆ. ಹೀಗೆ ಎಣಿಸುವ ವರ್ಷ ಏಪ್ರಿಲ್ ೧ರಿಂದ ಮಾರ್ಚಿ ಕೊನೆಯವರೆಗಿನ ಸರಕಾರೀ ವರ್ಷ ವಾಗಿರಬಹುದು; ಕ್ಯಾಲೆಂಡರ್ ವರ್ಷವಾಗಿರಬಹುದು; ಹಿಂದೂ ಪಂಚಾಂಗದಂತೆ ಯುಗಾದಿಯಿಂದ ಯುಗಾದಿಗಾಗುವ ವರ್ಷವಾಗಿರಬಹುದು; ದೀಪಾವಳಿಯಿಂದ ದೀಪಾವಳಿಗಾಗುವ ಮಾರ್ವಾಡಿ ವರ್ಷವಾಗಿರಬಹುದು. ತೆರಿಗೆದಾರನ ಅನುಕೂ ಲಕ್ಕನುಗುಣವಾಗಿ ಯಾವ ೧೨ ತಿಂಗಳನ್ನಾಗಲಿ ಗೊತ್ತುಮಾಡಿಕೊಳ್ಳಬಹುದು. ಹೀಗೆ ಗೊತ್ತಾದ ವರ್ಷವನ್ನು ಈ ಇಲಾಖೆ ಅಧಿಕಾರಿಗಳ ಸಮ್ಮತಿಯಿಲ್ಲದೆ ಬದಲಾ ಯಿಸಿ ಲೆಕ್ಕಗಳನ್ನು ಕಳುಹಿಸಲು ಅವಕಾಶವಿಲ್ಲ.

ವರ್ಷದ ಪ್ರಾರಂಭದಲ್ಲಿ ವರಮಾನದ ತೆರಿಗೆ ಇಲಾಖೆ ಅಧಿಕಾರಿಗಳು ತೆರಿಗೆ ಕೊಡುವಷ್ಟು ವರಮಾನವಿರುವವರಿಗೆಲ್ಲಾ ಹಿಂದಿನ ವರ್ಷದ ಆದಾಯದ ವಿವರವನ್ನು ತಿಳಿಸಬೇಕೆಂದು ನೋಟೀಸ್ ಕೊಡುವರು. ತೆರಿಗೆದಾರನು ಕೊಟ್ಟ ವಿವರಗಳನ್ನು ವಿಮರ್ಶಿಸಿ ಆದಾಯವನ್ನು ನಿಗದಿಮಾಡಿ, ಅದಕ್ಕೆ ತಕ್ಕ ತೆರಿಗೆಯನ್ನು ಕೊಡಬೇಕೆಂದು ಅವರಿಗೆ ತಿಳಿಸುವರು. ಹೀಗೆ ನೋಟೀಸ್ ತಲುಪಿದ ಮೂವತ್ತು ದಿನಗಳಲ್ಲಿ ಬೇಕಾದ ವಿವರಗಳು ಬಾರದಿದ್ದರೆ ಅಧಿಕಾರವರ್ಗದವರು ತಮ್ಮ ಸ್ವಂತ ತಿಳಿವಳಿಕೆಯಂತೆ ವರಮಾನವನ್ನು ನಿರ್ಧರಿಸಿ ತೆರಿಗೆ ವಿಧಿಸುವರು. ಲೆಕ್ಕಗಳನ್ನು ಇಡದೆ ಇರುವುದ ರಿಂದಲೂ ನಿಯಮಿತ ಕಾಲದಲ್ಲಿ ಆದಾಯದ ವಿವರಗಳನ್ನು ತಿಳಿಸದೆ ಇರುವುದ ರಿಂದಲೂ ತೆರಿಗೆದಾರರು ತಮಗಿರುವ ಕೆಲವು ಹಕ್ಕು ಬಾಧ್ಯತೆಗಳನ್ನು ಕಳೆದು ಕೊಳ್ಳುವರು.

ಸಂಬಳ ಸಾರಿಗೆಗಳ ಮೇಲೆ ಹೇರುವ ತೆರಿಗೆಯನ್ನು ಸಂಬಳದಲ್ಲಿ ಕಟಾ ಯಿಸಿ ಬಟವಾಡೆಮಾಡುವವರೇ ಸರಕಾರಕ್ಕೆ ಸಲ್ಲಿಸಬೇಕೆಂಬ ನಿರ್ಬಂಧವಿರುವುದ ರಿಂದ ಈ ಬಾಬಿನಿಂದ ಸಲ್ಲುವ ಹುಟ್ಟುವಳಿಯ ಭಾಗದಲ್ಲಿ ಹೆಚ್ಚಿನ ಆಕ್ಷೇಪಣೆಗೆ ಅವಕಾಶವಿರುವುದಿಲ್ಲ. ಬಡ್ಡಿ ಮತ್ತು ಡಿವಿಡೆಂಡ್ ಮೂಲಕ ಬರುವ ಆದಾಯದ ಮೇಲೆ ಬೀಳುವ ತೆರಿಗೆ ಬಟವಾಡೆಯಾಗುವುದಕ್ಕೆ ಮೊದಲೇ ಸರಕಾರಕ್ಕೆ ಸಂದಾಯ ವಾಗುವುದು. ಮುಂಗಡವಾಗಿ ತೆತ್ತ ತೆರಿಗೆಯ ದರಕ್ಕೂ ಬಡ್ಡಿ ಮತ್ತು ಡಿವಿಡೆಂಡ್ ಮೂಲಕ ಬಂದ ಆದಾಯವನ್ನು ಸೇರಿಸಿದ ನಿವ್ವಳ ಆದಾಯದ ಮೇಲೆ ಪ್ರಜೆಯು ತೆರಬೇಕಾದ ತೆರಿಗೆಯ ದರಕ್ಕೂ ಇರುವ ಅಂತರವನ್ನು ತೆರಿಗೆದಾರರು ಹಿಂದಕ್ಕೆ ಪಡೆಯಲು ಅವಕಾಶವಿರುತ್ತದೆ. ವರಮಾನದ ತೆರಿಗೆಯಿಂದ ಮೈಸೂರು ಸರಕಾ ರಕ್ಕೆ ಬರುವ ಹುಟ್ಟುವಳಿಯಲ್ಲಿ ಹೆಚ್ಚಿನ ಭಾಗ ವ್ಯಾಪಾರ, ಕೈಗಾರಿಕೆ, ವಾಣಿಜ್ಯ ಇವೇ ಮೊದಲಾದ ಉದ್ಯಮಗಳಲ್ಲಿ ನಿರತರಾಗಿರುವ ಬಂಡವಾಳಗಾರರಿಂದ ಸಂದಾ ಯವಾಗುತ್ತದೆ.

ತತ್ವದ ದೃಷ್ಟಿಯಿಂದ ವರಮಾನದ ತೆರಿಗೆ ವಿಧಿಸುವಾಗ ತೆರಿಗೆದಾರನು ವಿವಾಹಿತನೋ, ಅವಿವಾಹಿತನೋ, ಸಂಸಾರವಂದಿಗನೋ ಅಲ್ಲವೋ, ಅವನ ವರಮಾನ ಸ್ವಂತ ಪರಿಶ್ರಮದ ಫಲವೋ ಅಥವಾ ಆಸ್ತಿಪಾಸ್ತಿಗಳ ಹುಟ್ಟುವಳಿಯೋ ಎಂಬ ಅಂಶಗಳನ್ನು ಗಮನಿಸಿ ತೆರಿಗೆದರಗಳನ್ನು ನಿರ್ಧರಿಸಬೇಕೆಂಬ ವಾದಕ್ಕೆ ಬೆಂಬಲವಿರುತ್ತದೆ. ಅವಿವಾಹಿತನಿಗೆ ತೆರಿಗೆ ಹೊರುವ ಶಕ್ತಿ ಹೆಚ್ಚು. ಸಂಸಾರವಂದಿಗನಿಗೆ ತೆರಿಗೆಯ ಭಾರ ಕಾಣುವಷ್ಟು ಸಂಸಾರದ ತೊಡಕಿಲ್ಲದವನಿಗೆ ಹೇಗೆ ಕಂಡೀತು? ತಾನು ದುಡಿದು ಸಂಪಾದಿಸಿದ ವರಮಾನದಿಂದ ತೆರಿಗೆ ತೆರುವಾಗ ಹುಟ್ಟುವ ಅತೃಪ್ತಿಗೂ ತನಗೆ ಪಿತ್ರಾರ್ಜಿತವಾಗಿ ಬಂದ ಆಸ್ತಿಯಿಂದ ಬರುವ ಆದಾಯದಿಂದ ಕಟಾಯಿಸುವ ತೆರಿಗೆಯಿಂದ ಉಂಟಾಗುವ ಅತೃಪ್ತಿಗೂ ವ್ಯತ್ಯಾಸವಿದ್ದೇ ಇರುವುದು. ಹೀಗಿರುವುದರಿಂದ ಸುವ್ಯವಸ್ಥಿತವಾದ ಆದಾಯ ತೆರಿಗೆ ಕ್ರಮದಲ್ಲಿ ತೆರಿಗೆದಾರರ ಸಂಸಾರಸ್ಥಿತಿಗತಿಗಳಿಗನುಗುಣವಾಗಿ ಕೆಲವು ರಿಯಾಯತಿಗಳನ್ನು ಕೊಡುವುದು ವಾಡಿಕೆಯಲ್ಲಿದೆ. ಆದಾಯದ ಮೂಲವನ್ನರಿತೂ ಕೆಲವು ವ್ಯತ್ಯಾಸಗಳನ್ನು ಮಾಡುವರು. ಕೇವಲ ತತ್ವದೃಷ್ಟಿಯಿಂದ ಈ ಏರ್ಪಾಡು ಅಗತ್ಯವಾದರೂ ವ್ಯವಹಾರದೃಷ್ಟಿಯಿಂದ ನಮ್ಮಲ್ಲಿ ಇದು ಅನಾವಶ್ಯಕವೆಂದು ಹೇಳಬಹುದು. ವರಮಾನದ ತೆರಿಗೆ ಕೊಡುವವರಲ್ಲಿ ಅವಿವಾಹಿತರ ಸಂಖ್ಯೆ ತೀರ ಕಡಿಮೆ. ನಮ್ಮ ಜನತೆಯ ಬಡತನದ ಸ್ಥಿತಿಯಲ್ಲಿ ಆಸ್ತಿಪಾಸ್ತಿಗಳಿಂದ ಬರುವ ಆದಾಯದ ಪ್ರಮಾಣ ಹೆಚ್ಚಾಗಿರುವುದಿಲ್ಲ.

ಈ ಅಂಶಗಳನ್ನು ಗಮನದಲ್ಲಿಟ್ಟು ಸರಕಾರದ ಆದಾಯದ ತೆರಿಗೆ ಬೀಳುವ ವಾರ್ಷಿಕ ಆದಾಯದ ಮಟ್ಟವನ್ನು ೨,೪೦೦ ರೂಪಾಯಿಗಳೆಂದು ನಿರ್ಧರಿಸಿರುತ್ತಾರೆ. ಇದನ್ನು ಇಂಡಿಯದಲ್ಲಿರುವಂತೆ ೨,೦೦೦ ರೂಪಾಯಿಗಳಿಗೆ ಇಳಿಸಬಹುದೆಂದು ಆಗಾಗ ಸೂಚನೆಗಳು ಬಂದಿವೆ. ತೆರಿಗೆಯ ದರವೂ ಬ್ರಿಟಿಷ್ ಇಂಡಿಯ ದರಗಳಿಗಿಂತಲೂ ಕಡಿಮೆಯಾಗಿದೆ. ರೂಪಾಯಿಗೆ ಮೂರು ಕಾಸಿನಿಂದ ಪ್ರಾರಂಭವಾಗಿ ಹೆಚ್ಚಿನ ವರಮಾನಗಳ ಮೇಲೆ ರೂಪಾಯಿಗೆ ಮೂರಾಣೆಯಂತೆ ತೆರಿಗೆ ವಿಧಿಸುವರು. ದರಗಳನ್ನು ಹೆಚ್ಚಿಸಬೇಕೆಂದು ಆಗಾಗ ಸೂಚನೆಗಳು ಬಂದಿವೆ.

ಒಂದು ವರ್ಷದ ವರಮಾನ ೩೦,೦೦೦ ರೂ ಗಳನ್ನು ಮೀರಿದರೆ, ರೂಪಾಯಿಗೆ ಒಂದಾಣೆಯಂತೆ ಮೇಲುತೆರಿಗೆಯನ್ನು ಕೊಡಬೇಕು. ಹಿಂದೂ ಅವಿಭಕ್ತ ಕುಟುಂಬದ ವರ್ಷದ ವರಮಾನ ೭೫,೦೦೦ ರೂಪಾಯಿಗಳನ್ನು ಮೀರಿದರೆ ಮಾತ್ರ ಮೇಲುತೆರಿಗೆ ಕೊಡಬೇಕಾಗುವುದು. ಈ ತೆರಿಗೆಯಿಂದ ಬರುವ ವರಮಾನದಲ್ಲಿ ಹೆಚ್ಚಿನ ಭಾಗ ಎಂದರೆ ಸುಮಾರು ಮುಕ್ಕಾಲು ಭಾಗ ಚಿನ್ನದಗಣಿ ಕಂಪೆನಿಗಳಿಂದ ವಸೂಲಾಗುತ್ತದೆ. ಆದಾಯದ ತೆರಿಗೆ ಮತ್ತು ಮೇಲುತೆರಿಗೆಗಳ ಬೆಳವಣಿಗೆಗೆ ಸಂಬಂಧಪಟ್ಟ ಕೆಲವು ಅಂಕಿಅಂಶಗಳನ್ನು ಇಲ್ಲಿ ಕೊಟ್ಟಿರುವ ಪಟ್ಟಿಗಳಿಂದ ತಿಳಿಯಬಹುದು. ಸಾರ್ವಜನಿಕ ತೆರಿಗೆ ಶಿಸ್ತಿನಲ್ಲಿ ಹೆಚ್ಚಿನ ಪ್ರಾಶಸ್ತ್ಯ ಪಡೆದ ವರಮಾನದ ತೆರಿಗೆಗೆ ನಮ್ಮ ಸರಕಾರದ ಆಯವ್ಯಯದಲ್ಲಿಯೂ ತಕ್ಕ ಸ್ಥಾನ ದೊರೆಯುತ್ತಿದೆ ಎಂಬುದು ಈ ಅಂಶಗಳಿಂದ ಗೊತ್ತಾಗುತ್ತದೆ.

೧

## ಮೈಸೂರು ದೇಶದ ತೆರಿಗೆ ಹುಟುವಳಿ

### ಆದಾಯದ ತೆರಿಗೆ ಮತ್ತು ಮೇಲ್ತೆರಿಗೆ

| ವರ್ಷ | | ಒಟ್ಟು ಹುಟ್ಟುವಳಿ (ಲಕ್ಷ ರೂ.ಗಳು) | ತೆರಿಗೆ ಬಾಬುಗಳಿಂದ ಹುಟ್ಟುವಳಿ (ಲಕ್ಷ ರೂ.ಗಳು) | ವರಮಾನದ ತೆರಿಗೆ (ಲಕ್ಷ ರೂ.ಗಳು) ಮತ್ತು ಮೇಲ್ತೆರಿಗೆ | ಒಟ್ಟು ತೆರಿಗೆ ಹುಟ್ಟುವಳಿಯಲ್ಲಿ ವರಮಾನ ತೆರಿಗೆ ಹುಟ್ಟುವಳಿ ಶೇಕಡ |
|---|---|---|---|---|---|
| ೧೯೨೧ | ... | ೩೧೩ | ೨೧೨ | ೭·೪ | ೩·೫ |
| ೧೯೨೬ | ... | ೩೪೬ | ೨೩೪ | ೨೨·೫ | ೮ ೩ |
| ೧೯೩೧ | ... | ೩೩೭ | ೨೨೧ | ೧೩·೨ | ೬·೨ |
| ೧೯೩೬ | ... | ೩೬೭ | ೨೧೩ | ೨೭·೮ | ೧೩·೧ |
| ೧೯೪೦ | ... | ೩೮೭ | ೨೩೫ | ೩೫·೩ | ೧೫ ೦ |
| ೧೯೪೯ | ... | ೧೨೨೭ | ೮೭೦ | ೧೯೩·೦ | ೨೨·೨ |

[೧೯೫೧ ರಿಂದೀಚೆಗೆ ಈ ತೆರಿಗೆ ಆದಳಿತ ಇಂಡಿಯಾ ಕೇಂದ್ರಸರಕಾರಕ್ಕೆ ಸೇರಿರುತ್ತ]

೨

### ಚಿನ್ನದಗಣಿ ಕಂಪೆನಿಗಳಿಂದ ವಸೂಲಾದ ವರಮಾನದ ತೆರಿಗೆ, ಮೇಲ್ತೆರಿಗೆ ಮತ್ತು ಇತರ ಸಂಸ್ಥೆಗಳು ತೆರುವ ತೆರಿಗೆ ವರಮಾನ ಮತ್ತು ತೆರಿಗೆದಾರರ ಸಂಖ್ಯೆಯನ್ನು ತೋರಿಸುವ ಪಟ್ಟಿ.

| ವರ್ಷ | | ಚಿನ್ನದಗಣಿ ಕಂಪೆನಿಗಳಿಂದ ವರಮಾನದ ತೆರಿಗ (ಲಕ್ಷ ರೂ.ಗಳು) | ಚಿನ್ನದಗಣಿ ಕಂಪೆನಿಗಳಿಂದ ಮೇಲ್ತೆರಿಗೆ (ಲಕ್ಷ ರೂ ಗಳು) | ಇತರ ಸಂಸ್ಥೆಗಳು ತೆರುವ ವರಮಾನ | ತೆರಿಗೆದಾರರ ಸಂಖ್ಯೆ | ತೆರಿಗೆ ವಸೂಲಿ ಒಟ್ಟು ವರಮಾನ (ಲಕ್ಷ ರೂ.ಗಳು) |
|---|---|---|---|---|---|---|
| ೧೯೨೧ | ... | ೨·೧೬ | ... | ... | ೩,೫೬೩ | ... |
| ೧೯೨೬ | ... | ೬·೩೬ | .. | ೧೩೩·೦೭ | ೫,೮೪೪ | ೨೮೬·೭೭ |
| ೧೯೩೧ | ... | ೨·೬೫ | ೨·೮೬ | ೬೬·೨೦ | ೫,೩೮೮ | ೨೬೫·೫೭ |
| ೧೯೩೬ | ... | ೧೦·೪೯ | ೭·೨೨ | ೧೪೦·೬೬ | ೫,೧೩೩ | ೨೨೬·೪೮ |
| ೧೯೪೧ | ... | ೧೮·೫ | ೭·೨೨ | ೧೬೦ ೯೧ | ೫,೧೮೦ | ೩೬೧ ೨೬ |

## ೪. ರಿಜಿಸ್ಟ್ರೇಷನ್ ಮತ್ತು ಕೋರ್ಟು ಫೀ (ವ್ಯವಹಾರದ ತೆರಿಗೆ)

ಕಂದಾಯ ತೆರಿಗೆಗಳಂತೆ ಫೀ ರೂಪದಲ್ಲಿಯೂ ಸರಕಾರಕ್ಕೆ ಹಣ ಸೇರುವುದಷ್ಟೆ. ಮೈಸೂರು ಸರಕಾರಕ್ಕೆ ರಿಜಿಸ್ಟ್ರೇಷನ್ ಮತ್ತು ಕೋರ್ಟು ಫೀ ಬಾಬುಗಳಿಂದ ಬರುವ ವರಮಾನದ ವಿಷಯವನ್ನು ಸ್ವಲ್ಪಮಟ್ಟಿಗೆ ಪರಿಶೀಲಿಸೋಣ ಪ್ರಜೆಗಳ ಆಸ್ತಿಪಾಸ್ತಿಗಳ ಹಕ್ಕುಬಾಧ್ಯತೆಗಳನ್ನು ರಕ್ಷಿಸಿ, ಇವುಗಳ ವಿಕ್ರಯ, ಭೋಗ್ಯ, ಆಧಾರ, ದಾನ ಇವುಗಳಿಗೆ ಸಂಬಂಧಪಟ್ಟ ವ್ಯವಹಾರಗಳು ಪ್ರಜಾ ಸಮುದಾಯಕ್ಕೆ ತಿಳಿಯುವಂತೆ ದಾಖಲೆಗಳಿಡುವ ಕೆಲಸ ಸರಕಾರಕ್ಕೆ ಸೇರಿರಬೇಕು. ಇದಕ್ಕಾಗಿ ಆಸ್ತಿಪಾಸ್ತಿ ಮತ್ತು ಸಾಲಸೋಲಗಳ ವ್ಯವಹಾರಗಳನ್ನು ಕಾಗದ ಪತ್ರಗಳ ಮೂಲಕ ನಡಸಬೇಕೆಂಬ ಮತ್ತು ಆ ಕಾಗದ ಪತ್ರಗಳನ್ನು ರಿಜಿಸ್ಟರ್ ಮಾಡಿಸಬೇಕೆಂಬ ನಿಯಮಗಳನ್ನು ಸರಕಾರ ವಿಧಿಸುವುದು. ಈ ವ್ಯವಹಾರಗಳು ಯೋಗ್ಯವಾದ ದಾಖಲೆಗಳಾಗಿ ಪರಿಣಮಿಸಬೇಕಾದರೆ ಅವುಗಳನ್ನು ನಿಗದಿಯಾದ ಮೊತ್ತವನ್ನು ಕೊಟ್ಟು ಕೊಂಡ ಛಾಪಾಕಾಗದಗಳಲ್ಲಿ ಬರೆಯಬೇಕೆಂಬ ನಿಯಮವುಂಟು. ಪ್ರಜೆಗಳು ತಮ್ಮ ಸ್ವಂತ ಹಕ್ಕುಗಳನ್ನು ಸ್ಥಾಪಿಸಿ ಕಾದಿಡಲು ಸಹಾಯ ಮಾಡುವುದಕ್ಕೆ ಸರಕಾರ ಕೈಕೊಂಡ ಈ ಕಾರ್ಯಕ್ಕೆ ಪರಿಹಾರದ್ರವ್ಯವನ್ನು ಫೀ ಮೂಲಕ ಸಂಗ್ರಹಿಸುವುದು ವಾಡಿಕೆಯಲ್ಲಿದೆ. ರಿಜಿಸ್ಟ್ರೇಷನ್ ದರಗಳನ್ನಾಗಲಿ ಛಾಪಾಕಾಗದಗಳ ಬೆಲೆಯನ್ನಾಗಲಿ ಬಹಳ ಹೆಚ್ಚಿಸಲು ಅವಕಾಶವಿರುವುದಿಲ್ಲ.

ಸಿವಿಲ್ ಕೋರ್ಟುಗಳಲ್ಲಿ ನಡೆಯುವ ವ್ಯವಹಾರಕ್ಕೆ ಕಕ್ಷಿಗಾರರು ಕೋರ್ಟು ಫೀ ಸ್ಟಾಂಪುಗಳ ಮೂಲಕ ಸರಕಾರಕ್ಕೆ ಹಣವನ್ನು ಸಲ್ಲಿಸುವರು. ಸಿವಿಲ್ ನ್ಯಾಯ ಖಾತೆಗಾಗಿ ವೆಚ್ಚವಾಗುವ ಹಣದ ಬಹುಭಾಗ ಹುಟ್ಟುವಳಿಯಾಗುವ ರೀತಿಯಲ್ಲಿ ಕೋರ್ಟು ಫೀ ದರಗಳನ್ನು ನಿರ್ಧರಿಸಬೇಕು. ಸ್ಥೂಲವಾಗಿ ನೋಡಿದರೆ ಈ ತತ್ತ್ವಗಳನ್ನು ಸಾಧಾರಣವಾಗಿ ನಮ್ಮ ಸರಕಾರ ಅನುಸರಿಸಿದಂತೆ ಕಾಣುವುದು. ಮೇಲೆ ಹೇಳಿರುವ ರಿಜಿಸ್ಟ್ರೇಷನ್ ಮತ್ತು ಕೋರ್ಟು ಫೀ ಇವೇ ಮೊದಲಾದ ವ್ಯವಹಾರದ ತೆರಿಗೆ ಬಾಬುಗಳಿಂದ ಮೈಸೂರು ಸರಕಾರದ ಬೊಕ್ಕಸಕ್ಕೆ ಬರುವ ಹುಟ್ಟುವಳಿಯ ಬೆಳವಣಿಗೆಯನ್ನು ಇಲ್ಲಿ ಕಾಣಬಹುದು.

| ವರ್ಷ | | ಸ್ಟ್ಯಾಂಪು ವರಮಾನ (ಲಕ್ಷ ರೂ.ಗಳು) | ಕೋರ್ಟು ಫೀ (ಲಕ್ಷ ರೂ.ಗಳು) | ರಿಜಿಸ್ಟ್ರೇಷನ್ (ಲಕ್ಷ ರೂ.ಗಳು) |
|---|---|---|---|---|
| ೧೯೧೦–೧೧ | ... | ೩·೭೮ | ೩·೯೮ | ೧·೬೧ |
| ೧೯೨೦–೨೧ | ... | ೭·೭೪ | ೭·೮೬ | ೩·೧೦ |
| ೧೯೩೦–೩೧ | ... | ೭·೮೫ | ೧೧·೪೫ | ೨·೯೩ |
| ೧೯೪೦–೪೧ | ... | ೫·೨೮ | ೧೦·೧೪ | ೩·೦೬ |

## ೫. ಚಿಲ್ಲರೆ ತೆರಿಗೆಗಳು

ಸುಮಾರು ಇಪ್ಪತ್ತು ವರುಷಗಳಿಂದೀಚೆಗೆ ಹಲವಾರು ಚಿಲ್ಲರೆ ತೆರಿಗೆಗಳಿಂದ ಮೈಸೂರು ಸರಕಾರಕ್ಕೆ ಹಣ ಒದಗುತ್ತಿದೆ. ೧೯೩೪ರಲ್ಲಿ ಇಂಡಿಯ ಸರಕಾರದವರು ಬೆಂಕಿಕಡ್ಡಿ ಪೆಟ್ಟಿಗೆಯಮೇಲೆ ಸುಂಕ ವಿಧಿಸಿದರು. ದೇಶೀಯ ಸಂಸ್ಥಾನಗಳು ಈ ಸುಂಕವನ್ನು ವಿಧಿಸದೆ, ಬೆಂಕಿಕಡ್ಡಿ ಕಾರ್ಖಾನೆಗಳು ಸಂಸ್ಥಾನಗಳಲ್ಲಿ ಏರ್ಪಟ್ಟು, ಈ ಸುಂಕದ ಉದ್ದೇಶ ವಿಫಲವಾಗುವ ಸಂಭವ ಒದಗಿತು. ಆದುದರಿಂದ ಇಂಡಿಯಾ ಸರಕಾರ ಈ ಸುಂಕವನ್ನು ದೇಶೀಯ ಸಂಸ್ಥಾನಗಳಲ್ಲೂ ವಿಧಿಸಬೇಕೆಂದೂ, ಸುಂಕದಿಂದ ಬಂದ ಹಣ ಕೇಂದ್ರ ಸರಕಾರಕ್ಕೆ ಸೇರಬೇಕೆಂದೂ, ಹಾಗೆ ವಸೂಲಾದ ಹಣವನ್ನು ಆ ಪ್ರದೇಶಗಳ ಜನಸಂಖ್ಯೆಗನುಗುಣವಾಗಿ ಕೇಂದ್ರ ಸರಕಾರ ಸಂಸ್ಥಾನಗಳಿಗೆ ವಾಪಸು ಮಾಡಬೇಕೆಂಬ ನಿಯಮಗಳನ್ನು ವಿಧಿಸಿದರು. ಈ ಏರ್ಪಾಡಿನಿಂದ ಮೈಸೂರು ಸರಕಾರಕ್ಕೆ ಅನುಕೂಲವಾಯಿತೆಂದೇ ಹೇಳಬಹುದು. ನಮ್ಮಲ್ಲಿ ತಯಾರಾದ ಬೆಂಕಿಕಡ್ಡಿಯ ಮೇಲೆ ವಿಧಿಸಿ ನಾವು ಇಂಡಿಯ ಸರಕಾರಕ್ಕೆ ತೆರುವ ಸುಂಕ ೧೯೪೦-೪೧ರಲ್ಲಿ ೧.೦೯ ಲಕ್ಷ ರೂಪಾಯಿಗಳು. ಮೇಲೆ ಹೇಳಿದ ನಿಯಮದಂತೆ ಇಂಡಿಯ ಸರಕಾರದಿಂದ ಮೈಸೂರು ಸರಕಾರಕ್ಕೆ ಇಲ್ಲಿನ ಜನಸಂಖ್ಯೆಗೆ ಅನುಗುಣವಾಗಿ ಹಿಂದಕ್ಕೆ ಬರುವ ಸುಂಕದ ಮೊತ್ತ ೧೯೪೦-೪೧ ರಲ್ಲಿ ೩.೧೦ ಲಕ್ಷ ರೂಪಾಯಿಗಳು.

ಬೆಂಕಿಕಡ್ಡಿ ಸುಂಕದಂತೆ ಸಕ್ಕರೆಯ ಮೇಲೆಯೂ ಇಂಡಿಯ ಸರಕಾರ ಸುಂಕ ವಿಧಿಸುತ್ತದೆ. ಆದರೆ ಜನಸಂಖ್ಯೆಗೆ ಅನುಗುಣವಾಗಿ ವಸೂಲಾದ ಸಕ್ಕರೆ ಸುಂಕವನ್ನು ದೇಶೀಯ ಸಂಸ್ಥಾನದ ಸರಕಾರಕ್ಕೆ ಸಲ್ಲಿಸುವ ಷರತ್ತಿರುವುದಿಲ್ಲ. ಇಂಡಿಯ ಸರಕಾರದವರು ಸಕ್ಕರೆ ಕಾರ್ಖಾನೆಗಳಮೇಲೆ ಹೇರುವ ಸುಂಕವನ್ನು ಅನುಸರಿಸಿ ದೇಶೀಯ ಸಂಸ್ಥಾನಗಳು ತಮ್ಮ ಎಲ್ಲೆಯಲ್ಲಿ ತಯಾರಾಗುವ ಸಕ್ಕರೆಯಮೇಲೆ ಹೇರಬೇಕಾಗುವುದು. ಇಂಡಿಯ ಸರಕಾರ ೧೯೩೪ರಲ್ಲಿ ಹಂಡ್ರೆಡ್‌ವೇಟಿಗೆ ರೂ. ೧-೫-೦ ಯಂತೆ ಹಾಕಿದ ಸುಂಕ ನಮ್ಮ ದೇಶದಲ್ಲಿಯೂ ಜಾರಿಗೆ ಬಂದಿತು. ಮಂಡ್ಯದ ಸಕ್ಕರೆ ಕಂಪೆನಿಯಲ್ಲಿ ತಯಾರಾಗುವ ಸಕ್ಕರೆ ಮತ್ತು ಮೋಟಾರು ಸ್ಪಿರಿಟ್—ಇವೆರಡು ಬಾಬುಗಳಿಂದಲೂ ಬರುವ ಸುಂಕ ಚಿಲ್ಲರೆ ತೆರಿಗೆಗಳಲ್ಲಿ ಸೇರಿರುತ್ತದೆ.

ಚಿಲ್ಲರೆ ತೆರಿಗೆಗಳ ಗುಂಪಿಗೆ ಸೇರಿದ ಮತ್ತೊಂದು ತೆರಿಗೆ ಎಂದರೆ ಜೂಜಿನ ತೆರಿಗೆ. ಮೈಸೂರು ಮತ್ತು ಬೆಂಗಳೂರು ಪಟ್ಟಣಗಳಲ್ಲಿ ಕುದುರೆ ಜೂಜಿನ ಕಟ್ಟೆಗಳಲ್ಲಿ ಕೊಡುವ ಪಂತದ ಹಣದಲ್ಲಿ ಶೇಕಡ ೭½ ಯಂತೆ ಆಗುವ ತೆರಿಗೆಯನ್ನು ಸರಕಾರಕ್ಕೆ ಸಲ್ಲಿಸಬೇಕೆಂದು ಮೊದಲು ವಿಧಿಸಿದರು. ಹೀಗೆ ವಿಧಿಸುವ ತೆರಿಗೆ ಭಾಗವನ್ನು ಕಾಲಾನುಗುಣವಾಗಿ ಸರಕಾರದವರು ಬದಲಾಯಿಸಿರುತ್ತಾರೆ. ೧೯೩೨ರಿಂದೀಚೆಗೆ ಮನೋರಂಜಕ ಮಂದಿರಗಳು ಎಂದರೆ ಸಿನಿಮಾ, ನಾಟಕಶಾಲೆ,

ಸಂಗೀತಕಛೇರಿ ಇವೇ ಮೊದಲಾದ ಮಂದಿರಗಳಿಗೆ ಪ್ರವೇಶ ಪಡೆಯುವವರು ಟಿಕೆಟ್‌ಗಳಿಗಾಗಿ ಪ್ರವೇಶಧನವನ್ನು ಕೊಡುವುದಲ್ಲದೆ ಸರಕಾರಕ್ಕೆ ತೆರಿಗೆಯನ್ನು ಸಲ್ಲಿಸುತ್ತಾರೆ. ಎಂಟಾಣೆಗೆ ಮೀರಿದ ಪ್ರವೇಶಧನವನ್ನು ಕೊಡತಕ್ಕವರು ಮಾತ್ರ ಟಿಕೆಟ್ಟಿನ ಬೆಲೆಯನ್ನು ಅನುಸರಿಸಿ ಶೇಕಡ ೨೫ರಂತೆ ತೆರಿಗೆಯನ್ನು ಕೊಡಬೇಕೆಂದು ಸರಕಾರದವರು ಮೊದಲು ವಿಧಿಸಿದರು. ತೆರಿಗೆ ಸ್ಟ್ಯಾಂಪು ಮೂಲಕ ಮನೋರಂಜಕ ಮಂದಿರಗಳಿಂದ ಸರಕಾರಕ್ಕೆ ಸಂದಾಯವಾಗುವುದು. ಆದರೆ ಈ ಹುಟ್ಟುವಳಿಯನ್ನು ಸ್ಥಳ ಸಂಸ್ಥೆಗಳಿಗಾಗಿ ಮೀಸಲಾಗಿಟ್ಟು ಆಯಾ ಸಂಸ್ಥೆಗಳಿಗೆ ಸರಕಾರ ಕೊಡುತ್ತದೆ.

ಮೋಟಾರು ಲೈಸೆನ್ಸ್ ಫೀ ಮತ್ತು ವಾಹನ ತೆರಿಗೆಗಳು — ಇವೆರಡನ್ನೂ ಚಿಲ್ಲರೆ ತೆರಿಗೆಗಳ ಗುಂಪಿಗೆ ಸೇರಿಸಬಹುದು. ಮೋಟಾರು ವಾಹನಗಳು ಸರಕಾರಕ್ಕೆ ಬೇರೆ ಬೇರೆ ರೀತಿಯಲ್ಲಿ ತೆರಿಗೆಗಳನ್ನು ಸಲ್ಲಿಸಬೇಕು. ಖಾಸಗಿ ಜನರು ತಮ್ಮ ಮೋಟಾರುಗಳಿಗಾಗಿ ಲೈಸನ್ಸ್ ಫೀ ಕೊಡಬೇಕು; ಮೋಟಾರು ಲಾರಿಗಳು ನಿಗದಿಯಾದ ತೆರಿಗೆ ಕಟ್ಟಬೇಕು; ಸಾರ್ವಜನಿಕ ಸಂಚಾರ ಸೌಕರ್ಯಕ್ಕಾಗಿ ಉಪಯೋಗಿಸಲ್ಪಡುವ ಬಸ್ಸುಗಳು. ಸಂಚರಿಸುವ ಮೈಲಿಗೆ ತಕ್ಕಂತೆ ಮೈಲಿ ತೆರಿಗೆ ಮತ್ತು ಕೂಡುವ ಸ್ಥಳದ ಅವಕಾಶಕ್ಕೆ ತಕ್ಕಂತೆ ನಿರ್ಧರಿಸಲ್ಪಡುವ ತೆರಿಗೆ — ಇವೆರಡನ್ನೂ ತೆರಬೇಕು. ಆದರೆ ಈ ಬಾಬುಗಳಿಂದ ದೊರೆಯುವ ಹುಟ್ಟುವಳಿಯನ್ನು ಸರಕಾರವು ಸಾಮಾನ್ಯ ವೆಚ್ಚಕ್ಕೆ ಉಪಯೋಗಿಸುವುದಿಲ್ಲ. ೧೯೩೭-೪೦ರಲ್ಲಿ ಹುಟ್ಟುವಳಿ ಸುಮಾರು ೧೧½ ಲಕ್ಷ ರೂಪಾಯಿಗಳು. ರಸ್ತೆ ಮತ್ತು ಸೇತುವೆಗಳನ್ನು ಉಪಯೋಗಿಸುವ ವಾಹನಗಳು ತೆರುವ ಸುಂಕ (೩·೧೦ ಲಕ್ಷ ರೂಪಾಯಿಗಳು), ಇಂಡಿಯಾ ಸರಕಾರದಿಂದ ಬರುವ ಪೆಟ್ರೋಲ್ ತೆರಿಗೆ ಭಾಗ (ಸುಮಾರು ೩·೮೨ ಲಕ್ಷ ರೂಪಾಯಿಗಳು), ಸಾಧಾರಣ ಹುಟ್ಟುವಳಿಯಿಂದ ಪ್ರತ್ಯೇಕವಾಗಿ ಕೊಡುವ ಕಂಟ್ರಿಬ್ಯೂಷನ್ (೪ ಲಕ್ಷ ರೂಪಾಯಿಗಳು) ಈ ಮೊಬಲಗುಗಳನ್ನು ಮೋಟಾರು ವಾಹನಗಳಿಂದ ಸಂದಾಯವಾಗುವ ತೆರಿಗೆ ಮೊತ್ತದೊಂದಿಗೆ ಕೂಡಿಸಿ, "ರೋಡ್ ಫಂಡು" ಎಂಬ ಪ್ರತ್ಯೇಕವಾದ ಲೆಕ್ಕವನ್ನು ಇಟ್ಟು ಸಂಸ್ಥಾನದಲ್ಲಿ ರಸ್ತೆ ಮತ್ತು ಸೇತುವೆ ನಿರ್ಮಾಣಕ್ಕೆ ಹೆಚ್ಚಿನ ಅನುಕೂಲ ದೊರೆಯುವ ಏರ್ಪಾಡು ಜಾರಿಗೆ ಬಂದಿತು. ರೋಡು ಫಂಡಿನ ಆಯವ್ಯಯವನ್ನು ಸರಕಾರದ ಬಡ್ಜೆಟ್ಟಿನಲ್ಲಿ ಸೇರಿಸದೆ, ಪ್ರತ್ಯೇಕವಾಗಿ ಪರಿಶಿಷ್ಟದ ರೂಪದಲ್ಲಿ ತೋರಿಸುವುದು ವಾಡಿಕೆಯಲ್ಲಿದೆ.

ಸಾಮಾನ್ಯ ಹುಟ್ಟುವಳಿಗೆ ಸೇರಿ ಸರಕಾರದ ಸಾಮಾನ್ಯ ವೆಚ್ಚಕ್ಕಾಗಿ ವಿನಿಯೋಗವಾಗುವ ಚಿಲ್ಲರೆ ತೆರಿಗೆಗಳ ಹುಟ್ಟುವಳಿಯ ಬೆಳವಣಿಗೆಯನ್ನು ಇಲ್ಲಿ ತೋರಿಸಿದೆ:—

| | | ೧೯೩೪-೩೫ | ೧೯೩೯-೪೦ | ೧೯೪೦-೪೧ |
|---|---|---|---|---|
| | | ಲಕ್ಷ ರೂ. | ಲಕ್ಷ ರೂ. | ಲಕ್ಷ ರೂ. |
| ಬೆಂಕಿ ಕಡ್ಡಿ ಪೆಟ್ಟಿಗೆ ಸುಂಕ | ... | ೨·೯೪ | ೩·೪೧ | ೪·೧೪ |
| ಸಕ್ಕರೆ ಸುಂಕ | ... | ೦·೮೭ | ೧೩·೦೦ | ೧೭·೭೮ |
| ಜೂಜಿನ ತೆರಿಗೆ | ... | ೦·೭೩ | ೦·೫೦ | ೦·೫೧ |

# ಪ್ರಕರಣ ೪

## ರಾಷ್ಟ್ರಾದಾಯ ಮತ್ತು ತೆರಿಗೆ ಹೊರೆ

ತೆರಿಗೆಗಳ ಒಟ್ಟು ಮೊತ್ತಕ್ಕೂ ರಾಷ್ಟ್ರಾದಾಯಕ್ಕೂ ಇರುವ ಅಂತರವೂ ತೆರಿಗೆಗಳ ಒತ್ತಡವೂ ಪ್ರಜಾವರ್ಗದ ತೆರಿಗೆಕೊಡುವ ಶಕ್ತಿಗೆ ಅನುಗುಣವಾಗಿರಬೇಕು. ರಾಷ್ಟ್ರಾದಾಯವನ್ನು ಗೊತ್ತುಮಾಡುವುದೂ ತೆರಿಗೆ ಕೊಡುವ ಶಕ್ತಿಯನ್ನು ಅಳೆಯುವುದೂ ಸುಲಭಸಾಧ್ಯವಲ್ಲವೆಂದು ಹಿಂದೆಯೇ ಹೇಳಿದೆ.

ಪ್ರತಿವರ್ಷದಲ್ಲೂ ಒಂದು ರಾಷ್ಟ್ರದಲ್ಲಿ ಉತ್ಪತ್ತಿಯಾಗುವ ಸಾಮಗ್ರಿ ಮತ್ತು ಸೇವೆಯ ನಿವ್ವಳ ಸಮುಚ್ಚಯವೇ ಅಲ್ಲಿಯ ರಾಷ್ಟ್ರಾದಾಯವೆಂದು ಭಾವಿಸುವುದು ವಾಡಿಕೆಯಲ್ಲಿದೆ. ಆಯಾ ಪ್ರಜಾವರ್ಗಕ್ಕೆ ತನ್ನ ಸಾಮಾನ್ಯ ನಿತ್ಯಜೀವನಕ್ಕೆ ಬೇಕಾಗುವ ಕನಿಷ್ಠ ಮಿತಿ ವೆಚ್ಚದ ಮೊಬಲಗನ್ನು ಆದಾಯದಿಂದ ಕಳೆದು ಉಳಿಯುವ ಹಣದಲ್ಲಿ ಗೊತ್ತಾದ ಭಾಗವನ್ನು ಅಲ್ಲಿಯ ಸರಕಾರವು ತೆರಿಗೆಯ ರೂಪದಲ್ಲಿ ವಸೂಲುಮಾಡಬಹುದು. ಈ ಮೊತ್ತ ಪ್ರಜಾವರ್ಗದ ತೆರಿಗೆಕೊಡುವ ಶಕ್ತಿಯ ಪರಮಾವಧಿಯನ್ನು ಸೂಚಿಸುತ್ತದೆ.

ತೆರಿಗೆಕೊಟ್ಟಂತೆ ತೆರುವ ಶಕ್ತಿ ಕಡಮೆಯಾಗುವುದು ಸಹಜ. ಕೆಲವು ಸಂದರ್ಭಗಳಲ್ಲಿ ಹೀಗಾಗದಿರುವುದೂ ಉಂಟು. ತೆರಿಗೆಗಳಿಂದ ಕೂಡಿಸಿದ ಹಣದಲ್ಲಿ ಸರಕಾರ ಸಾರ್ವಜನಿಕ ಸಾಲದ ಮೇಲಿನ ಬಡ್ಡಿ ಪಾವತಿ ಮಾಡುವುದಷ್ಟೆ. ಈ ಹಣ ಅಲ್ಲಿನ ಪ್ರಜೆಗಳಿಗೆ ಸಂದಾಯವಾಗುವುದರಿಂದ ಅವರಲ್ಲಿ ತೆರಕೊಡುವ ಶಕ್ತಿ ಹೆಚ್ಚಲು ಅವಕಾಶವಾಗುತ್ತದೆ. ಪ್ರಜಾವರ್ಗದ ತೆರಿಗೆ ಹೊರೆಯನ್ನು ಲೆಕ್ಕಾಚಾರಮಾಡುವಾಗ ವಾಸ್ತವವಾಗಿಯೂ ಪ್ರಜೆಗಳಿಗೆ ಹೊರೆಯಾಗುವ ತೆರಿಗಯ ಭಾಗವನ್ನು ಗಮನಿಸಿ ಲೆಕ್ಕಾಚಾರ ಮಾಡಬೇಕೆಂಬುದನ್ನು ನಾವು ಮರೆಯಕೂಡದು.

ಮೈಸೂರು ಸಂಸ್ಥಾನದ ರಾಷ್ಟ್ರಾದಾಯ ೧೯೧೨-೧೩ರಲ್ಲಿ ೨೭೧೭ ಲಕ್ಷ ರೂಪಾಯಿಗಳೆಂದೂ ೧೯೨೨-೨೩ರಲ್ಲಿ ೩೯೯೯ ಲಕ್ಷ ರೂಪಾಯಿಗಳೆಂದೂ ಅಂದಾಜುಮಾಡಲಾಗಿದೆ. ೧೯೩೪-೩೫ರಲ್ಲಿ ಆದಾಯದ ಅಂದಾಜ ಸುಮಾರು ೪೨೬೧ ಲಕ್ಷ ರೂಪಾಯಿಗಳು. ಮೈಸೂರು ಸರಕಾರ ಸಾರ್ವಜನಿಕ ಸಾಲಗಳಿಗಾಗಿ ಪಾವತಿಮಾಡುವ ಬಡ್ಡಿಯ ಮೊತ್ತದಲ್ಲಿ ಶೇಕಡ ೪೦ರಷ್ಟು ಮೊಬಲಗು ಸಂಸ್ಥಾನದ ಪ್ರಜೆಗಳಿಗೇ ಸಂದಾಯವಾಗುವುದೆಂದು ಭಾವಿಸಿ ಇಲ್ಲಿನ ತೆರಿಗೆಗಳ ವಾಸ್ತವಿಕ ಹೊರೆ ಕ್ರಮವಾಗಿ ೧೯೧ ಲಕ್ಷ ರೂ., ೨೪೪ ಲಕ್ಷ ರೂ. ಮತ್ತು ೨೯೦ ಲಕ್ಷ ರೂಪಾಯಿಗಳೆಂದು ಅಂದಾಜುಮಾಡಲ್ಪಟ್ಟಿದೆ. ಎಂದರೆ ನಮ್ಮ ರಾಷ್ಟ್ರಾದಾಯ ಹೆಚ್ಚಿದಂತೆ ಪ್ರಜೆಗಳು ತೆರುವ ತೆರಿಗಗಳ ಹೊರೆಯ ಮೊತ್ತ ಕಡಮೆಯಾಗಿರುವುದು. ಇದು ತೆರಿಗೆದಾರರ ದೃಷ್ಟಿಯಿಂದ ಉತ್ತಮವಾದುದು.

ಸಾಮಾನ್ಯವಾಗಿ ವರ್ಷ ಒಂದಕ್ಕೆ ರಾಷ್ಟ್ರಾದಾಯದ ಸುಮಾರು ೧/೪ ಭಾಗ ಇಂಗ್ಲೆಂಡಿನಲ್ಲೂ, ೧/೫ ಭಾಗ ಸಂಯುಕ್ತ ಸಂಸ್ಥಾನಗಳಲ್ಲೂ, ೧/೮ ಭಾಗ ಜಪಾನಿನಲ್ಲೂ ೧/೧೦ ಭಾಗ ಇಂಡಿಯದಲ್ಲೂ ತೆರಿಗೆಯ ರೂಪದಲ್ಲಿ ಸರಕಾರಕ್ಕೆ ಸಂದಾಯವಾಗುತ್ತಿದೆಯೆಂದು ಯುದ್ಧಕ್ಕೆ ಪೂರ್ವಭಾವಿಯಾಗಿ ಅಂದಾಜಮಾಡಲ್ಪಟ್ಟಿತ್ತು. ಮೈಸೂರಿನಲ್ಲಿ ನಮ್ಮ ಪ್ರಜೆಗಳು ತಮ್ಮ ರಾಷ್ಟ್ರಾದಾಯದಲ್ಲಿ ಹದಿನಾರರಲ್ಲಿ ಒಂದು ಭಾಗದಷ್ಟು ಮಾತ್ರ ತೆರಿಗೆಯ ರೂಪದಲ್ಲಿ ಸರಕಾರಕ್ಕೆ ಸಲ್ಲಿಸುತ್ತಾರೆ. ನಾವು ಬೇರೆ ಬೇರೆ ರೀತಿ ಇಂಡಿಯ ಸರಕಾರಕ್ಕೆ ತೆರುವ ತೆರಿಗೆಗಳನ್ನೂ ಸೇರಿಸಿದರೆ ಈ ಭಾಗ ಹದಿಮೂರರಲ್ಲಿ ಒಂದರಷ್ಟಾಗುವುದು. ಆದರೆ ಈ ಅಂಕಿಗಳಿಂದಲೇ ತೆರಿಗೆಯ ಭಾರವನ್ನು ಹೋಲಿಸುವುದಾಗಲಿ ಸರಕಾರದ ಕಾರ್ಯಕ್ರಮದ ಪರಿಮಿತಿ, ಉಪಯೋಗಗಳನ್ನು ವಿಮರ್ಶಿಸುವುದಾಗಲಿ ಸರಿಯಲ್ಲ. ಆಯಾ ರಾಷ್ಟ್ರಾದಾಯದ ಪರಿಮಾಣ, ಸರಕಾರದ ರಚನೆ ಮತ್ತು ಕಾರ್ಯವಿಸ್ತರಣೆ, ಪ್ರಜಾವರ್ಗದ ಆಕಾಂಕ್ಷೆಗಳು ಇವೆಲ್ಲವನ್ನೂ ಪರಿಶೀಲಿಸಬೇಕಾಗುತ್ತದೆ. ಆದರೂ ಮೈಸೂರಿನಲ್ಲಿ ಸರಕಾರ ತೆರಿಗೆಗಳಿಂದ ಬಹು ಕಡಿಮೆ ಭಾಗವನ್ನು ಸಂಗ್ರಹಿಸಬೇಕೆಂಬ ತತ್ವಕ್ಕೆ ಪ್ರಾಶಸ್ತ್ಯ ಕೊಟ್ಟಿರುವುದೆಂಬ ಅಂಶ ನಿರ್ವಿವಾದವಾದದ್ದು.

ಮೈಸೂರು ಸರಕಾರ ವಿಧಿಸುವ ತೆರಿಗೆಗಳಲ್ಲಿ ಒಂದೊಂದೂ ಪ್ರಜಾಸಮುದಾಯದಲ್ಲಿ ಯಾವ ವರ್ಗದವರಿಂದ ಹೆಚ್ಚಾಗಿ ವಸೂಲಾಗುತ್ತಿರುವುದೆಂಬ ಅಂಶವನ್ನು ಸ್ಥೂಲವಾಗಿ ಪರಿಶೀಲಿಸೋಣ. ಒಟ್ಟಿನಲ್ಲಿ ತೆರಿಗೆಯ ಭಾರವು ಕಡಮೆ ವರಮಾನವುಳ್ಳ ರೈತಾಪಿಜನಗಳ ಮತ್ತು ಕೂಲಿಯಿಂದ ಜೀವಿಸುವ ಶ್ರಮಜೀವಿಗಳ ಮೇಲೆ ಹೆಚ್ಚೆಂದು ಹೇಳಬೇಕು. ತೆರಿಗೆಯ ವರಮಾನದಲ್ಲಿ ಭೂಕಂದಾಯ ಮತ್ತು ಆಬ್ಕಾರಿ ಬಾಬುಗಳಿಂದ ಸುಮಾರು ಶೇಕಡ ಅರವತ್ತರಷ್ಟು ವರಮಾನ ಸರಕಾರಕ್ಕೆ ಸಂದಾಯವಾಗುತ್ತದೆ. ಈ ತೆರಿಗೆಗಳ ಒತ್ತಡ ಬೇಸಾಯಗಾರರ ಮತ್ತು ಮದ್ಯಪಾನದ ದುರಭ್ಯಾಸಕ್ಕೆ ಈಡಾದ ಬಡ ಕೂಲಿಗಾರರ ಮೇಲಿರುವುದು. ಭೂಕಂದಾಯದ ದರಗಳು ದೊಡ್ಡ ಜಮೀನುದಾರರ ಹೆಚ್ಚಿನ ತೆರಕೊಡುವ ಶಕ್ತಿಗೆ ತಕ್ಕಂತೆ ಹೆಚ್ಚುವಂತಿಲ್ಲ. ಇದರಲ್ಲಿ ಬಲುಭಾಗ ಸಣ್ಣ ಸಣ್ಣ ಹಿಡುವಳಿದಾರರಿಂದ ವಸೂಲಾಗುತ್ತದೆ. ಧನಿಕರ ಆಸ್ತಿಪಾಸ್ತಿಗಳ ಮೇಲೆ ಬೇರೆ ತೆರಿಗೆಗಳಿರುವುದಿಲ್ಲ. ಸಾಮಾನ್ಯ ವರಮಾನವುಳ್ಳ ಪ್ರಜೆಗಳು ಸಕ್ಕರೆ ಮತ್ತು ಬೆಂಕಿಕಡ್ಡಿ ಸುಂಕಗಳನ್ನು ಬಿಟ್ಟರೆ ಬೇರೆ ಯಾವ ತೆರಿಗೆಗಳನ್ನೂ ಸರಕಾರಕ್ಕೆ ಸಲ್ಲಿಸಬೇಕಾಗಿರುವುದಿಲ್ಲ. ಸಣ್ಣ ಅಂಗಡಿಗಳನ್ನಿಟ್ಟು ವ್ಯಾಪಾರ ಮಾಡುವವರನ್ನೂ ವರಮಾನದ ತೆರಿಗೆ ಮಿತಿಯೊಳಗಿನ ಆದಾಯ ಪಡೆಯುವ ಬೇರೆ ಬೇರೆ ಗುಂಪಿನ ಕಸಬುದಾರರನ್ನೂ ಸರಕಾರಿ ನೌಕರರನ್ನೂ ಉದಾಹರಣೆಗಾಗಿ ಸೂಚಿಸಬಹುದು. ಸರಕಾರದಿಂದ ವಿಧಿಸಿರುವ ತೆರಿಗೆಗಳು ಪ್ರಜಾವರ್ಗಗಳೆಲ್ಲವನ್ನೂ ತಾಗದು ; ತೆರಿಗೆ ಕೊಡುವವರ ಶಕ್ತಿಗನುಗುಣವಾಗಿ ತೆರಿಗೆ ಹೊರೆಯ ಅಂತರವಿದೆಯೆಂದೂ ಹೇಳಲಾಗುವುದಿಲ್ಲ. ಈ ನ್ಯೂನತೆಗಳನ್ನು ಸರಿಪಡಿಸಿ ಆದಾಯವನ್ನು ಹೆಚ್ಚಿಸಲು ಸಾಧ್ಯವಾಗುವಂತೆ ನಮ್ಮ ಸಂಸ್ಥಾನದಲ್ಲಿ ಕೆಲವು ಹೊಸ ತೆರಿಗೆಗಳನ್ನು ವಿಧಿಸಲು ಅವಕಾಶವಿದೆ.

ಹೀಗೆ ವಿಧಿಸಬಹುದಾದ ತೆರಿಗೆಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು :—

೧. ಧನಿಕರ ಮೇಲೆ ತೆರಿಗೆ ಹಾಕಿ, ಹೊರೆಯ ತೂಕವನ್ನು ಸರಿಪಡಿಸುವ ತೆರಿಗೆಗಳು ಕೆಲವು.

೨. ಸರಕಾರಕ್ಕೆ ತೆರಿಗೆ ಕೊಡದೆ ತಪ್ಪಿಸಿಕೊಂಡಿರುವ ಪ್ರಜಾವರ್ಗದಲ್ಲಿ ಮಧ್ಯಮವರ್ಗಗಳ ಮೇಲೆ ಬೀಳುವ ತೆರಿಗೆಗಳು ಕೆಲವು.

೩. ವರಮಾನ ಹೆಚ್ಚುವಂತೆ ಸಾಮಾನ್ಯ ಪ್ರಜಾವರ್ಗದ ಮೇಲೆ ಬೀಳುವ ತೆರಿಗೆಗಳು ಕೆಲವು.

ವರಮಾನದ ತೆರಿಗೆಯ ದರಗಳನ್ನು ಹೆಚ್ಚಿಸಿ, ಆದಾಯದ ತೆರಿಗೆಗೆ ನಿಲುಕದಿರುವ ವರಮಾನದ ಮಿತಿಯನ್ನು, ೧,೦೦೦ ಅಥವಾ ೧,೫೦೦ ರೂ. ಗಳಿಗೆ ತಗ್ಗಿಸುವುದರಿಂದ ಸರಕಾರಕ್ಕೆ ಸುಮಾರು ೧೫–೧೭ ಲಕ್ಷ ರೂಪಾಯಿಗಳಷ್ಟು ವಾರ್ಷಿಕ ಹುಟ್ಟುವಳಿ ಬರುವುದು. ವ್ಯವಸಾಯದಿಂದ ಬರುವ ಆದಾಯದ ಮೇಲೆ ವರಮಾನದ ತೆರಿಗೆ ಸಲ್ಲಿಸಬೇಕೆಂದು ವಿಧಿಸುವುದು, ಆಸ್ತಿಪಾಸ್ತಿ ಹಕ್ಕುದಾರಿ ತೆರಿಗೆ ವಿಧಿಸುವುದು, ಹೆಚ್ಚು ಮೌಲ್ಯದ ಬೆಲೆಗಿನ ಆಸ್ತಿಗಳ ವ್ಯವಹಾರಕ್ಕೆ ಸಂಬಂಧಪಟ್ಟ ರಿಜಿಸ್ಟ್ರೇಷನ್ ಫೀ ದರಗಳನ್ನು ಹೆಚ್ಚಿಸುವುದು, ಮೈಸೂರು ಮತ್ತು ಬೆಂಗಳೂರಿನಲ್ಲಿರುವ ನಿವೇಶನಗಳ ಮತ್ತು ಮನೆಗಳ ಅಂದಾಜ ಬೆಲೆಗಳಿಗನುಗುಣವಾಗಿ ವಿಧಿಸುವ ತೆರಿಗೆ—ಇವೇ ಮೊದಲಾದ ಸುಧಾರಣೆಗಳಿಂದ ಧನಿಕರ ತೆರಿಗೆ ಹೊರೆಯನ್ನು ಹೆಚ್ಚಿಸಿ, ಸರಕಾರದ ಆದಾಯವನ್ನು ಅಭಿವೃದ್ಧಿಪಡಿಸಲು ಅವಕಾಶವಿರುತ್ತದೆ.

ಅಂಗಡಿಗಳ ಮೇಲೆ ವಿಧಿಸುವ ಲೈಸನ್ಸ್‌ಫೀ, ಹೊಗೆಸೊಪ್ಪು ಮತ್ತು ಸೋಡ ಮೊದಲಾದ ಪಾನೀಯಗಳ ಮೇಲಿನ ತೆರಿಗೆ—ಇವೆರಡೂ ವರಮಾನದ ದೃಷ್ಟಿಯಿಂದ ಗಣ್ಯವಾದುದೆಂದು ಹೇಳಬಹುದು. ಮಾರಾಟದ ತೆರಿಗೆ, ರೈಲು ಮತ್ತು ಬಸ್ಸು ಲಾರಿಗಳಲ್ಲಿ ಸಾಗಿಸುವ ಸಾಮಾನುಗಳ ಮೇಲೆ ವಿಧಿಸಬಹುದಾದ ಒಳಸುಂಕ ಮೊದಲಾದ ತೆರಿಗೆಗಳ ಹೊರೆ ಪ್ರಜಾಸಾಮಾನ್ಯದ ಮೇಲೆ ಬಿದ್ದು ಸರಕಾರದ ಬೊಕ್ಕಸಕ್ಕೆ ಸುಮಾರು ೨೦ ೨೫ ಲಕ್ಷ ರೂಪಾಯಿಗಳಷ್ಟು ಆದಾಯವನ್ನು ಸೇರಿಸಬಹುದೆಂದು ಕೆಲವರು ಅಂದಾಜು ಮಾಡಿರುತ್ತಾರೆ. ಇಲ್ಲಿ ಸೂಚಿಸಿರುವ ಹಲವಾರು ತೆರಿಗೆಗಳಿಂದ ರಾಷ್ಟ್ರಾದಾಯವನ್ನು ಸುಮಾರು ಅರ್ಧಕೋಟಿಗೆ ಮೀರಿ ಹೆಚ್ಚಿಸಬಹುದಲ್ಲದೆ, ತೆರಿಗೆ ವ್ಯವಸ್ಥೆ ಮತ್ತು ತೆರಿಗೆ ಹೊರೆ ಹಂಚಿಕೆಯಲ್ಲಿರುವ ಕೆಲವು ಲೋಪದೋಷಗಳನ್ನೂ ಸರಿಪಡಿಸಬಹುದು.

———

# ಪ್ರಕರಣ ೨೫

## ತೆರಿಗೆಯಿಂದ ಪ್ರತ್ಯೇಕವಾದ ವರಮಾನ

ಮೈಸೂರು ಸರಕಾರದ ಆಯವ್ಯಯ ರಚನೆಯಲ್ಲಿ ಕಾಣುವ ವೈಶಿಷ್ಟ್ಯದಲ್ಲಿ ತೆರಿಗೆಯಿಂದ ಪ್ರತ್ಯೇಕವಾದ ವರಮಾನದ ಬೆಳವಣಿಗೆ ಮುಖ್ಯವಾದುದು. ೧೯೧೦-೧೧ರಲ್ಲಿ ಈ ಬಗೆಯ ವರಮಾನದ ಮೊತ್ತ ಸುಮಾರು ೬೫ ಲಕ್ಷ ರೂಪಾಯಿಗಳಿದ್ದು ೧೯೪೦-೪೧ರಲ್ಲಿ ೨೦೬·೫೬ ಲಕ್ಷ ರೂಪಾಯಿಗಳಿಗೆ ಹೆಚ್ಚಿರುತ್ತದೆ. ೧೯೨೫-೨೬ ರಿಂದ ಸರಕಾರದ ಕಾರ್ಯವಿಸ್ತರಣೆಗಾಗಿ, ಹೆಚ್ಚಿನ ಹಣವನ್ನು ಈ ಬಾಬಿನಿಂದ ಪಡೆಯುವ ಪ್ರಯತ್ನಕ್ಕೆ ಸರಕಾರದವರು ಹೆಚ್ಚುಹೆಚ್ಚಾಗಿ ಗಮನ ಕೊಟ್ಟಿರುತ್ತಾರೆ. ೧೯೨೫-೨೬ರಲ್ಲಿ ತೆರಿಗೆಯಲ್ಲದ ವರಮಾನದ ಮೊತ್ತ ಸುಮಾರು ೧೧೩ ಲಕ್ಷ ರೂಪಾಯಿಗಳು.

ಮೈಸೂರು ಸರಕಾರಕ್ಕೆ ಬರುವ ಈ ಬಗೆಯ ವರಮಾನವನ್ನು ನಾಲ್ಕು ಗುಂಪುಗಳಾಗಿ ವಿಮರ್ಶಿಸಬಹುದು :—

೧. ದೈವದತ್ತವಾದ ಸಂಪತ್ತಿನಿಂದ ಬರುವ ಆದಾಯ.

೨. ಸಾರ್ವಜನಿಕ ಸೌಕರ್ಯಕ್ಕಾಗಿ ನಡಸುವ ಸರಕಾರದ ಉದ್ಯಮಗಳ ವರಮಾನ.

೩. ಸರಕಾರದ ಇತರ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮಗಳ ಆದಾಯ.

೪. ಇಲಾಖೆಗಳ ವಸೂಲಿ ಮತ್ತು ಚಿಲ್ಲರೆ ಬಾಬುಗಳ ಆದಾಯ.

ಸರಕಾರದ ಜಮೀನಿನ ಮಾರಾಟ, ಚಿನ್ನದಗಣಿ ಕಂಪೆನಿಗಳಿಂದ ವಸೂಲಾಗುವ ರಾಜಾದಾಯ ಮತ್ತು ಸುಂಕ*, ಅರಣ್ಯದ ಇಲಾಖೆಯಿಂದ ಬರುವ ವರಮಾನ, ಗಂಧದ ಎಣ್ಣೆ ಆದಾಯದ ಭಾಗ, ಕ್ರೋಮ್‌ಗಣಿಗಳ ಆದಾಯ ಇವೇ ಮೊದಲಾದ ಬಾಬುಗಳು ಮೊದಲನೆಯ ಗುಂಪಿಗೆ ಸೇರತಕ್ಕವು. ವಿದ್ಯುಚ್ಛಕ್ತಿ, ರೈಲ್ವೆ ಮತ್ತು ನೀರಾವರಿ ಉದ್ಯಮಗಳು ಎರಡನೆಯ ಗುಂಪಿಗೆ ಸೇರುತ್ತವೆ. ಖಾಸಗಿ ಉದ್ಯಮಗಳಂತೆ ಸರಕಾರ ಬಂಡವಾಳವನ್ನು ಕೊಟ್ಟು ನಡಸುವ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ, ಸಿಮೆಂಟ್ ಮತ್ತು ಸಾಬೂನು ಕಾರ್ಖಾನೆಗಳನ್ನು ಮೂರನೆಯ ಗುಂಪಿಗೆ ಸೇರಿಸಬೇಕು. ಸರಕಾರ ಸ್ವಲ್ಪಭಾಗ

---

* ೧೯೪೦ನೆಯ ಮಾರ್ಚಿಯಿಂದ ಭಂಗಾರದ ಬೆಲೆ ಔನ್ಸ್ ಒಂದಕ್ಕೆ ೧೦೧ ರೂಪಾಯಿಗಳಿಗಿಂತಲೂ ಹೆಚ್ಚಿದಾಗ, ಹಾಗೆ ಹೆಚ್ಚಾದ ಬೆಲೆಯ ೩/೪ ಭಾಗದ ಮೊತ್ತ ಮೈಸೂರು ಸರಕಾರಕ್ಕೆ ಭಂಗಾರದ ಸುಂಕದ ರೂಪದಲ್ಲಿ ಸಲ್ಲಬೇಕೆಂದು ನಿರ್ಧರವಾಯಿತು.

ಬಂಡವಾಳವನ್ನು ಒದಗಿಸಿ ಕೈಗಾರಿಕೆಗಳ ಸ್ಥಾಪನೆಗಾಗಿ ಉತ್ತೇಜನ ಕೊಟ್ಟು, ಅದರಲ್ಲಿ ಬರುವ ಲಾಭವನ್ನು ಖಾಸಗಿ ಬಂಡವಾಳಗಾರರೊಡನೆ ಹಂಚಿಕೊಂಡು ನಡೆಯುತ್ತಿರುವ ಸಕ್ಕರೆ ಕಾರ್ಖಾನೆ, ಹೊಗೆಸೊಪ್ಪಿನ ಕಾರ್ಖಾನೆ, ಕಾಗದದ ಕಾರ್ಖಾನೆ ಮೊದಲಾದ ಹಲವಾರು ಉದ್ಯಮಗಳನ್ನು ಈ ಗುಂಪಿಗೆ ಸೇರಿಸಬಹುದು. ಈ ಬಾಬಿನಿಂದಲೂ ಮೈಸೂರು ಸರಕಾರಕ್ಕೆ ಗಣ್ಯವಾದ ಆದಾಯ ಬರುತ್ತದೆ. ವಿದ್ಯಾ ಇಲಾಖೆಯಲ್ಲಿ ವಿದ್ಯಾರ್ಥಿಗಳಿಂದ ಸಂದಾಯವಾಗುವ ಫೀ ಮೊಬಲಗೂ, ಆಸ್ಪತ್ರೆಗಳಲ್ಲಿ ವಸೂಲಾಗುವ ಬೇರೆ ಬೇರೆ ವಿಧದ ಫೀ ಮೊಬಲಗೂ; ಹೀಗೆಯೇ ಬೇರೆ ಇಲಾಖೆಗಳಲ್ಲಿ ವಸೂಲಾಗುವ ಫೀ ವರಮಾನ-- ಇವುಗಳನ್ನು ನಾಲ್ಕನೆಯ ಗುಂಪಿಗೆ ಸೇರಿಸಬೇಕು. ಈ ರೀತಿ ತೆರಿಗೆಯಿಂದ ಪ್ರತ್ಯೇಕವಾದ ಬೇರೆ ಬೇರೆ ಬಾಬುಗಳಿಂದ ಸರಕಾರಕ್ಕೆ ಬರುವ ವರಮಾನದ ವಿವರವನ್ನು ಮುಂದಿನ ಪಟ್ಟಿಯಲ್ಲಿ ತೋರಿಸಿದೆ :—

## ತೆರಿಗೆಯಲ್ಲದ ಬಾಬುಗಳಿಂದ ಸರಕಾರಕ್ಕೆ ಬರುವ ಆದಾಯದ ವಿವರ.

(ಲಕ್ಷ ರೂಪಾಯಿಗಳು)

| | ದೈವದತ್ತವಾದ ಸಂಪತ್ತಿನಿಂದ | | | | ಸಾರ್ವಜನಿಕ ಸೌಕರ್ಯಕ್ಕಾಗಿ ನಡೆಯುವ ಉದ್ಯಮಗಳಿಂದ | | | | | |
|---|---|---|---|---|---|---|---|---|---|---|
| | ಚಿನ್ನದ ಗಣಿ | ಕಾಡುಬಾಬ್ತು | ಗಂಧದೆಣ್ಣೆ | ಒಟ್ಟು | ಕೃಷ್ಣರಾಜಸಾಗರ ನೀರಾವರಿ ಮತ್ತು ವಿದ್ಯುಚ್ಛಕ್ತಿ ಉದ್ಯಮಗಳು | ರೈಲ್ವೆ | ಒಟ್ಟು | ಸಾಧಾರಣ ವಾಣಿಜ್ಯೋದ್ಯಮಗಳಿಂದ + ನಿವ್ವಳಾದಾಯ — ಖೋತಾ ಆಗಿರುವುದು | ಇತರ ಬಾಬು | ತೆರಿಗೆಯಲ್ಲದ ಬಾಬುಗಳಿಂದ ಬರುವ ಆದಾಯದ ಒಟ್ಟು ಹುಟ್ಟುವಳಿ |
| ೧೯೧೦-೧೧ | ೧೭·೯೯ | ೨೦·೯೧ | ... | ೩೮·೯ | ೯·೭೫ | ೩·೪೨ | ೧೩·೧೭ | +೧·೭೯ | ... | ೫೩·೮೬ |
| ೧೯೧೩-೧೬ | ೨೦·೦೦ | ೩೨·೭೩ | ... | ೫೨·೭೩ | ೧೪·೯೩ | ೧೦·೦೬ | ೨೪·೯೯ | +೧·೦೬ | ... | ೭೮·೭೮ |
| ೧೯೨೦-೨೧ | ೧೪·೮೨ | ೧೪·೬೭ | ೧೭·೬೫ | ೪೭·೧೪ | ೧೭·೧೨ | ೧೦·೯೧ | ೨೮·೦೩ | +೪·೩೨ | ೨೧·೨೧ | ೧೦೦·೭೦ |
| ೧೯೨೫-೨೬ | ೧೨·[illegible]೭ | ೧೮·೨೫ | ೨೧·೫೧ | ೫೨·೨೩ | ೨೨·೪೪ | ೨೧·೪೦ | ೪೩·೮೧ | −೮·೭೬ | ೨೫·೭೧ | ೧೧೨·೭೮ |
| ೧೯೩೦-೩೧ | ೧೦·೬೪ | ೧೩·೯೨ | ೧೭·೩೩ | ೪೧·೮೯ | ೩೩·೭೮ | ೧೪·೫೫ | ೪೮·೩೩ | −೬·೩೪ | ೩೬·೪೬ | ೧೨೦·೩೨ |
| ೧೯೩೫-೩೬ | ೨೭·೦೬ | ೧೪·೫೫ | ೧೧·೦೦ | ೫೨·೬೧ | ೩೯·೯೩ | ೧೨·೧೫ | ೫೨·೦೮ | +೩·೮೮ | ೪೫·೨೧ | ೧೫೧·೦೬ |
| ೧೯೪೦-೪೧ | ೪೯·೬೬ | ೨೧·೨೦ | ೧೧ ೨೦ | ೭೯·೦೬ | ೫೭·೮೨ | ೨೬·೬೦ | ೮೪·೪೭ | +೯·೩೧ | ೩೩·೭೨ | ೨೦೬·೫೬ |

ಈ ವರಮಾನದ ಬಾಬುಗಳನ್ನು ಪ್ರತ್ಯೇಕವಾಗಿ ಮುಂದಿನ ಪುಟಗಳಲ್ಲಿ ವಿಮರ್ಶಿಸಿರುತ್ತದೆ.

## ೧. ದೈವದತ್ತವಾದ ಸಂಪತ್ತಿನಿಂದ ಬರುವ ಆದಾಯ

ಕೋಲಾರದ ಚಿನ್ನದ ಗಣಿಗಳಿಂದ ಸರಕಾರಕ್ಕೆ ವರಮಾನದ ತೆರಿಗೆ, ರಾಜಾದಾಯ, ಚಿನ್ನದ ಮೇಲಿನ ಸುಂಕ ಇವೇ ಮೊದಲಾದ ರೂಪದಲ್ಲಿ ವರಮಾನ ಬರುವಂತೆ, ಅಲ್ಲಿರುವ ಕೂಲಿಗಾರರು ಹೆಚ್ಚಾಗಿ ಸೇವಿಸುವ ಮಾದಕದ್ರವ್ಯಗಳಿಂದ ಆಬ್ಕಾರಿ ಹುಟ್ಟುವಳಿಯೂ, ಕಂಪೆನಿಯವರು ಉಪಯೋಗಿಸುವ ವಿದ್ಯುಚ್ಛಕ್ತಿ ಬಾಬಿನ ಹುಟ್ಟುವಳಿಯೂ, ನೀರು ಸರಬರಾಯಿನಿಂದ ತೇಲುವ ನಿವ್ವಳ ಆದಾಯವೂ ಬಂದು ಸರಕಾರದ ಹುಟ್ಟುವಳಿಯ ಮೊತ್ತವನ್ನು ಹೆಚ್ಚಿಸಿದೆ. ಒಟ್ಟಿನಲ್ಲಿ ೧೯೪೦-೪೧ರಲ್ಲಿ ಚಿನ್ನದಗಣಿ ಪ್ರದೇಶದಿಂದ ಸರಕಾರಕ್ಕೆ ಸಂದಾಯವಾದ ಹುಟ್ಟುವಳಿ ಮೊತ್ತ, ಸುಮಾರು ೧೧೫ ಲಕ್ಷ ರೂಪಾಯಿಗಳೆಂದು ಹೇಳಬಹುದು. ೧೯೪೦ರಲ್ಲಿ ಚಿನ್ನದ ಕಂಪೆನಿಗಳಿಗೂ, ಮೈಸೂರು ಸರಕಾರಕ್ಕೂ ಆದ ಒಪ್ಪಂದದ ಮೇರೆ ಗಣಿಯಿಂದ ತೆಗೆದ ಚಿನ್ನದ ಬೆಲೆಯಲ್ಲಿ ಶೇಕಡ ೫ರಂತೆ ಕನಿಷ್ಠ ರಾಜಾದಾಯವನ್ನು ಕಂಪೆನಿ ಷೇರುದಾರರಿಗೆ ಪಾವತಿಮಾಡುವ ಲಾಭದ ಪ್ರಮಾಣಕ್ಕನುಸಾರವಾಗಿ ಶೇಕಡ ೭½ಯಿಂದ ೪೦ರ ವರೆಗೂ ದಾಮಾಷಾ ಮೇರೆ ಹೆಚ್ಚಿನ ರಾಜಾದಾಯವನ್ನೂ ಸರಕಾರಕ್ಕೆ ಕೊಡಬೇಕು. ೧೮೮೫ರಲ್ಲಿ ಗಣಿಗಳ ಕೆಲಸವು ಪ್ರಾರಂಭವಾಯಿತು. ಅಲ್ಲಿಂದ ೧೯೩೮ರ ವರೆಗೆ ಚಿನ್ನದ ಗಣಿಗಳಿಗೆ ಅನ್ವಯಿಸುವ ಕೆಲವು ಅಂಕಿಅಂಶಗಳನ್ನು ಇಲ್ಲಿ ಸೂಚಿಸಿದೆ:—

| | | | |
|---|---|---|---|
| ತಗೆದ ಚಿನ್ನದ ಮೊತ್ತ | ... | ೮೮,೭೨೩,೪೨೬ | ಪೌಂಡುಗಳು |
| ಕಂಪೆನಿಗಳ ವೆಚ್ಚದ ಮೊತ್ತ | ... | ೪೭,೬೧೬,೮೮೬ | ,, |
| ಲಾಭದ ಮೊತ್ತ | ... | ೩೫,೯೮೩,೩೯೫ | ,, |
| ಕಂಪೆನಿ ಷೇರುದಾರರಿಗೆ ಪಾವತಿಯಾದ ಲಾಭಾಂಶದ ಮೊತ್ತ | ... | ೨೫,೯೬೭,೭೩೩ | ,, |
| ಮೈಸೂರು ಸರಕಾರಕ್ಕೆ ಸಂದಿರುವ ರಾಜಾದಾಯದ ಮೊತ್ತ | ... | ೫,೦೫೦,೯೬೪ | ,, |

ಇಂಗ್ಲೆಂಡಿನಲ್ಲಿರುವ ಷೇರುದಾರರಿಗೆ ಪಾವತಿಯಾಗಿರುವ ಲಾಭಾಂಶದ ಮೊತ್ತದಲ್ಲಿ ಐದರಲ್ಲಿ ಒಂದರಷ್ಟು ಭಾಗಮಾತ್ರ ನಮ್ಮ ಸರಕಾರಕ್ಕೆ ರಾಜಾದಾಯದ ರೂಪದಲ್ಲಿ ಸೇರಿದೆ. ವಿದೇಶೀಯರ ಕಾರ್ಯಕುಶಲತೆಗೆ ನಮ್ಮ ದೇಶದ ದೈವದತ್ತವಾದ ಸಂಪತ್ತನ್ನು ಕಾಣಿಕೆಯಾಗಿ ಕೊಡುವುದನ್ನು ಆದಷ್ಟು ತಗ್ಗಿಸುವ ಉದ್ದೇಶದಿಂದ, ೧೯೪೦ರಿಂದೀಚೆಗೆ ಚಿನ್ನದ ಮೇಲಿನ ಸುಂಕದ ಏರ್ಪಾಡು ಮತ್ತು ರಾಜಾದಾಯದ ಒಪ್ಪಂದದಲ್ಲಿ ಕಲವು ಬದಲಾವಣೆಗಳನ್ನು ಮಾಡಿರುತ್ತದೆ.

ಮೈಸೂರಿನ ನೈಸರ್ಗಿಕ ಸಂಪತ್ತಿನಲ್ಲಿ ಮುಖ್ಯವಾದುದೆಂದರೆ, ನಮ್ಮ ದೇಶದ ಕಾಡುಗಳು. ಗಣಿಯೊಳಗಿನ ಚಿನ್ನ ಒಂದಲ್ಲ ಒಂದುದಿನ ಮುಗಿದುಹೋಗುವುದು. ಅರಣ್ಯದ ಸಂಪತ್ತು ಹಾಗಲ್ಲ. ದೇಶದಲ್ಲಿರುವ ಅರಣ್ಯಗಳ ಪಾಲನೆಗೆ ಸರಿ

ಯಾದ ಏರ್ಪಾಡು ಮಾಡಿರುವುದರಿಂದ ಖಾತೆಯ ಆದಾಯ ಸತತವಾಗಿ ದೊರಕುವುದು. ಸರಕಾರದ ಸ್ವಾಮ್ಯದಲ್ಲಿರುವ ಕಾಡುಗಳ ಒಟ್ಟು ವಿಸ್ತೀರ್ಣ ಸುಮಾರು ೪೬೩೦ ಚದರ ಮೈಲಿಗಳು. ಒಟ್ಟು ದೇಶದ ವಿಸ್ತೀರ್ಣದಲ್ಲಿ ಶೇಕಡ ೧೫ರಷ್ಟು ಭಾಗ ಕಾಡುಪ್ರದೇಶವಾಗಿರುತ್ತದೆ. ೧೮೬೩ ರಲ್ಲಿ ಕಾಡುಗಳನ್ನು ಪಾಲಿಸಲು ಪ್ರತ್ಯೇಕವಾದ ಕಾಡುಖಾತೆಯನ್ನು ಸರಕಾರ ನಿರ್ಮಿಸಿತು. ಕಳೆದ ಯುದ್ಧಕ್ಕೆ ಮುಂಚೆ ಎಣ್ಣೆ ತೆಗೆಯಲು ಗಂಧದ ಮರವನ್ನು ನಮ್ಮ ದೇಶದಿಂದ ರಫ್ತು ಮಾಡುವುದನ್ನು ತಪ್ಪಿಸಿ ನಮ್ಮ ದೇಶದಲ್ಲಿಯೇ ಗಂಧದೆಣ್ಣೆ ತಯಾರುಮಾಡುವ ಕಾರ್ಖಾನೆಯನ್ನು ಈಚೆಗೆ ಸ್ಥಾಪಿಸಿದರು. ಈ ಕೈಗಾರಿಕೆಯ ಆಯವ್ಯಯವನ್ನು ಕಾಡುಖಾತೆ ಲೆಕ್ಕದಲ್ಲಿಯೇ ಬಡ್ಜೆಟ್ಟಿನಲ್ಲಿ ಪ್ರತ್ಯೇಕವಾಗಿ ತೋರಿಸಿರುತ್ತದೆ. ೧೯೨೫-೨೬ರಲ್ಲಿ ಇದೊಂದು ಬಾಬಿನಿಂದ ಸುಮಾರು ೨೧೭ ಲಕ್ಷ ರೂಪಾಯಿಗಳ ಆದಾಯ ಸರಕಾರಕ್ಕೆ ದೊರೆಯಿತು. ೧೯೩೨-೩೫ರಿಂದೀಚೆಗೆ ವ್ಯಾಪಾರದ ಮುಗ್ಗಟ್ಟಿನಿಂದ ಮತ್ತು ಅಗ್ಗವಾದ ಸುಗಂಧ ದ್ರವ್ಯಗಳನ್ನು ತಯಾರು ಮಾಡುವುದು ಹೆಚ್ಚಿದುದರಿಂದ ನಮ್ಮ ಗಂಧದ ಎಣ್ಣೆಗೆ ಗಿರಾಕಿ ಕಡಮೆಯಾಗಿ ಇದರ ವರಮಾನ ೧೯೪೦-೪೧ರಲ್ಲಿ ಸುಮಾರು ೧೧ ಲಕ್ಷ ರೂಪಾಯಿಗಳಿಗೆ ಇಳಿಯಿತು. ಚೌಬೀನೆ ಮಾರಾಟ, ಇದ್ದಲು ತಯಾರುಮಾಡುವುದು, ಕಾಗದದ ಕಾರ್ಖಾನೆ ಮತ್ತು ಖಾಸಗಿ ಜನರಿಗೆ ಬೊಂಬುಗಳನ್ನು ಸರಬರಾಜು ಮಾಡುವುದು, ಜೇನುಮೇಣ— ಇವೇ ಮೊದಲಾದ ಸಾಮಾನುಗಳಿಂದ ಕಾಡುಖಾತೆ ಸರಕಾರದ ಬೊಕ್ಕಸಕ್ಕೆ ಹಣವನ್ನು ಒದಗಿಸುತ್ತದೆ.

ಒಂದು ದೇಶದ ಖನಿಜ ಸಂಪತ್ತು ಕಾಲಾನಂತರದಲ್ಲಿ ನಶಿಸಿಹೋಗುವುದು. ಆದರೆ ಆ ದೇಶದ ವನಸಸ್ಯಸಮೃದ್ಧಿ ಮತ್ತು ಸಂಪತ್ತು ಕಾಲಕ್ಕೆ ತಕ್ಕಂತೆ ಬೆಳಸಬಹುದಾದ ನೈಸರ್ಗಿಕ ಸಂಪತ್ತು. ಹಠಾತ್ತಾಗಿ ಅಭಿವೃದ್ಧಿಮಾಡಲು ಮಾತ್ರ ಸಾಧ್ಯವಲ್ಲ. ಈ ದೈವದತ್ತವಾದ ಸಂಪತ್ತು ಒಂದು ಕಾಲದಲ್ಲಿ ಜೀವಿಸುತ್ತಿರುವ ಪ್ರಜೆಗಳ ಸೌಕರ್ಯಕ್ಕೆ ಮಾತ್ರವೇ ಉಪಯೋಗಿಸಲಾಗದು. ಸಂತತವಾಗಿ ಬೆಳೆಯುವ ಪ್ರಜಾಸಮುದಾಯಕ್ಕೆಲ್ಲಾ ಈ ಸಂಪತ್ತನ್ನು ಅನುಭವಿಸುವ ಹಕ್ಕುಂಟು. ಈಗಿರುವ ಜನಾಂಗಕ್ಕಿರುವಂತೆ ಮುಂದೆ ಬರುವ ಜನಾಂಗಕ್ಕೂ ಈ ಸಂಪತ್ತಿನ ಸೌಕರ್ಯಗಳು ದೊರೆಯುವಂತೆ ಸರಕಾರ ಕಾರ್ಯ ನಿರ್ವಹಿಸಬೇಕು. ಇದಕ್ಕಾಗಿಯೇ ದೇಶದ ಕಾಡುಗಳು ನಶಿಸದಂತೆ ಕಾಪಾಡಿಕೊಂಡು ಬರುವುದು ಕಾಡುಖಾತೆಯ ಮುಖ್ಯ ಜವಾಬ್ದಾರಿಯಾಗಿ ಪರಿಗಣಿಸಲ್ಪಟ್ಟಿದೆ. ಇದೇ ಕಾರಣದಿಂದ ಗಣಿಗಳಿಂದ ಬರುವ ರಾಜಾದಾಯದಲ್ಲಿ, ಗೊತ್ತಾದ ಭಾಗವನ್ನು ಪ್ರತಿವರ್ಷವೂ ಒಟ್ಟುಗೂಡಿಸಿ ನಿಧಿರೂಪದಲ್ಲಿ ಇಡಬೇಕೆಂಬ ಸೂಚನೆಗಳು ೧೯೦೫ ರಿಂದ ಆಗಾಗ ಬಂದಿವೆ. ಈ ಸೂಚನೆಗಳಲ್ಲಿ ಅಡಗಿರುವ ತತ್ತ್ವವನ್ನು ಸರಕಾರದವರು ಆಯವ್ಯಯ ವ್ಯವಸ್ಥೆಯಲ್ಲಿ ಒಂದುರೀತಿ ಅನುಸರಿಸಿರುತ್ತಾರೆ. ಪ್ರತ್ಯೇಕವಾಗಿ ಈ ಆದಾಯವನ್ನು ಸೇರಿಸಿ ಒಂದು ನಿಧಿಯನ್ನು ಕೂಡಿಸದಿದ್ದರೂ, ಈ ಬಾಬುಗಳ ವರಮಾನವನ್ನು

ಹೆಚ್ಚಾಗಿ ಸಂಪದಭಿವೃದ್ಧಿ ಕಾರ್ಯಗಳಿಗೆ ಮೀಸಲಾಗಿಟ್ಟು ಕೆಲಸ ನಡಸುತ್ತ ಬಂದಂತೆ ಗೊತ್ತಾಗುತ್ತದೆ. ೧೯೩೬ರಲ್ಲಿ ಮೈಸೂರು ಸಂಸ್ಥಾನದ ದಿವಾನ್‌ರವರು ಈ ವಿಷಯವನ್ನು ಕುರಿತು ಮೇಲಿನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿರುತ್ತಾರೆ. ೧೯೩೬ರ ವರೆಗಿನ ಮೂವತ್ತು ವರ್ಷಗಳಲ್ಲಿ ಚಿನ್ನದ ಗಣಿಗಳಿಂದ ಬಂದ ರಾಜಾದಾಯ ಮತ್ತು ಗಂಧದ ಮರದ ಹಕ್ಕುದಾರಿಕೆ ಇವುಗಳಿಂದ ಸುಮಾರು ೭೩೪ ಲಕ್ಷ ರೂಪಾಯಿಗಳು ವಸೂಲಾಗಿರುವುದು. ಇದೇ ಅವಧಿಯಲ್ಲಿ ಸುಮಾರು ೫೦೦ ಲಕ್ಷ ರೂಪಾಯಿಗಳನ್ನು ನೀರಾವರಿ ಕೆಲಸಕ್ಕಾಗಿ ವಿನಿಯೋಗಿಸಿರುತ್ತದೆ. ಇವುಗಳಲ್ಲಿ ಕೆಲವು ಕಾಮಗಾರಿಗಳಿಂದ ಸರಕಾರಕ್ಕೆ ಸಲ್ಲುವ ದ್ರವ್ಯಾದಾಯ ಹೆಚ್ಚಾಗಿಲ್ಲದಿದ್ದರೂ, ರೈತನು ತನ್ನ ಆದಾಯವನ್ನು ಹೆಚ್ಚಿಸಿಕೊಳ್ಳುವುದಕ್ಕೂ, ಸಂಸ್ಥಾನದಲ್ಲಿ ಆಹಾರ ಸಾಮಗ್ರಿಗಳು ಹೇರಳವಾಗಿ ದೊರೆಯುವುದಕ್ಕೂ ಬೇಕಾದಷ್ಟು ಉತ್ತೇಜನ ದೊರಕಿರುತ್ತದೆ.

## ೨. ಸಾರ್ವಜನಿಕ ಸೌಕರ್ಯಕ್ಕಾಗಿ ನಡಸುವ ಉದ್ಯಮಗಳಿಂದ ಬರುವ ಆದಾಯ

ದೈವದತ್ತವಾದ ಸಂಪತ್ತನ್ನು ರೂಢಿಸಿ ಅದರಿಂದ ಬರುವ ಆದಾಯವನ್ನು ಪ್ರಜೆಗಳು ಅನುಭವಿಸುವಂತೆ ಕೆಲಸ ನಡಸುವ ಜವಾಬ್ದಾರಿ ಸರಕಾರಕ್ಕೆ ಸೇರಬೇಕಾದುದು ಸಹಜ. ಪ್ರಜಾಹಿತಕ್ಕಾಗಿ ಕೈಕೊಳ್ಳಬೇಕಾದ ಕೆಲವು ಉದ್ಯಮಗಳನ್ನು ಖಾಸಗಿಯಾಗಿ ನಡಸುವುದೂ ಉಂಟು; ಸರಕಾರದಿಂದಲೇ ಈ ಸೌಕರ್ಯಗಳು ದೊರೆಯುವಂತೆ ಏರ್ಪಾಡು ಮಾಡುವುದೂ ಉಂಟು. ನೀರಾವರಿ ಸೌಕರ್ಯ ಒದಗಿಸುವ ಕಾರ್ಯ ಅಮೇರಿಕ ದೇಶದ ಸಂಯುಕ್ತ ಸಂಸ್ಥಾನದಲ್ಲಿ ಖಾಸಗಿ ಉದ್ಯಮವಾಗಿರುತ್ತದೆ. ಇಂಡಿಯದಲ್ಲಿ ಕೆಲವು ರೈಲ್ವೆ ಉದ್ಯಮಗಳು,* ವಿದ್ಯುಚ್ಛಕ್ತಿ ಉದ್ಯಮಗಳು ಖಾಸಗಿ ರೂಪವನ್ನು ತಾಳಿರುತ್ತವೆ. ಷೇರುದಾರರ ಲಾಭ ಈ ಖಾಸಗಿ ಸಂಸ್ಥೆಗಳ ಗುರಿ. ಆದರೆ ಇವರು ಕೈಕೊಂಡ ಕಾರ್ಯದಿಂದ ಬರುವ ಸೌಕರ್ಯ ಸಾರ್ವಜನಿಕರಿಗೆ ಅಗತ್ಯವಾದುದರಿಂದ ಈ ಸಂಸ್ಥೆಗಳ ಮೇಲೆ ಸರಕಾರದ ಹತೋಟಿ ಹೆಚ್ಚಾಗಿರುತ್ತದೆ. ಮೈಸೂರು ದೇಶದಲ್ಲಿ ಬಹಳ ಮಟ್ಟಿಗೆ ಈ ವಿಧದ ಸೌಕರ್ಯಗಳನ್ನು ಒದಗಿಸುವ ಉದ್ಯಮಗಳ ಸ್ವಾಮ್ಯ ಸರಕಾರಕ್ಕೆ ಸೇರಿರುತ್ತದೆ. ಈ ಉದ್ಯಮಗಳು ಸಾಮಾನ್ಯವಾಗಿ ಪೈಪೋಟಿಗೆ ಸಿಕ್ಕದೆ ಕೆಲಸ ನಡೆಸುವ ಸಂಸ್ಥೆಗಳು. ಇವುಗಳನ್ನು ಸರಕಾರದ ಸ್ವಾಮ್ಯಕ್ಕೊಳಪಟ್ಟಿರುವ (Monopoly) ಉದ್ಯಮಗಳ ಗುಂಪಿಗೆ ಸೇರಿಸುವುದು ವಾಡಿಕೆಯಾಗಿದೆ.

---

* ಈಚೆಗೆ ಈ ಉದ್ಯಮಗಳು ಸರಕಾರದ ಆಡಳಿತಕ್ಕೇ ಸೇರಿರುತ್ತವೆ.

ಮೈಸೂರಿನ ರೈಲ್ವೆ ಇಲಾಖೆ, ಕೃಷ್ಣರಾಜಸಾಗರದ ನೀರಾವರಿ ಕಾಮಗಾರಿ, ಕುಡಿಯುವ ನೀರಿನ ಸರಬರಾಜು, ವಿದ್ಯುಚ್ಛಕ್ತಿ ಬಾಬು ಇವೇ ಮೊದಲಾದ ದೊಡ್ಡ ದೊಡ್ಡ ಸಾರ್ವಜನಿಕ ಉದ್ಯಮಗಳಿಂದ ಸರಕಾರಕ್ಕೆ ಬರುವ ನಿವ್ವಳ ವರಮಾನವನ್ನು ಬಡ್ಜೆಟ್ ಅಂದಾಜುಗಳಲ್ಲಿ ತೋರಿಸುವುದು ವಾಡಿಕೆಯಾಗಿದೆ. ಈ ಸೌಲಭ್ಯ ಗಳನ್ನು ಒದಗಿಸುವುದಕ್ಕಾಗಿ ಸರಕಾರ ಗೊತ್ತಾದ ಬೆಲೆಯನ್ನು ನಿರ್ಧರಿಸಿ ಈ ಬಾಬುಗಳಿಗಾಗಿ ತಗಲುವ ವೆಚ್ಚಕ್ಕಿಂತ ಹೆಚ್ಚಾದ ವರಮಾನವನ್ನು ಪಡೆಯುವುದು. ಇದೂ ಒಂದು ವಿಧದ ತೆರಿಗೆಯೆಂದು ಭಾವಿಸಬೇಕೆಂದು ಕೆಲವರು ವಾದಿಸಬಹುದು. ಈ ವಾದ ನ್ಯಾಯವಲ್ಲ. ಈ ಉದ್ಯಮಗಳಿಗೆ ಆಗುವ ವೆಚ್ಚದಷ್ಟೇ ಹುಟ್ಟುವಳಿ ಯಾಗುವಂತೆ ಅವುಗಳಿಂದ ದೊರೆಯುವ ಸೌಕರ್ಯಗಳಿಗೆ ದರಗಳನ್ನು ಗೊತ್ತು ಮಾಡುವುದು ಸಾಧ್ಯವಾಗುವುದಿಲ್ಲವೆಂಬ ಅಂಶವನ್ನು ನಾವು ಗಮನದಲ್ಲಿಡಬೇಕು. ತೆರಿಗೆಯು ಪ್ರತಿಫಲದ ಭರವಸೆ ಇಲ್ಲದೆ ಪ್ರಜೆಯು ತೆರುವ ಕಾಣಿಕೆ. ರೈಲ್ವೆ, ವಿದ್ಯುಚ್ಛಕ್ತಿ, ನೀರಾವರಿ ಇವುಗಳಿಗಾಗಿ ಸರಕಾರ ವಿಧಿಸುವ ದರಗಳು ಆ ಸೌಕರ್ಯ ಗಳ ಮಾರಾಟದ ಬೆಲೆ. ಪ್ರಜೆಗಳಿಗೆ ಸೌಕರ್ಯಗಳು ಬೇಡದಿದ್ದರೆ ಅವರಿಂದ ಈ ದರ ಗಳನ್ನು ವಸೂಲು ಮಾಡುವುದಿಲ್ಲ.

ಮೈಸೂರಿನಲ್ಲಿ ಸರಕಾರ ೭೪೮ ಮೈಲಿಗಳಷ್ಟು ರೈಲು ಮಾರ್ಗವನ್ನು ರಚಿಸಿ ಸುಮಾರು ೬೯ ಕೋಟಿ ರೂಪಾಯಿಗಳಷ್ಟು ಮೂಲಧನವನ್ನು ಹಾಕಿರುವ ರೈಲ್ವೆ ಉದ್ಯಮವನ್ನು ಕೈಕೊಂಡಿರುತ್ತದೆ. ೧೯೪೦-೪೧ನೆಯ ಸಾಲಿನಲ್ಲಿ ಉದ್ಯಮದ ಆಯವ್ಯಯದಿಂದ ಮೈಸೂರಿನಲ್ಲಿ ರೈಲ್ವೆಗಳಿಗಾಗಿ ವೆಚ್ಚವಾಗಿರುವ ಒಟ್ಟು ಮೂಲ ಧನಕ್ಕೆ ಶೇಕಡ ೩೯ಯಂತೆ ನಿವ್ವಳಲಾಭ ದೊರೆಯಿತು. ಈಗಿನ ಯುದ್ಧದ ವಿಶೇಷ ಘಟನೆಗಳಿಗೆ ಹಿಂದೆ ಇದ್ದಂತೆ ಮೈಸೂರು ರೈಲ್ವೆಗಳ ಆದಾಯಕ್ಕೆ ಸಂಬಂಧ ಪಟ್ಟ ಅಂಕಿಯನ್ನು ಇತರ ಸರಕಾರಿ ರೈಲ್ವೆಗಳೊಡನೆ ಹೋಲಿಸಿ ನೋಡಬಹುದು. ಇದರಲ್ಲಿ ಕಾಣುವ ವ್ಯತ್ಯಾಸಗಳಿಗೆ ಅನೇಕ ಕಾರಣಗಳಿರುವುವು.

## ನಿವ್ವಳ ರೈಲ್ವೆ ಆದಾಯ

(ಮೂಲಧನದ ಮೇಲೆ ಲೆಕ್ಕಾಚಾರಮಾಡಿದ ಶೇ. ದರ)

(೧೯೩೭-೩೮ ರಲ್ಲಿ)

| | | | |
|---|---|---|---|
| ಇಂಡಿಯ ಸರ್ಕಾರದ ರೈಲ್ವೆಗಳು | ... | ಶೇ. | ೪·೨ |
| ಹೈದರಾಬಾದು ಸಂಸ್ಥಾನದ ರೈಲ್ವೆಗಳು | ... | ,, | ೮·೩ |
| ಮೈಸೂರು ರೈಲ್ವೆಗಳು | ... | ,, | ೨·೯] |

ವಿದ್ಯುಚ್ಛಕ್ತಿ ಮತ್ತು ನೀರಾವರಿ ಕಾಮಗಾರಿಗಳಿಗೆ ೧೯೪೦-೪೧ ನೆಯ ವರ್ಷದವರೆಗೆ ವೆಚ್ಚವಾಗಿರುವ ಮೂಲಧನದ ರೂಪದ ಒಟ್ಟು ವೆಚ್ಚ

ಸುಮಾರು ೬೧೪·೩೪ ಲಕ್ಷ ರೂಪಾಯಿ. ೧೯೪೦ಕ್ಕೆ ಮುಂಚೆ ಈ ಎರಡು ಖಾತೆಗಳ ಲೆಕ್ಕಾಚಾರಗಳೂ ವಿಂಗಡಿಸಲ್ಪಡದೆ ಒಟ್ಟಾಗಿ ಸೇರಿಸಲ್ಪಟ್ಟಿದ್ದುವು. ಈಚೆಗೆ ಈ ಎರಡು ಲೆಕ್ಕಗಳನ್ನೂ ಪ್ರತ್ಯೇಕಿಸಿ ಬಡ್ಜೆಟ್ ಅಂದಾಜುಗಳಲ್ಲಿ ತೋರಿಸುವುದು ವಾಡಿಕೆಯಲ್ಲಿದೆ. ವೆಚ್ಚವಾಗಿರುವ ಒಟ್ಟು ೬೧೪ ಲಕ್ಷ ರೂಪಾಯಿಗಳಲ್ಲಿ ೩೩೮·೭೨ ಲಕ್ಷ ರೂಪಾಯಿ ನೀರಾವರಿ ಕೆಲಸಕ್ಕೂ, ೨೭೫·೭೨ ಲಕ್ಷ ರೂಪಾಯಿ ವಿದ್ಯುಚ್ಛಕ್ತಿ ಉದ್ಯಮಗಳಿಗೂ ವಿನಿಯೋಗವಾಗಿದೆಯೆಂದು ಲೆಕ್ಕಾಚಾರ ಮಾಡಲ್ಪಟ್ಟಿದೆ. ಮೂಲಧನದ ಮೇಲೆ ಸಲ್ಲುವ ಆದಾಯದ ದೃಷ್ಟಿಯಿಂದ ನೀರಾವರಿ ಕಾಮಗಾರಿ ಉದ್ಯಮದಲ್ಲಿ ಶೇ. ೧೪ರಂತೆಯೂ ವಿದ್ಯುಚ್ಛಕ್ತಿ ಉದ್ಯಮದಲ್ಲಿ ಶೇ. ೧೦ರಂತೆಯೂ ಸರಾಸರಿ ನಿವ್ವಳ ಆದಾಯ ದೊರೆಯುತ್ತದೆ. ಪಾಶ್ಚಾತ್ಯ ದೇಶಗಳನ್ನು ಬಿಟ್ಟರೆ, ವಿದ್ಯುಚ್ಛಕ್ತಿ ಕಾರ್ಯಗಳನ್ನು ಮೊದಲು ಕೈಕೊಂಡ ಕೀರ್ತಿ ಮೈಸೂರು ಸರ್ಕಾರಕ್ಕೆ ಸಲ್ಲುತದೆ. ಈ ಉದ್ಯಮದಿಂದ ಸರಕಾರ ವಿಶೇಷ ಹಣ ಸಂಪಾದಿಸಿರುವುದಲ್ಲದೆ, ದೇಶದ ಸಂಪದಭಿವೃದ್ಧಿಗೂ ಪ್ರಜೆಗಳ ಸೌಕರ್ಯಕ್ಕೂ ಹೆಚ್ಚಿನ ಸಹಾಯವೂ ದೊರಕಿದೆ. ಒಟ್ಟಿನಲ್ಲಿ ೧೯೪೦-೪೧ನೆಯ ವರ್ಷದ ಕೊನೆಯ ವರೆಗೆ ವಿದ್ಯುಚ್ಛಕ್ತಿ ಉದ್ಯಮಗಳಿಂದ ಸುಮಾರು ೬೮೭ ಲಕ್ಷ ರೂಪಾಯಿಗಳಷ್ಟು ನಿವ್ವಳ ಆದಾಯ ಸರಕಾರದ ಬೊಕ್ಕಸಕ್ಕೆ ಸೇರಿರುತ್ತದೆ.

## ೩. ಸರಕಾರದ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮಗಳ ಆದಾಯ

ಪ್ರಜೆಗಳಿಗೆ ಅತ್ಯವಶ್ಯಕವಾದ ನೀರು, ದೀಪ, ಪ್ರಯಾಣ ಸೌಕರ್ಯ ಮೊದಲಾದ ಅನುಕೂಲಗಳನ್ನು ಒದಗಿಸುವುದಕ್ಕಾಗಿ ಸಾರ್ವಜನಿಕ ಉದ್ಯಮಗಳನ್ನು ಸರಕಾರ ನಡಸುತ್ತದೆ. ಕನಿಷ್ಠ ಮಿತಿಯ ಲಾಭವನ್ನಿಟ್ಟು ಕಾರ್ಯವನ್ನು ನಡಸುವುದು ಈ ಉದ್ಯಮಗಳ ತತ್ವವೆನ್ನಬಹುದು. ಕೆಲವು ವೇಳೆ ಲಾಭ ಬಾರದಿದ್ದರೂ, ಈ ಕೆಲಸವನ್ನು ಸರಕಾರ ಕೈಕೊಳ್ಳಬೇಕಾಗುವುದು. ಇದು ಪ್ರಜಾಹಿತದೃಷ್ಟಿಯಿಂದ ಅನಿವಾರ್ಯ. ಆದರೆ ಸರಕಾರ ಲಾಭ ಸಂಪಾದನೆಗಾಗಿ ಕೆಲವು ಕೈಗಾರಿಕೆ ಮತ್ತು ವಾಣಿಜ್ಯೋದ್ಯಮಗಳನ್ನು ಸ್ಥಾಪಿಸಿ ನಡಸುವುದು ಈಚೆಗೆ ರೂಢಿಗೆ ಬಂದಿದೆ. ಉದ್ಯಮಗಳನ್ನು ನಡಸಿ ಅಲ್ಲಿ ತೇಲುವ ಲಾಭದಿಂದ ಸರಕಾರಕ್ಕೆ ಬೇಕಾಗುವ ಹಣವನ್ನು ಕೂಡಿಸುವುದು ಸಾರ್ವಜನಿಕ ಆಯವ್ಯಯದ ನೀತಿಯಲ್ಲಿ ಒಂದು ಸ್ಥಾನವನ್ನು ಈಚೆಗೆ ಪಡೆದಿದೆ. ಕೈಗಾರಿಕೆಗಳಿಂದ ಬೇರೆ ಅನುಕೂಲಗಳೂ ಪ್ರಜೆಗಳಿಗೆ ದೊರೆಯುತ್ತವೆ. ಆದರೆ ಈ ಉದ್ಯಮಗಳ ಮುಖ್ಯ ಆಶಯವು ಲಾಭ ಸಂಪಾದನೆ ಎಂದು ಹೇಳಬಹುದು. ಮೈಸೂರು ಸರಕಾರದಲ್ಲಿ ಈ ನೀತಿಗೆ ತಕ್ಕ ಪ್ರಾಶಸ್ತ್ಯವು ದೊರೆತಿದೆ.

ಈ ರೀತಿ ನಡೆಯುವ ವಾಣಿಜ್ಯ ಸಂಸ್ಥೆಗಳಲ್ಲಿ ಮುಖ್ಯವಾದುದು ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ. ಈ ಉದ್ಯಮಕ್ಕಾಗಿ ೧೯೪೦ರ ವರೆಗೆ

ಸರಕಾರ ಸುಮಾರು ೨೮೭ ಲಕ್ಷ ರೂ.ಗಳಷ್ಟು ಮೂಲಧನವನ್ನು ವಿನಿಯೋಗಿಸಿದೆ. ಇದರಲ್ಲಿ ೮೭ ಲಕ್ಷ ರೂ.ಗಳನ್ನು ಖೋತಮಾಡಿ ೧೯೫೦-೫೧ನೆಯ ಬಡ್ಜೆಟ್ಟಿನಲ್ಲಿ ಭದ್ರಾವತಿಗಾಗಿ ವೆಚ್ಚವಾಗಿರುವ ಮೂಲಧನ ೨೦೦·೬೧ ಲಕ್ಷ ರೂಪಾಯಿಗಳೆಂದು ತೋರಿಸಿರುತ್ತದೆ. ಈ ಉದ್ಯಮದಿಂದ ಕಳೆದ ಮೂರು ನಾಲ್ಕು ವರ್ಷಗಳವರೆಗೂ ನಷ್ಟವೇ ಆಗಿ, ಈಚೆಗೆ ಲಾಭ ಬಂದಿರುವಂತೆ ಲೆಕ್ಕಾಚಾರದಿಂದ ತಿಳಿಯುತ್ತದೆ. ೧೯೩೬ರಲ್ಲಿ ಉಕ್ಕಿನ ಕಾರ್ಖಾನೆಯನ್ನೂ ಸೇರಿಸಿ ಕೆಲಸ ನಡಸುತ್ತಿರುವುದರಿಂದ ಇನ್ನುಮುಂದೆ ಈ ಕಾರ್ಖಾನೆಯಿಂದ ನಷ್ಟದ ಭಯವಿರಲಾರದೆಂದು ತಿಳಿದವರು ಹೇಳುತ್ತಾರೆ. ಭದ್ರಾವತಿಯ ವಿಷಯದಲ್ಲಿ ಆಗಾಗ ಕಟುವಾದ ಟೀಕೆಗಳು ಬಂದಾಗ ಈ ಉದ್ಯಮದಿಂದ ಮೈಸೂರಿನ ಪ್ರಜೆಗಳಿಗೆ ಕೈಗಾರಿಕೆ ವಿದ್ಯೆಯಿಂದ ದೊರೆತ ಸೌಕರ್ಯಗಳ ದೃಷ್ಟಿ ಮುಖ್ಯವೆಂದು ಉತ್ತರ ಬಂದಿರುತ್ತದೆ. ಇದೂ ಅಲ್ಲದೆ ಭದ್ರಾವತಿ ನಮ್ಮ ದೇಶದ ಕೈಗಾರಿಕೆಯ ಕೇಂದ್ರಸ್ಥಾನವಾಗಿ ಈಚೆಗೆ ಅಭಿವೃದ್ಧಿಗೆ ಬಂದು ಸೀಮೆಂಟ್, ಕಾಗದದ ಕಾರ್ಖಾನೆ ಇವೇ ಮೊದಲಾದ ಉದ್ಯಮಗಳಿಗೆ ಆಸರೆಯನ್ನು ಕೊಟ್ಟಿರುತ್ತದೆ. ಬಡ್ಜೆಟ್ ಅಂದಾಜುಗಳಲ್ಲಿ ಕಬ್ಬಿಣ, ಉಕ್ಕು ಮತ್ತು ಸೀಮೆಂಟ್ ಕಾರ್ಖಾನೆಗಳನ್ನು ಒಟ್ಟುಗೂಡಿಸಿ ಆದಾಯ ತೋರಿಸುವುದು ವಾಡಿಕೆಯಲ್ಲಿದೆ.

ಹಲವಾರು ಸಣ್ಣ ಕೈಗಾರಿಕೆ ಉದ್ಯಮಗಳಿಗಾಗಿ ಸರಕಾರ ಸುಮಾರು ೨೪ ಲಕ್ಷ ರೂಪಾಯಿಗಳನ್ನು ಮೂಲಧನದ ರೂಪದಲ್ಲಿ ಒದಗಿಸಿರುತ್ತದೆ. ಇದರಿಂದ ೧೯೫೦-೫೧ರಲ್ಲಿ ೮೮,೫೦೦ ರೂಪಾಯಿಗಳಷ್ಟು ಲಾಭ ನಿರೀಕ್ಷಿಸಲ್ಪಟ್ಟಿತ್ತು. ಇದರಿಂದ ಮೂಲಧನದ ಮೇಲೆ ಶೇಕಡ ೩·೬ ರಂತೆ ಲಾಭ ದೊರೆತಂತಾಯಿತು. ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕ್‌ಷಾಪ್, ಪೋರ್ಸಿಲೇನ್ ಮತ್ತು ಎಲೆಕ್ಟ್ರಿಕ್ ಕಾರ್ಖಾನೆಗಳು, ಇಂಡಸ್ಟ್ರಿಯಲ್ ಮತ್ತು ಟೆಸ್ಟಿಂಗ್ ಲ್ಯಾಬರೇಟರಿ, ಅರಗು ಮತ್ತು ಬಣ್ಣದ ಕಾರ್ಖಾನೆ-ಇವೇ ಮೊದಲಾದ ಉದ್ಯಮಗಳಿಂದ ಸರಕಾರ ತನಗೆ ಬೇಕಾದ ಸರಕುಗಳನ್ನು ಸುಲಭವಾಗಿ ಪಡೆಯುವುದು. ಇವುಗಳ ಪೈಕಿ ಇಂಡಸ್ಟ್ರಿಯಲ್ ಮತ್ತು ಟೆಸ್ಟಿಂಗ್ ಲ್ಯಾಬರೇಟರಿ ಸಂಸ್ಥೆಯು ಈಚಿಗೆ ಖಾಸಗಿ ಕಂಪೆನಿಯ ಆಡಳಿತಕ್ಕೆ ವರ್ಗಮಾಡಲ್ಪಟ್ಟಿದೆ.

ಮೈಸೂರು ಸರಕಾರ ಕೈಗಾರಿಕೆಗಳಿಗೆ ಉತ್ತೇಜನ ಕೊಡುವ ಉದ್ದೇಶದಿಂದ ಈಚಿನ ಹತ್ತಿಪ್ಪತ್ತು ವರ್ಷಗಳಲ್ಲಿ ಖಾಸಗಿ ಉದ್ಯಮಗಳಲ್ಲಿ ಪಾಲುಗಾರಿಕೆ ಮಾಡಿಕೊಂಡು ಗೊತ್ತಾದ ಷೇರು ಬಂಡವಾಳವನ್ನು ಒದಗಿಸಿ ಕೆಲವು ಲಾಭ ಸಂಪಾದಿಸಿ ಸಾರ್ವಜನಿಕ ವರಮಾನವನ್ನು ಪಡೆದಿರುತ್ತದೆ. ಸಕ್ಕರೆ, ಕಾಗದ ಮತ್ತು ಹೊಗೇಸೊಪ್ಪಿನ ಕಾರ್ಖಾನೆಗಳನ್ನು ಉದಾಹರಣೆಗಳಾಗಿ ಸೂಚಿಸಬಹುದು.

ಬೆಂಗಳೂರು ಮತ್ತು ಕೋಲಾರದ ಗಣಿಪ್ರದೇಶಕ್ಕೆ ಕುಡಿಯುವ ನೀರನ್ನು ಒದಗಿಸುವ ಉದ್ಯಮವನ್ನು ಲಾಭದಾಯಕವಾದ ಸರಕಾರಿ ಉದ್ಯಮಗಳ ಗುಂಪಿಗೆ ಸೇರಿಸಬಹುದು.

## ೪. ಇಲಾಖೆ ವಸೂಲಿ ಮತ್ತು ಚಿಲ್ಲರೆ ಬಾಬು

ತೆರಿಗೆ ಗುಂಪಿಗೆ ಸೇರದ ವರಮಾನದ ಬಾಬುಗಳಲ್ಲಿ ಉಳಿದಿರುವುದು ಬಡ್ಡಿ, ಇಲಾಖಾ ಜಮಾ ಮತ್ತು ಬೆಂಗಳೂರು ದಂಡಿನ ಪ್ರದೇಶದಿಂದ ಮೈಸೂರು ಸರಕಾರಕ್ಕೆ ಸಲ್ಲುವ ಹೆಚ್ಚಿಗೆ ಹುಟ್ಟುವಳಿ.

ಸರಕಾರ ಬ್ಯಾಂಕುಗಳಂತೆ ಇತರರಿಗೆ ಕೊಡುವ ಸಾಲ ಮತ್ತು ಮುಂಗಡಗಳ ಮೇಲೆ ವಸೂಲಾಗುವ ಬಡ್ಡಿಯೂ ಪ್ರತ್ಯೇಕವಾಗಿ ಕೂಡಿಟ್ಟಿರುವ ಅಪದ್ಧನಗಳಿಗೆ ಪ್ರತಿವರ್ಷವೂ ಸಲ್ಲುವ ಬಡ್ಡಿಯೂ ಈ ಗುಂಪಿಗೆ ಸೇರುತ್ತವೆ. ಖಾಸಗಿ ಕಂಪೆನಿಗಳಲ್ಲಿ ಪಡೆದ ಷೇರುಗಳಿಗಾಗಿ ಪಡೆಯುವ ಲಾಭಾಂಶವನ್ನೂ ಇದೇ ಗುಂಪಿಗೆ ಸೇರಿಸಬಹುದು. ಗೆಜೆಟ್, ಸರಕಾರದ ಪ್ರಕಟಣೆಗಳು, ಜಫ್ತಿ, ಜುಲ್ಮಾನೆ, ಆಸ್ಪತ್ರೆಗಳಿಂದ ಬರುವ ಫೀ ವರಮಾನ, ವಿದ್ಯಾಭ್ಯಾಸದ ಖಾತೆಯಿಂದ ಬರುವ ಫೀ ವರಮಾನ—ಇವೆಲ್ಲವನ್ನೂ ಇಲಾಖೆ ವಸೂಲಿಯೆಂದು ಸರಕಾರ ಪರಿಗಣಿಸುತ್ತದೆ. ಸರಕಾರದ ಕಾರ್ಯಕ್ಷೇತ್ರದ ವಿಸ್ತಾರಕ್ಕನುಗುಣವಾಗಿ ಈ ಬಾಬಿನ ವರಮಾನವನ್ನು ಹೆಚ್ಚಿಸುವುದಕ್ಕಾಗುವುದಿಲ್ಲ. ಅಧಿಕಾರಿಗಳ ಅಜಾಗರೂಕತೆಯಿಂದ ಈ ಬಾಬಿನಿಂದ ಬರುವ ವರಮಾನ ಕಡಿಮೆಯಾಗುವ ಅವಕಾಶವುಂಟು. ಲೆಕ್ಕಪರಿಶೋಧನೆ ಕ್ರಮದಲ್ಲಿ ಸುಧಾರಣೆ ಆದಹಾಗೆಲ್ಲ ಇಲಾಖೆ ಜಮದ ವಿಷಯದಲ್ಲಿ ಸರಕಾರ ಹೆಚ್ಚಿನ ಹತೋಟಿ ಇಡುವುದು ಸಾಧ್ಯವಾಗುತ್ತದೆ.

ಬೆಂಗಳೂರು ದಂಡಿನ ಹೆಚ್ಚಿಗೆ ಹುಟ್ಟುವಳಿಯಿಂದ ಮೈಸೂರು ಸರಕಾರಕ್ಕೆ ಸಲ್ಲುವ ವರಮಾನ ಅತ್ಯಲ್ಪವಾಗಿರುತ್ತದೆ. ಈ ಪ್ರದೇಶವನ್ನು ಹಿಂದೆ ಇಂಡಿಯ ಸರಕಾರಕ್ಕೆ ವಹಿಸಿದಾಗ ಇಲ್ಲಿಯ ಆಡಳಿತದಿಂದ ಬರುವ ಹುಟ್ಟುವಳಿಯಲ್ಲಿ ವೆಚ್ಚವನ್ನು ಕಳೆದು ಉಳಿಯುವ ಹಣವನ್ನು ಮೈಸೂರು ಸರಕಾರಕ್ಕೆ ಸಲ್ಲಿಸಬೇಕೆಂದು ಒಪ್ಪಂದವಾಯಿತು. ಸರಕಾರದ ಬಡ್ಜೆಟ್ ಅಂದಾಜುಗಳಲ್ಲಿ ಈ ಬಾಬಿನಿಂದ ವಸೂಲಾದ ಹಣವನ್ನು ಪ್ರತ್ಯೇಕವಾಗಿ ನಮೂದಿಸುತ್ತಾರೆ. ಈಚಿನ ರಾಜಕೀಯ ಸ್ಥಿತಿ ಧಾರಣೆಗಳ ಪರಿಣಾಮವಾಗಿ ಈ ಪದ್ಧತಿ ಅವಶ್ಯಕವಿರುವುದಿಲ್ಲ.

———

# ಪ್ರಕರಣ ೬

## ಸಾರ್ವಜನಿಕ ಸಾಲ ಮತ್ತು ಸರಕಾರದ ಹಣಕಾಸಿನ ಸ್ಥಿತಿ.

ಸರಕಾರದ ಜಮಾ ಖರ್ಚುಗಳನ್ನು (೧) ಹುಟ್ಟುವಳಿ ಮತ್ತು ವೆಚ್ಚಕ್ಕೆ ಸಂಬಂಧಪಟ್ಟ ಭಾಗ; (೨) ಮೂಲಧನ ಮತ್ತು ಸಾಲದ ಭಾಗವೆಂದು ಎರಡು ವಿಧವಾಗಿ ವಿಂಗಡಿಸುವುದು ರೂಢಿಯಲ್ಲಿದೆ. ಇದುವರೆಗೆ ಮೊದಲನೆಯ ಭಾಗಕ್ಕೆ ಸಂಬಂಧಪಟ್ಟಂತೆ ಮೈಸೂರಿನ ಸಾರ್ವಜನಿಕ ಆಯವ್ಯಯದ ಸ್ಥಿತಿಯನ್ನು ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ಸಾಲದ ಭಾಗಕ್ಕೆ ಸಂಬಂಧಪಟ್ಟ ಹಣಕಾಸಿನ ವ್ಯವಸ್ಥೆಯನ್ನು ಕುರಿತು ಕೆಲವು ಮುಖ್ಯ ಅಂಶಗಳನ್ನು ಸೂಚಿಸಿರುತ್ತದೆ. ಲಾಭದಾಯಕವಾದ ಕಾಮಗಾರಿ ಕಾರ್ಯಗಳನ್ನು ನಡೆಯಿಸಿ, ಸಂಸ್ಥಾನಕ್ಕೆ ಹುಟ್ಟುವಳಿ ಬರುವಂತೆ ಆಸ್ತಿಯ ರೂಪದ ಸಾಧನಗಳನ್ನು ಏರ್ಪಡಿಸಲು ಮಾಡಿರುವ ವೆಚ್ಚದ ವಿಷಯ, ಮತ್ತು ಈ ವೆಚ್ಚಕ್ಕೆ ಸಾಮಾನ್ಯವಾಗಿ ಯಾವ ಬಾಬುಗಳಿಂದ ಹಣ ಒದಗಿಸಲ್ಪಟ್ಟಿದೆ ಎಂಬ ವಿಷಯಗಳನ್ನು ಇಲ್ಲಿ ಪರಿಶೀಲಿಸಿರುತ್ತದೆ.

ವ್ಯವಸಾಯ, ಸಹಕಾರ, ಕೈಗಾರಿಕೆ ಮತ್ತು ವಾಣಿಜ್ಯಶಾಖೆಗಳು ಮೈಸೂರಿನ ಪ್ರಜೆಗಳ ದಿನಚರಿ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲು ಶ್ರಮಿಸುತ್ತವೆ. ಇದಕ್ಕಿಂತಲೂ ಹೆಚ್ಚಾಗಿ ನಮ್ಮ ಸರಕಾರ ಕೋಟ್ಯಾಂತರ ರೂಪಾಯಿಗಳನ್ನು ದೊಡ್ಡ ದೊಡ್ಡ ಲಾಭದಾಯಕವಾದ ಕಾರ್ಯಗಳಿಗಾಗಿ ವಿನಿಯೋಗಿಸುತ್ತ ಬಂದಿದೆ. ಕೈಗಾರಿಕೆ ಉದ್ಯಮಗಳಿಗಾಗಿ, ಸ್ವಂತ ಬಂಡವಾಳವನ್ನು ಒದಗಿಸಿ ಅವುಗಳ ಸ್ಥಾಪನೆ ಮತ್ತು ಹತೋಟಿಯ ಜವಾಬ್ದಾರಿಯನ್ನು ಸರಕಾರವೇ ಸ್ವಂತವಾಗಿ ವಹಿಸುವುದು, ಖಾಸಗೀ ಉದ್ಯಮಗಳಿಗೆ ಒಂದು ಭಾಗ ಬಂಡವಾಳವನ್ನು ಒದಗಿಸಿ ಪ್ರೋತ್ಸಾಹಿಸುವುದು, ಈ ಎರಡು ಬಗೆಯ ಕಾರ್ಯರಚನೆಯನ್ನೂ ಅನುಸರಿಸಿದೆ. ವಾಣೀವಿಲಾಸ ಸಾಗರ, ಕೃಷ್ಣರಾಜಸಾಗರ ಮೊದಲಾದ ದೊಡ್ಡ ನೀರಾವರಿ ಉದ್ಯಮಗಳು, ಶಿಂಶಾ, ಜೋಗು, ಶಿವನಸಮುದ್ರ ಮೊದಲಾದ ವಿದ್ಯುಚ್ಛಕ್ತಿ ಉದ್ಯಮಗಳು, ಮೈಸೂರು ರೈಲ್ವೆ ಸೌಲಭ್ಯ, ರಸ್ತೆ, ಸೇತುವೆ ಮತ್ತು ಕಟ್ಟಡಗಳ ನಿರ್ಮಾಣ, ಇತರ ಕೈಗಾರಿಕೆ ಕಾರ್ಖಾನೆಗಳು—ಇವೆಲ್ಲಕ್ಕೂ ಬಂಡವಾಳವನ್ನು ಒದಗಿಸಿ, ದೇಶದ ಸಂಪದಭಿವೃದ್ಧಿಗೆ ಸಹಾಯವಾಗುವಂತೆ ಮೈಸೂರಿನ ಸರಕಾರದ ಆಯವ್ಯಯ ಕ್ರಮ ರೂಪಗೊಂಡಿರುತ್ತದೆ.

ದೇಶದ ಸುಖಸಂಪತ್ತುಗಳನ್ನು ವೃದ್ಧಿಗೊಳಿಸುವ ಉದ್ಯಮಗಳಿಗೆ ಬೇಕಾಗುವ ಬಂಡವಾಳ ಅಗಾಧವಾದದ್ದು. ಪ್ರತಿವರ್ಷವೂ ಈ ಕೆಲಸಗಳಿಗೆ ನಮ್ಮ ಸರಕಾರ ಲಕ್ಷಾಂತರ ರೂಪಾಯಿಗಳನ್ನು ವಿನಿಯೋಗಿಸುತ್ತಿದೆ. ಸರಕಾರದ ವಾರ್ಷಿಕ ಹುಟ್ಟುವಳಿಯಿಂದ ಇದನ್ನು ಒದಗಿಸುವುದು ಸಾಧ್ಯವಲ್ಲ. ಪ್ರತಿ ವರ್ಷವೂ

ಸರಕಾರ ಖರ್ಚಿನಲ್ಲಿ ಉಳಿತಾಯಮಾಡಿ, ದುಡ್ಡು ಕೂಡಿಹಾಕಿ ಈ ಉದ್ಯಮಗಳನ್ನು ಕೈಗೊಳ್ಳುವುದೆಂದರೆ ಪ್ರಜಾವರ್ಗವು ನೂರಾರು ವರ್ಷಗಳು ಈ ಸೌಲಭ್ಯಗಳನ್ನು ಅನುಭವಿಸದೆ ಹೀನಸ್ಥಿತಿಯಲ್ಲಿಯೇ ಇರಬೇಕಾದೀತು. ಇದರಿಂದಲೇ ಸಾರ್ವಜನಿಕ ಸಾಲ ಸರಕಾರದ ಹಣಕಾಸಿನ ವ್ಯವಸ್ಥೆಯಲ್ಲಿ ಮುಖ್ಯಭಾಗವೆಂದು ಪರಿಗಣಿಸಲ್ಪಟ್ಟಿದೆ.

ಹೆಚ್ಚು ಬಂಡವಾಳ ಹಾಕಿ ನಡೆಸಬೇಕಾದ ಕಾರ್ಯಕ್ರಮಗಳಿಗೋಸ್ಕರ ಜನರಿಂದ ಎತ್ತುವ ಪ್ರತ್ಯಕ್ಷ ವಾಯಿದೆಸಾಲ ಸರಕಾರದ ದೇಣಿಗಳಲ್ಲಿ ಒಂದು ಭಾಗ ಮಾತ್ರ. ಬಜೆಟ್ ತಪಶೀಲುಗಳಲ್ಲಿ ಇದನ್ನು "ಖಾಯಂಸಾಲ" ವೆಂದು ಕರೆಯುವುದು ರೂಢಿಯಲ್ಲಿದೆ. ಇದನ್ನು ಕಾಲಕ್ಕೆ ಸರಿಯಾಗಿ ತೀರಿಸಲು ಸಾಲ ತೀರ್ವೆ ನಿಧಿಯನ್ನು ಏರ್ಪಡಿಸಿ, ಈ ನಿಧಿಗೆ ವರ್ಷದ ಹುಟ್ಟುವಳಿಯಿಂದ ಒಂದು ನಿಶ್ಚಿತ ಮೊಬಲಗನ್ನು ಸೇರಿಸುವರು. ಈ ವಿಧದ ನಿಧಿಯಿಲ್ಲದೆ ಕೂಡಿಸುವ ಸರಕಾರದ ದೇಣಿಗಳು ಹಲವಾರುಂಟು. ಸರಕಾರದ ಸೇವಿಂಗ್ಸ್ ಬ್ಯಾಂಕಿನ ಡಿಪಾಜಿಟ್ ದೇಣಿ ಎರಡನೆಯ ಗುಂಪಿಗೆ ಸೇರಿದೆ. ಮೂರನೆಯದಾಗಿ ಸಾಲಗಳ ತೀರ್ವೆಯನಿಧಿ, ಕ್ಷಾಮನಿವಾರಣೆನಿಧಿ, ವಿದ್ಯುಚ್ಛಕ್ತಿ, ರೈಲ್ವೆ ಮೊದಲಾದ ಸರಕಾರದ ಕೈಗಾರಿಕೆ ಉದ್ಯಮಗಳಲ್ಲಿ ಶೇಖರಿಸುವ ಇಳಿವರಿಕಿಮ್ಮತು ಭರ್ತಿನಿಧಿಗಳು ಇವುಗಳೂ ಒಂದು ದೃಷ್ಟಿಯಿಂದ ಸರಕಾರದ ದೇಣಿಯ ಭಾಗಗಳಾಗಿವೆ. ಒಂದು ವರ್ಷದಲ್ಲಿ ಆಡಳಿತ ಅಥವಾ ಇತರ ಸಾರ್ವಜನಿಕ ವೆಚ್ಚಕ್ಕೆ ಈ ನಿಧಿಯಿಂದ ಅಲ್ಪಸ್ವಲ್ಪ ಹಣವನ್ನು ತೆಗೆದುಕೊಂಡು, ಸಾಧ್ಯವಾದಷ್ಟು ಬೇಗ ಆ ಹಣವನ್ನು ಅದೇ ನಿಧಿಗೆ ಹಿಂತಿರುಗಿಸುವುದೂ ವಾಡಿಕೆಯಲ್ಲಿದೆ. ಹುಟ್ಟುವಳಿಯಿಂದ ಕೂಡಿಸುವ ನಿಧಿಗಳಿಂದ ಸಾಮಾನ್ಯ ವೆಚ್ಚಕ್ಕಾಗಿ ಹಣವನ್ನು ಉಪಯೋಗಿಸುವುದು ಸಾಧ್ಯವಲ್ಲವೆಂದು ಹಿಂದೆ ತಿಳಿಸಿದೆ.

ಸಾರ್ವಜನಿಕ ಸಾಲದ ಸ್ಥಿತಿಯನ್ನು ತಿಳಿಯಲು, ಸರಕಾರದ ಆಸ್ತಿಯಲ್ಲುಂಟಾಗುವ ಬದಲಾವಣೆಗಳನ್ನೂ ತಿಳಿಯಬೇಕು. ಕಳೆದ ಇಪ್ಪತ್ತು ವರ್ಷಗಳಲ್ಲಿ * ಸರಕಾರದ ದೇಣಿ ಮತ್ತು ಆಸ್ತಿ ಇವುಗಳ ಸ್ಥಿತಿಯಲ್ಲಿ ಉಂಟಾಗಿರುವ ಹಣಕಾಸಿನ ಬದಲಾವಣೆಯನ್ನು ಇಲ್ಲಿ ಕೊಟ್ಟಿರುವ ಅಂಕಿಗಳು ಸೂಚಿಸುತ್ತವೆ.

---

* ೧೯೪೦–೪೧ ರಿಂದೀಚಿನ ಹತ್ತು ವರ್ಷಗಳಲ್ಲಿ ಯುದ್ಧದ ಪರಿಣಾಮದಿಂದ ಆದ ಬದಲಾವಣೆ ಮತ್ತು ೧೯೪೭ರ ರಾಜಕೀಯ ಸುಧಾರಣೆಗಳಿಂದ ಮೈಸೂರು ಸರಕಾರಕ್ಕೂ ಇಂಡಿಯಾ ಸರಕಾರಕ್ಕೂ ಈಚೆಗೆ ಆಗಿರುವ ಹಣಕಾಸಿನ ಒಪ್ಪಂದಗಳಿಂದ ಉಂಟಾದ ಬದಲಾವಣೆಗಳಿಂದ ಇಲ್ಲಿನ ಅಂಕಿ ಅಂಶಗಳು ಬಹಳಮಟ್ಟಿಗೆ ಬದಲಾಯಿಸಿರುತ್ತವೆ.

ಮೈಸೂರು ಸರಕಾರದ ದೇಣಿಗಳು (ಲಕ್ಷ ರೂಪಾಯಿಗಳು)

| ಸಾಲದ ಬಾಬು | ೧೯೨೦-೨೧ | ೧೯೩೦-೩೧ | ೧೯೪೦-೪೧ |
|---|---|---|---|
| ೧. ಬಾಯಂ ಸಾಲ (೧೯೧೦-೧೧ ರಲ್ಲಿ ೨೦ ಲಕ್ಷ ರೂಪಾಯಿಗಳು ಮಾತ್ರ). | ೩೦೯·೨೬ | ೮೪೨·೪೨ | ೭೩೮·೮೩ |
| ೨. ತೀರ್ವೆಗಾಗಿ ಪ್ರತ್ಯೇಕವಾಗಿ ಫಂಡು ಏರ್ಪಡಿಸಿರುವ ಸಾಲದ ಮೊತ್ತ. | ೧೫೩·೨೬ | ೩೭೭·೩೫ | ೬೪೨·೯೩ |
| ೩. ಸ್ಥಳೀಯ ಸಂಸ್ಥೆಗಳ ಮತ್ತು ಇತರ ನಿಧಿಗಳು. | ೮೩·೮೯ | ೬೧·೦೫ | ೧೪೭·೫೩ |
| ೪. ಠೇವಣಾತಿಗಳು ... | ೧೫೮·೩೫ | ೨೧೫·೫೪ | ೩೨೮·೯೩ |
| ೫. ಇತರ ... | ೧೨·೨೬ | ೩೫·೦೪ | ೭೭·೧೮ |
| ಒಟ್ಟು ... | ೭೧೭·೦೩ | ೧೫೩೧·೪೦ | ೧೯೩೫·೪೦ |

ಮೈಸೂರು ಸರಕಾರದ ಆಸ್ತಿ (ಲಕ್ಷ ರೂಪಾಯಿಗಳು)

| ಬಾಬುಗಳು | ೧೯೨೦-೨೧ | ೧೯೩೦-೩೧ | ೧೯೪೦-೪೧ |
|---|---|---|---|
| ೧. ನಗದು ಹಾಜರಿ ಮತ್ತು ಇನ್ವೆಸ್ಟ್‌ಮೆಂಟುಗಳು. | ೪೧೨·೪೫ | ೭೬೦·೪೨ | ೭೭೪·೬೯ |
| ೨. ಬಂಡವಾಳ ಹಾಕಿ ವೃದ್ಧಿಗೊಳಿಸಿರುವ ಉದ್ಯಮಗಳು. | ೮೯೩·೧೬ | ೧೪೦೩·೩೦ | ೧೯೮೬·೩೪ |
| ೩. ಚಿಲ್ಲರೆ. | ... | ... | ೧೦·೧೯ |
| ಒಟ್ಟು ... | ೧೩೦೫·೬೧ | ೨೧೬೩·೭೨ | ೨೭೭೧·೨೨ |

ಬಂಡವಾಳ ಹಾಕಿ ವೃದ್ಧಿಗೊಳಿಸುವ ಉದ್ಯಮಗಳ ಸ್ಥಿತಿಯನ್ನು ವಿಶದವಾಗಿ ತಿಳಿಯಲು ಅವುಗಳಿಗೆ ಒದಗಿಸಿರುವ ಬಂಡವಾಳದ ಬದಲಾವಣೆಯನ್ನು ಪ್ರತ್ಯೇಕವಾಗಿ ತಿಳಿಸಿರುತ್ತದೆ.

| ಬಂಡವಾಳ ಹಾಕಿರುವ ಉದ್ಯಮಗಳು. | ೧೯೨೦-೨೧ | ೧೯೩೦-೩೧ | ೧೯೪೦-೪೧ |
|---|---|---|---|
| | | (ಲಕ್ಷ ರೂ. ಗಳು) | |
| ೧. ಮೈಸೂರು ರೈಲ್ವೆ ... | ೪೩೮·೦೦ | ೫೬೫·೧೧ | ೬೭೬·೪೪ |
| ೨. ಕೃಷ್ಣರಾಜಸಾಗರದ ನೀರಾವರಿ ಕಾಮಗಾರಿಗಳು | ೧೯೫·೯೬ | ೩೮೭·೫೦ | ೩೭೯·೭೪ |
| ೩. ವಿದ್ಯುಚ್ಛಕ್ತಿ ಉದ್ಯಮಗಳು ... | ೧೪೨·೮೭ | ೨೬೯·೫೩ | ೬೩೦·೭೪ |
| ೪. ಕೈಗಾರಿಕೆ ಉದ್ಯಮಗಳು ... | ೨೬·೧೩ | ೪೮·೨೪ | ೧೨೦·೧೧ |
| ೫. ಭದ್ರಾವತಿ ಕಾರ್ಖಾನೆಗಳು ... | ೯೦·೨೧ | ೧೨೬·೮೯ | ೧೭೯·೩೧ |
| ಒಟ್ಟು ... | ೮೯೩·೧೬ | ೧೪೦೩·೩೦ | ೧೯೮೬·೩೪ |

ಮೇಲಿನ ಅಂಕಿ ಪಟ್ಟಿಗಳನ್ನು ವಿಮರ್ಶಿಸಿದರೆ, ಸರಕಾರದ ದೇಣಿಗಳು ಹೆಚ್ಚಿರುವಂತೆ, ಸಾರ್ವಜನಿಕ ಸ್ವತ್ತುಗಳ ಸ್ಥಿತಿಯು ಕಳೆದ ಇಪ್ಪತ್ತು ವರ್ಷಗಳಲ್ಲಿ ಉತ್ತಮಗೊಂಡಿರುವುದು ಸ್ಪಷ್ಟವಾಗುವುದು. ದೇಣಿಗಳು ಹೆಚ್ಚಿದ ಮಾತ್ರದಿಂದಲೇ ಸರಕಾರದ ಹಣಕಾಸಿನ ಪರಿಸ್ಥಿತಿ ಹತೋಟಿ ಮೀರಿದೆಯೆಂಬ ಭಯಕ್ಕೆ ಕಾರಣವಿಲ್ಲ. ಸರಕಾರದ ಹೊಣೆ ಹೆಚ್ಚುವ ಪ್ರಮಾಣವನ್ನೂ, ಸಾರ್ವಜನಿಕ ಆಸ್ತಿ ಸ್ವತ್ತುಗಳು ರೂಢಿಸಲ್ಪಡುವ ಮಾರ್ಗವನ್ನೂ ಸಾರ್ವಜನಿಕ ಸಾಲದ ಉಪಯೋಗದಿಂದ ಜನ ಜೀವನದಲ್ಲುಂಟಾಗುವ ಬದಲಾವಣೆಯ ಗುಣಾವಗುಣಗಳನ್ನೂ ಒಟ್ಟುಗೂಡಿಸಿ ವಿಮರ್ಶಿಸಬೇಕು. ಮೈಸೂರು ಸರಕಾರ ದೇಣಿ ಜವಾಬ್ದಾರಿಯನ್ನು ಹೆಚ್ಚಿಸಿ ಕೊಂಡಿದ್ದರೂ ಇದಕ್ಕಿಂತಲೂ ಮಿಗಿಲಾಗಿ ತನ್ನ ಆಸ್ತಿರೂಪದ ಸ್ವತ್ತುಗಳನ್ನು ರೂಢಿಸಿ ತನ್ನ ವಶದಲ್ಲಿರುವ ಹಣವನ್ನು ಸರಿಯಾದ ರೀತಿಯಲ್ಲಿ ವಿನಿಯೋಗಿಸಿರು ವುದೂ ಮೇಲಿನ ಅಂಕಿ ಅಂಶಗಳಿಂದ ತಿಳಿಯುವುದು. ದೇಣಿ ಮತ್ತು ಆಸ್ತಿ ರೂಪದ ಸ್ವತ್ತುಗಳಿಗಿರುವ ಪ್ರಮಾಣವನ್ನು ಪ್ರತ್ಯೇಕವಾಗಿ ಇಲ್ಲಿ ಕೊಟ್ಟಿರುವ ಪಟ್ಟಿ ಸೂಚಿಸುತ್ತದೆ:—

| | | ೧೯೨೦-೨೧ | ೧೯೩೦-೩೧ | ೧೯೪೦-೪೧ |
|---|---|---|---|---|
| ೧. | ಮೈಸೂರು ಸರಕಾರದ ಒಟ್ಟು ದೇಣಿ ... | ಲಕ್ಷ ರೂ.ಗಳು<br>೭೧೬·೦೩ | ಲಕ್ಷ ರೂ.ಗಳು<br>೧೫೩೧·೪೦ | ಲಕ್ಷ ರೂ.ಗಳು<br>೧೯೩೫·೪೦ |
| ೨. | ಒಟ್ಟು ಆಸ್ತಿರೂಪದ ಸ್ವತ್ತುಗಳು ... | ೧೩೦೫·೬೧ | ೨೧೬೩·೭೨ | ೨೬೭೧·೨೨ |
| ೩. | ಆಸ್ತಿರೂಪದ ಸ್ವತ್ತುಗಳ ಹೆಚ್ಚಿಗೆ ... | ೫೮೮·೫೮ | ೬೩೨·೩೨ | ೮೩೫·೮೨ |
| ೪. | ಆಸ್ತಿರೂಪದ ಸ್ವತ್ತುಗಳಲ್ಲಿ ದೇಣಿಯ ಶೇಕಡ ಭಾಗ ... | ೫೫ | ೭೧ | ೭೧ |

ಸರಕಾರದ ಋಣ ಭಾರ ಅದರ ಆಸ್ತಿಪಾಸ್ತಿಗಳ ಮುಕ್ಕಾಲು ಭಾಗಕ್ಕೆ ಕಮ್ಮಿಯಾಗಿರುತ್ತದೆ. ಮೇಲೆ ಹೇಳಿರುವ ಆಸ್ತಿರೂಪದ ಸ್ವತ್ತುಗಳ ಪಟ್ಟಿ ಸರಕಾರದ ಸಮಸ್ತ ಸ್ವತ್ತುಗಳನ್ನೂ ಒಳಗೊಂಡಿಲ್ಲ. ವ್ಯವಸಾಯಯೋಗ್ಯವಾದ ಭೂಮಿಯ ವಿಸ್ತರಣೆ, ಸಂಪದ್ಯುಕ್ತವಾದ ಕಾಡುಗಳು, ಕಟ್ಟಡಗಳು, ಕಾರ್ಖಾನೆ ಗಳು, ಸಲಕರಣೆ ಸಾಮಗ್ರಿಗಳು, ರಸ್ತೆ, ಹುಟ್ಟುವಳಿಯಿಂದಕ್ಕೆಕೊಂಡು ನಿರ್ಮಿಸಿರುವ ನೀರಾವರಿ ಕಾಮಗಾರಿಗಳು, ಇವೇ ಮೊದಲಾದ ಸ್ವತ್ತುಗಳ ಬೆಲೆಯನ್ನು ಮೇಲಿನ ಪಟ್ಟಿಯಲ್ಲಿ ಸೇರಿಸಿಲ್ಲ.

೧೯೨೫-೨೬ರಿಂದೀಚೆಗೆ ಸರಕಾರದ ದೇಣಿ ಜವಾಬ್ದಾರಿ ಹೆಚ್ಚಾಗಿ ಬೆಳೆ ಯಿತು. ೧೯೨೦-೨೧ರಿಂದ ೧೯೨೫-೨೬ರ ವರೆಗಿನ ಐದು ವರ್ಷಗಳ ಅವಧಿ ಯಲ್ಲಿ ಸರಕಾರದ ಖಾಯಂ ಸಾಲ ೨೦೬ ಲಕ್ಷ ರೂಪಾಯಿಗಳಷ್ಟೂ, ಒಟ್ಟು ಹೊಣೆ ೪೦೯ ಲಕ್ಷಗಳಷ್ಟೂ ಹೆಚ್ಚಿತು. ೧೯೨೫-೨೬ರಿಂದ ೧೯೩೦-೩೧ರ

ವರೆಗಿನ ಐದು ವರ್ಷಗಳ ಅವಧಿಯಲ್ಲಿ ಖಾಯಂ ಸಾಲ ೩೨೧೯ ಲಕ್ಷ ರೂಪಾಯಿಗಳಷ್ಟೂ ಒಟ್ಟು ದೇಣಿ ೪೦೫ ಲಕ್ಷ ರೂ.ಗಳಷ್ಟೂ ಹೆಚ್ಚಿತು. ಈಚಿನ ಹದಿನೈದು ಹದಿನಾರು ವರ್ಷಗಳಲ್ಲಿ ಲಾಭದಾಯಕವಾದ ರೀತಿಯಲ್ಲಿ ವಿನಿಯೋಗಿಸಲ್ಪಟ್ಟ ಮೂಲಧನದ ಮೊಬಲಗು ಸುಮಾರು ಎಂಟೂವರೆ ಕೋಟಿ ರೂಪಾಯಿಗಳಷ್ಟು ಹೆಚ್ಚಿತು. ಸರಕಾರಕ್ಕೆ ಹಣಕೊಟ್ಟವರು ಕೇಳಿದಾಗ ಹಿಂತಿರುಗಿಕೊಡಲು ಸಾಧ್ಯವಾಗುವ ರೀತಿ ನಗದು ಹಾಜರಿ ಮತ್ತು ಠೇವಣಾತಿಗಳನ್ನು ಕೂಡಿಸಿಕೊಂಡು ಲಾಭದಾಯಕವಾದ ಉದ್ಯಮಗಳಿಗೆ ಶೇಖರಿಸಿದ ಹಣವನ್ನು ಉಪಯೋಗಿಸಿಕೊಂಡು, ಸರಕಾರದ ತೆರಿಗೆಯಲ್ಲದ ವರಮಾನವು ಹೆಚ್ಚುವ ರೀತಿಯಲ್ಲಿ ಸಾರ್ವಜನಿಕ ಸಾಲದ ಕಾರ್ಯಕ್ರಮ ನಮ್ಮ ಸರಕಾರದಲ್ಲಿ ನಡೆದಿದೆ ಎಂಬುದು ಕೆಳಗಿನ ಅಂಕಿಗಳಿಂದ ಸ್ವಲ್ಪಮಟ್ಟಿಗೆ ಸ್ಪಷ್ಟವಾಗುವುದು :—

| | ೧೯೨೦-೨೧ | ೧೯೩೦-೩೧ | ೧೯೪೦-೪೧ |
|---|---|---|---|
| ೧. ನಗದು ಹಾಜರಿ ಮತ್ತು ಲಾಭದಾಯಕವಾದ ರೀತಿಯಲ್ಲಿ ಹಣವನ್ನು ಇತರ ಕಡೆ ಶೇಖರಿಸುವುದು ಸೇರಿ ಒಟ್ಟು ಸರಕಾರದ ದೇಣಿಯಲ್ಲಿನ ಶೇಕಡ ಭಾಗ ... | ೫೨·೫ | ೪೯·೭ | ೪೦·೦ |
| ೨. ಸರಕಾರದ ಉದ್ಯಮಗಳಲ್ಲಿನ ಮೂಲಧನ ಒಟ್ಟು ಸಾರ್ವಜನಿಕ ಆಸ್ತಿರೂಪದ ಸ್ವತ್ತುಗಳ ಜೆಲಿಯಲ್ಲಿನ ಶೇಕಡ ಭಾಗ ... | ೬೮·೪ | ೬೫·೦ | ೭೧·೭ |
| ೩. ಸರಕಾರದ ಲಾಭದಾಯಕವಾದ ಉದ್ಯಮಗಳಲ್ಲಿರುವ ಮೂಲಧನದ ಒಟ್ಟು ಮೊಬಲಗು, ಸರಕಾರದ ಒಟ್ಟು ದೇಣಿ ಶೇಕಡ ಭಾಗ ... | ೯೪·೬ | ೯೧·೬ | ೯೨·೬ |

ಮೈಸೂರು ಸರಕಾರ ಅನುಸರಿಸಿರುವ ಸಾರ್ವಜನಿಕ ಸಾಲದ ನೀತಿ ಫಲಕಾರಿಯಾಗಿರುತ್ತದೆಂಬ ವಿಷಯವನ್ನು ಮತ್ತೊಂದು ದೃಷ್ಟಿಯಿಂದ ನೋಡಬಹುದು. ಸಾಲಗಳಿಂದ ನಿರ್ಮಿಸಲ್ಪಟ್ಟ ಆಸ್ತಿಪಾಸ್ತಿಗಳಿಂದ ಬರುವ ವರಮಾನದ ಬೆಳವಣಿಗೆಯನ್ನೂ ದೇಣಿಗಳಿಂದ ತೇಲುವ ವೆಚ್ಚವನ್ನೂ ಒಂದರಪಕ್ಕದಲ್ಲೊಂದಿಟ್ಟು ನೋಡುವುದರಿಂದ ಈ ಅಂಶ ಸ್ಪಷ್ಟವಾಗದಿರದು.

ಆಸ್ತಿರೂಪದ ಸ್ವತ್ತುಗಳಿಂದ ಬರುವ ವರಮಾನದ ಬೆಳವಣಿಗೆ
(ಲಕ್ಷ ರೂಪಾಯಿಗಳು)

| | ೧೯೨೦-೨೧ | ೧೯೩೦-೩೧ | ೧೯೪೦-೪೧ |
|---|---|---|---|
| ೧. ಸಾಲ ಮತ್ತು ಮುಂಗಡಗಳ ಮೇಲಿನ ಬಡ್ಡಿ ... | ೦·೯೯ | ೧·೨೬ | ೩·೫೪ |
| ೨. ಬಡ್ಡಿ ತೆರುವ ಠೇವಣಾತಿಗಳ ಆದಾಯ ... | ೯·೧೫ | ೧೭·೫೦ | ೧೫·೦೯ |
| ೩. ಮೂಲಧನದ ಬಾಬಿನಿಂದ ಬರುವ ನಿವ್ವಳ ಆದಾಯ | ೩೨·೩೬ | ೪೧·೯೯ | ೭೯·೯೪ |
| ಒಟ್ಟು ... | ೪೨·೩೦ | ೬೦·೭೫ | ೯೮·೫೭ |

ದೇಣಿಗಳ ಬಾಬತು ವಹಿಸಬೇಕಾದ ವೆಚ್ಚದ ಬೆಳವಣಿಗೆ
(ಲಕ್ಷ ರೂಪಾಯಿಗಳಲ್ಲಿ)

| | ೧೯೨೦-೨೧ | ೧೯೩೦-೩೧ | ೧೯೪೦-೪೧ |
|---|---|---|---|
| ೧. ಖಾಯಂ ಸಾಲದ ಬಡ್ಡಿ ... | ೫ ೭೨ | ೩೬·೫೨ | ೩೨·೯೨ |
| ೨. ಇತರ ದೇಣಿಗಳಿಗಾಗಿ ತೆರುವ ಬಡ್ಡಿ ... | ೧೨·೨೩ | ೧೭·೦೨ | ೧೯·೭೮ |
| ಒಟ್ಟು ... | ೧೭·೯೫ | ೫೩·೫೪ | ೫೨·೭೦ |

ಖಾಯಂ ಸಾಲವಲ್ಲದ ಇತರ ದೇಣಿಗಳ ಮೇಲೆ ಸರಕಾರ ತೆರಬೇಕಾದ ಬಡ್ಡಿಯೂ, ಸರಕಾರಕ್ಕೆ ತಾನು ಕೊಟ್ಟಿರುವ ಮುಂಗಡಗಳ ಬಾಬ್ತು ಬರುವ ಬಡ್ಡಿ ಮತ್ತು ಠೇವಣಾತಿಗಳಿಂದ ಬರುವ ಬಡ್ಡಿ ಇವೆರಡರ ಹುಟ್ಟುವಳಿಗೆ ಸಮನಾದಂತಿದೆ. ಖಾಯಂಸಾಲದಿಂದುಂಟಾದ ವೆಚ್ಚದ ಬೆಳವಣಿಗೆಗಿಂತಲೂ ಅದರಿಂದ ನಿರ್ಮಿತವಾದ ವಾಣಿಜ್ಯೋದ್ಯಮಗಳಿಂದ ಹೆಚ್ಚಿನ ಹಣ ಸರಕಾರದ ಬೊಕ್ಕಸಕ್ಕೆ ಬರುತ್ತಿದೆ. ೧೯೪೦-೪೧ರಲ್ಲಿ ಈ ಉದ್ಯಮಗಳಿಗಾಗಿ ಉಪಯೋಗಿಸಿರುವ ಸಾರ್ವಜನಿಕ ಸಾಲದ ಬಡ್ಡಿಯ ಬಾಬ್ತು ಖರ್ಚು ಕಳೆದು ಸುಮಾರು ೪೫ ಲಕ್ಷ ರೂ.ಗಳಷ್ಟು ವರಮಾನ ಸರಕಾರದ ಸಾಮಾನ್ಯ ವೆಚ್ಚಗಳಿಗೆ ಒದಗಿದಂತೆ ಲೆಕ್ಕಾಚಾರದಿಂದ ಗೊತ್ತಾಗುತ್ತದೆ.

ನಮ್ಮ ಸಂಸ್ಥಾನದಲ್ಲಿ ೧೮೮೨ರಲ್ಲಿ ಕ್ಷಾಮನಿವಾರಣೆಗಾಗಿ ಮುಖ್ಯಸಾಧನವೆಂದು ಭಾವಿಸಿದ ರೈಲುಮಾರ್ಗವನ್ನು ಹಾಕಲು ಮೊದಲು ೨೦ ಲಕ್ಷ ರೂಪಾಯಿ

ಗಳನ್ನು ಸಾಲವಾಗಿ ಕೂಡಿಸುವ ಯೋಜನೆಯನ್ನು ಸರಕಾರ ಅಂಗೀಕರಿಸಿತು. ಈ ಸಾಲವನ್ನು ೧೯೦೩-೧೯೦೪ರಲ್ಲಿ ಸಾಲಕೊಟ್ಟವರಿಗೆ ಹಿಂತಿರುಗಿ ಕೊಟ್ಟು, ೧೯೦೬-೭ರಲ್ಲಿ ಪುನಃ ೨೦ ಲಕ್ಷ ರೂಪಾಯಿನ ಸಾಲವನ್ನು ಸರಕಾರದವರು ಪಡೆದರು. ಇಲ್ಲಿಂದೀಚೆಗೆ ಸಾರ್ವಜನಿಕ ಸಾಲದ ವಿಷಯದಲ್ಲಿ ಸರಕಾರದ ಅಭಿಪ್ರಾಯದ ಬದಲಾವಣೆ ಪ್ರಾರಂಭಿಸಿತೆನ್ನಬಹುದು. ಸಾಲಮಾಡಿ ರೈಲು, ವಿದ್ಯುಚ್ಛಕ್ತಿ ಮತ್ತು ನೀರಾವರಿ ಉದ್ಯಮಗಳಿಗೆ ತಕ್ಕ ಉತ್ತೇಜನ ಕೊಡುವುದರಲ್ಲಿ ಅಭ್ಯಂತರವಿಲ್ಲವೆಂಬ ತತ್ವಕ್ಕೆ ಅಲ್ಲಿಂದೀಚೆಗೆ ಒಂದು ಬಗೆಯ ಮನ್ನಣೆ ದೊರೆಯಿತು. ಆದರೂ ಸಾಲವೆಂದರೆ ಒಂದು ವಿಧದ ಭೀತಿ ಮಾತ್ರ ತಪ್ಪಿರಲಿಲ್ಲ. ೧೯೨೦-೨೧ಕ್ಕೆ ಮುಂಚೆ ಮೈಸೂರು ಸರಕಾರದ ಖಾಯಂ ಸಾಲದ ಮೊತ್ತ ಎರಡು ಕೋಟಿ ರೂಪಾಯಿಗಳನ್ನು ಮುಟ್ಟಿರಲಿಲ್ಲ. ಅಲ್ಲಿಂದೀಚೆಗೆ ಸರಕಾರದ ಸಾಲದ ನೀತಿಯಲ್ಲಿ ಗೊತ್ತಾದ ಕ್ರಮ ಕಾಣುವುದಲ್ಲದೆ, ಒಂದು ವಿಧದ ಧೈರ್ಯವೂ ಕಂಡುಬರುತ್ತದೆ. ೧೯೨೦ಕ್ಕೆ ಮುಂಚೆ ಎರಡು ಕೋಟಿಗೆ ಕಡಿಮೆ ಇದ್ದ ಸಾಲದ ಮೊತ್ತ ೧೯೨೧-೨೨ರಲ್ಲಿ ಐದು ಕೋಟಿ ಹತ್ತು ಲಕ್ಷ ರೂಪಾಯಿಗಳಿಗೇರಿತು. ೧೯೩೦-೩೧ರಿಂದ ಸಾರ್ವಜನಿಕ ಸಾಲದ ನೀತಿಗೂ, ಖಾಸಗಿ ಜನಗಳ ಸಾಲದ ನೀತಿಗೂ ಅನ್ವಯಿಸುವ ನಿಯಮಗಳು ಬೇರೆಬೇರೆ ಎಂಬ ತತ್ವವನ್ನು ಸರಕಾರ ಅನುಸರಿಸಿರುತ್ತದೆ. ೧೯೩೦-೩೧ರಲ್ಲಿ ಸಾರ್ವಜನಿಕ ಸಾಲದ ಮೊತ್ತ ಎಂಟು ಕೋಟಿ ನಲವತ್ತೆರಡು ಲಕ್ಷ ರೂ.ಗಳಿಗೇರಿತು. ೧೯೩೬-೩೭ರಲ್ಲಿ ಒಂಬತ್ತು ಕೋಟಿ ಏಳೂವರೆ ಲಕ್ಷ ರೂಪಾಯಿಗಳಷ್ಟು ಸಾಲವಿತ್ತು. ೧೯೩೮-೩೯ರಲ್ಲಿ ಸಾಲ ಪರಿವರ್ತನೆ ಮತ್ತು ಸಾಲ ತೀರ್ವೆ ಕ್ರಮದಿಂದ ಸುಮಾರು ೭೫ ಲಕ್ಷ ರೂಪಾಯಿಗಳಷ್ಟು ಸಾಲ ಕಡಿಮೆಯಾಯಿತು. ಬಡ್ಡಿ ರೂಪದ ಹೊರೆಯೂ ಇಳಿಯಿತು. ೧೯೪೦ರಲ್ಲಿ ಸುಮಾರು ೧೦೨ ಲಕ್ಷ ರೂಪಾಯಿಗಳಷ್ಟು ಸಾಲ ತೀರಿ ೧೯೪೦-೪೧ರಲ್ಲಿ ಸಾರ್ವಜನಿಕ ಸಾಲದ ಮೊತ್ತ ಸುಮಾರು ಏಳು ಕೋಟಿ ಮೂವತ್ತೊಂಬತ್ತು ಲಕ್ಷ ರೂಪಾಯಿಗಳಿಗಿಳಿಯಿತು. ಹೀಗೆ ಹೆಚ್ಚುತ್ತಿರುವ ಸಾರ್ವಜನಿಕ ಸಾಲದಿಂದ ಸರಕಾರದ ಹಣಕಾಸಿನ ಸ್ಥಿತಿಯು ಹದಗೆಟ್ಟಿಲ್ಲವೆಂದು ಧಾರಾಳವಾಗಿ ಹೇಳಬಹುದು. ಯಾವುದೋ ಒಂದೆರಡು ವರ್ಷಗಳಲ್ಲಿ ಪ್ರಪಂಚದಲ್ಲಿ ಉಂಟಾಗುವ ವಿಪ್ಲವಗಳು ಅಥವಾ ಅನಿವಾರ್ಯಗಳಿಂದ ಸಾಲದ ಮೊಬಲಗನ್ನು ಸಾಧಾರಣ ವೆಚ್ಚಕ್ಕೆ ಉಪಯೋಗಿಸಿದ ಮಾತ್ರದಿಂದಲೇ ಸಾಲದ ಕಾರ್ಯಕ್ರಮವನ್ನು ಉಗ್ರವಾಗಿ ಟೀಕಿಸುವುದು ಸರಿಯಲ್ಲ. ಎಲ್ಲ ಸಂದರ್ಭಗಳಲ್ಲಿಯೂ ಆಡಳಿತವನ್ನು ದಕ್ಷತೆಯಿಂದ ನಿರ್ವಹಿಸುವುದು ಸರಕಾರದ ಜವಾಬ್ದಾರಿ. ವಿಶೇಷ ಪರಿಸ್ಥಿತಿಯಲ್ಲಿ ಅಸಾಧಾರಣವಾದ ಹಣಕಾಸಿನ ಕಾರ್ಯಕ್ರಮ ಅನಿವಾರ್ಯವಾಗಬಹುದು.

ಸಾಲದ ಹೊರೆಯ ಪ್ರಮಾಣ ಹೇಗೆ ಬದಲಾವಣೆ ಹೊಂದಿದೆ ಎಂಬುದನ್ನು ಇನ್ನು ವಿಚಾರಿಸೋಣ. ಸಾಲದ ಹೊರೆಯನ್ನು ಹಣಕಾಸಿನ ದೃಷ್ಟಿಯಿಂದ ಅಳೆಯುವುದರಲ್ಲಿ ಸಾಲತೀರ್ವೆನಿಧಿಗಾಗಿ ಹುಟ್ಟುವಳಿಯಿಂದ ತೆಗೆದಿಡುವ ಹಣ ಮತ್ತು ಸಾಲದ ಬಡ್ಡಿ ಇವೆರಡನ್ನೂ ಕೂಡಿಸಬೇಕು.

## ಮೈಸೂರು ಸಾರ್ವಜನಿಕ ಸಾಲದ ಹೊರೆ

| ವರ್ಷ | ಸಾಲದ ಬಡ್ಡಿ (ಲಕ್ಷ ರೂ.) | ಸಾಲತೀರ್ಪಿನ ನಿಧಿಗಾಗಿ ತೆಗೆದಿಟ್ಟ ಹಣ (ಲಕ್ಷ ರೂ.) | ಒಟ್ಟು | ಒಟ್ಟು ಮೊಬಲಗು ಸರಕಾರದ ವೆಚ್ಚದಲ್ಲಿನ ಶೇಕಡ ಪ್ರಮಾಣ |
|---|---|---|---|---|
| ೧೯೨೦–೨೧ | ೫·೭೨ | ೩·೮೧ | ೯·೫೩ | ೨·೮ |
| ೧೯೩೦–೩೧ | ೩೭·೫೨ | ೧೮·೭೮ | ೫೫·೩೦ | ೧೩·೯ |
| ೧೯೪೦–೪೧ | ೩೨·೯೨ | ೧೮·೭೮ | ೫೧·೭೦ | ೧೧·೪ |

ಹೆಚ್ಚುತ್ತಿರುವ ಸಾಲಕ್ಕೆ ತಕ್ಕಂತೆ ಸಾಲದ ಹೊರೆ ಹೆಚ್ಚುತ್ತಿರುವುದೂ ಮೇಲಿನ ಅಂಕಿಗಳಿಂದ ಸ್ಪಷ್ಟವಾದರೂ ಸಾಲಪಡೆದ ಹಣದ ಸದುಪಯೋಗದಿಂದ ಸರಕಾರದ ಸಾಮಾನ್ಯ ವೆಚ್ಚಕ್ಕೆ ವರ್ಷಕ್ಕೆ ನಲವತ್ತು ಲಕ್ಷ ರೂಪಾಯಿಗಳಷ್ಟು ನಿವ್ವಳ ವರಮಾನ ದೊರಕುವುದು. ಒಟ್ಟು ವೆಚ್ಚದಲ್ಲಿ ಸಾಲದ ಹೊರೆಯು ಪ್ರಮಾಣ ಈಚೆಗೆ ತಗ್ಗಿರುವುದನ್ನು ನಾವು ಗಮನಿಸಬೇಕು. ಮೈಸೂರಿನ ತೆರಿಗೆದಾರನಿಗೆ ಇದು ಸರಕಾರದ ಹಣಕಾಸಿನ ಆಡಳಿತದಲ್ಲಿರುವ ನೀತಿ ಕುಶಲತೆಯ ಸಂಭಾವನೆ. ಮಿಕ್ಕ ದೇಶಗಳನ್ನು ಹೋಲಿಸಿದರೆ ನಮ್ಮ ಸರಕಾರದ ಋಣಭಾರ ಬಹುಮಟ್ಟಿಗೆ ಕಡಮೆ ಎಂಬುದು ಗೊತ್ತಾಗುವುದು. ಎಲ್ಲ ದೇಣಿಗಳನ್ನು ತೆಗೆದುಕೊಂಡು ನೋಡಿದರೆ ಅದರ ಪ್ರಮಾಣವು ಸರಕಾರದ ವಾರ್ಷಿಕ ವರಮಾನದ ೪ರಷ್ಟು ಆಗುವುದು. ಕೇವಲ ಸಾರ್ವಜನಿಕ ಸಾಲವನ್ನು ತೆಗೆದುಕೊಂಡರೆ ವಾರ್ಷಿಕ ವರಮಾನದ ೧·೭ ರಷ್ಟು ಆಗುವುದು. ಇಂಗ್ಲೆಂಡ್ ದೇಶದಲ್ಲಿರುವ ಸಾರ್ವಜನಿಕ ಸಾಲ ಅಲ್ಲಿನ ಸರಕಾರದ ವಾರ್ಷಿಕ ಹುಟ್ಟುವಳಿಯ ೯ರಷ್ಟು, ಸಂಯುಕ್ತ ಸಂಸ್ಥಾನದಲ್ಲಿ ೮ ರಷ್ಟು, ಜಪಾನಿನಲ್ಲಿ ೧೨ ರಷ್ಟು, ಇಂಡಿಯಾದಲ್ಲಿ ೫·೭ ರಷ್ಟು ಇದೆ.

ಸರಕಾರದ ವರಮಾನವನ್ನು ಹೆಚ್ಚಿಸಲು ತೊಂದರೆ ಇರುವ ಕಾಲದಲ್ಲೂ, ವರಮಾನ ಕುಗ್ಗುವ ಸಂಭವ ಒದಗಿದ ಕಾಲದಲ್ಲೂ ಸಾಲದ ಭಾರದ ವಿಚಾರದಲ್ಲಿ ಹಣಕಾಸಿನ ಆಡಳಿತ ಸೂತ್ರ ಹಿಡಿದವರಿಗೆ ಚಿಂತೆಗೆ ಅವಕಾಶವಾಗುವುದು ಸಹಜ. ೧೯೩೧ರಲ್ಲಿ ಆರ್ಥಿಕ ಮುಗ್ಗಟ್ಟಿನಿಂದ ಸರಕಾರದ ವರಮಾನ ಇಳಿದುಹೋದಾಗ ನಿಯಮಿಸಲ್ಪಟ್ಟ ಶ್ರೀ ಚಂದ್ರಶೇಖರಯ್ಯರ್ ಖರ್ಚು ಖೋತ ಸಮಿತಿಯವರು (೧) ಸಾರ್ವಜನಿಕ ಸಾಲದ ಮೊತ್ತ ಹೆಚ್ಚೆಂದೂ, (೨) ಅಲ್ಲಿಂದ ಮುಂದೆ ಹತ್ತು ವರ್ಷಗಳು ಸರಕಾರ ಸಾಲಮಾಡಕೂಡದೆಂದೂ, (೩) ಲಾಭ ತರುವ ಮೂಲಧನದ ರೂಪದ ವೆಚ್ಚದ ವಿಷಯದಲ್ಲೂ ಸರಕಾರ ದೀರ್ಘ ಪರ್ಯಾಲೋಚನೆ ಮಾಡಿ ಕಾರ್ಯಕ್ರಮ ನಡೆಸಬೇಕೆಂದೂ, (೪) ಆ ವಿಧದ ಖರ್ಚನ್ನು ಯಾವ ವರ್ಷದಲ್ಲೂ ೪೦ ಲಕ್ಷ ರೂಪಾಯಿಗಳಿಗೆ ಮೀರಿ ಮಾಡಬಾರದೆಂದೂ ಸೂಚಿಸಿದರು. ಈ ಸಲಹೆಗಳು ಸದುದ್ದೇಶದಿಂದಲೇ ಮಾಡಲ್ಪಟ್ಟವು. ಆದರೂ ಸಾಹಸ ಮತ್ತು ಧೈರ್ಯದಿಂದ ಪ್ರಜಾಸೌಖ್ಯವನ್ನು ವೃದ್ಧಿಗೊಳಿಸಬೇಕೆಂದು ದುಡಿಯುವ ಸರಕಾರ ಲಾಭದಾಯಕವಾದ ಮೂಲಧನದ ವೆಚ್ಚದ ವೈವಾಟನ್ನು ಯಾವುದೋ ಒಂದು ಸಂದರ್ಭದಲ್ಲಿ

ನಿರ್ಧರಿಸಿದ ಮಿತಿಗೆ ಕಟ್ಟಿಹಾಕುವುದು ಸಾಧುವಲ್ಲ. ಈ ವಿಧದ ಮನೋಭಾವನೆಯನ್ನು ಸ್ವಲ್ಪ ಸಂಕುಚಿತ ಭಾವನೆಯೆಂದರೂ ತಪ್ಪಾಗಲಾರದು. ಸಾಲದ ಹಂಚಿಕೆ ಮತ್ತು ಮಿತಿ, ಸಾಲಕ್ಕೆ ತೆರಬೇಕಾದ ಬಡ್ಡಿಯ ದರ, ಸಾಲದ ಉದ್ದೇಶ, ಉದ್ಯಮಗಳಿಂದ ಒದಗಬಹುದಾದ ವರಮಾನ ಮತ್ತು ಪ್ರಜಾಸೌಕರ್ಯ——ಇವುಗಳನ್ನು ಅನುಸರಿಸಬೇಕು. ಹೀಗಿರುವುದರಿಂದ ಸಮಿತಿಯ ವರದಿಯನ್ನು ಅನುಮೋದಿಸಿ ಮೈಸೂರು ಸರಕಾರ ಸಮಿತಿ ಸೂಚಿಸಿದ ಸೂತ್ರವನ್ನು ಸಾಧ್ಯವಾದಷ್ಟು ಅನುಸರಿಸಲಾಗುವುದೆಂದು ೧೯೩೬-೩೭ ರಲ್ಲಿ ತಿಳಿಸಿದರು. ಹಿಂದಿನ ಪ್ರಕರಣಗಳಲ್ಲಿ ತಿಳಿಸಿರುವಂತೆ ಸಾರ್ವಜನಿಕ ಹಣಕಾಸಿನ ಆಡಳಿತ ಕೇವಲ ಕೆಲವು ಸೂತ್ರಗಳಲ್ಲಿ ಅಡಗುವ ಮತ್ತು ಅಳತೆ ಮಾಡಬಲ್ಲ ಶಾಸ್ತ್ರ ಮಾತ್ರವಲ್ಲ. ಅದೊಂದು ಕಲೆ. ಸರಕಾರಕ್ಕೆ ಪ್ರತಿದಿನವೂ ಲಕ್ಷೋಪಲಕ್ಷ ರೂಪಾಯಿಗಳ ಜಮಾಖರ್ಚುಗಳಿವೆ. ಒಂದು ಸನ್ನಿವೇಶದಲ್ಲಿ ಸರಕಾರದ ದೇಣಿಗಳೆಷ್ಟು ಇದ್ದರೂ ಅವನ್ನು ತೀರಿಸುವುದು ಹಣಕಾಸಿನ ಆಡಳಿತ ಪ್ರೌಢಿಮೆಗೆ ಎಲ್ಲೆ ಮೀರಿದ್ದಲ್ಲವೆಂಬ ಅಂಶವನ್ನು ನಾವು ನೆನಪಿನಲ್ಲಿಡಬೇಕು.

ಸಾಧ್ಯವಾದ ಸಂದರ್ಭಗಳಲ್ಲೆಲ್ಲಾ ಮೈಸೂರು ಸರಕಾರ ಇಲ್ಲಿನ ಸಾಲದ ಹೊರೆಯನ್ನು ತಗ್ಗಿಸಲು ಪ್ರಯತ್ನಪಟ್ಟಿರುವುದು ಕೆಳಗೆ ಹೇಳುವ ಅಂಶಗಳಿಂದ ಸ್ಪಷ್ಟವಾಗುವುದು. ೧೯೪೦ರಲ್ಲಿ ೧.೦೨ ಲಕ್ಷ ರೂಪಾಯಿಗಳಷ್ಟು ಸಾಲವನ್ನು ತೀರಿಸಿದ ಸಂದರ್ಭದಲ್ಲಿ ಸಾಲತೀರ್ವೆನಿಧಿಗಾಗಿ ಶೇಖರಿಸುವ ಹಣದಲ್ಲಿ ವರ್ಷಕ್ಕೆ ಮೂರುವರೆ ಲಕ್ಷ ರೂಪಾಯಿ ಉಳಿಯಿತು. ಇದನ್ನು ಸಾಧಾರಣ ವೆಚ್ಚಕ್ಕೆ ವಿನಿಯೋಗಿಸಿಕೊಳ್ಳದೆ ಆದಷ್ಟು ಜಾಗ್ರತೆ ಸಾಲದ ಹೊರೆಯನ್ನು ತಗ್ಗಿಸಬೇಕೆಂದು ಸಾಲತೀರ್ವೆನಿಧಿಯ ವಾರ್ಷಿಕ ಕಂತನ್ನು ಹಿಂದಿನಂತೆಯೇ ಉಳಿಸಿರುವರು. ಸಾಲತೀರ್ವೆನಿಧಿಯ ತೇವಣಾತಿಗಳಿಂದ ಬರುವ ಬಡ್ಡಿ ಮೊದಲಾದ ವರಮಾನವನ್ನು ಸಾಮಾನ್ಯವೆಚ್ಚಕ್ಕೆ ಉಪಯೋಗಿಸದೆ, ಹಾಗೆ ಬಂದ ಹಣವನ್ನು ತೀರ್ವೆನಿಧಿಗೆ ಸೇರಿಸುವ ಉದ್ದೇಶವೂ ಸರಕಾರದ ನೀತಿಯನ್ನು ಸ್ಪಷ್ಟಪಡಿಸುತ್ತದೆ.

ಸಾಲದ ಹೊರೆಯನ್ನು ತಗ್ಗಿಸುವ ಮತ್ತೊಂದು ಮಾರ್ಗವೆಂದರೆ, ಸಾಲ ಪರಿವರ್ತನೆ ಮಾರ್ಗ. ಈಚೆಗೆ ಮೈಸೂರು ಸರಕಾರ ಈ ಮಾರ್ಗವನ್ನು ಅನುಸರಿಸಿ ಹೊರೆಯನ್ನು ತಗ್ಗಿಸಿದೆ. ೧೯೩೩-೩೪ ಮತ್ತು ೧೯೩೫-೩೬ ರಲ್ಲಿ ಶೇಕಡ ೭, ೬½, ೬¼, ೫½ ಯಂತೆ ಬಡ್ಡಿ ಷರತ್ತಿನಮೇಲೆ ಶೇಖರಿಸಿದ್ದ ಸಾಲದ ಪತ್ರಗಳನ್ನು ಶೇಕಡಾ ೪ ಮತ್ತು ೩ರ ಸಾಲಗಳಿಗೆ ಪರಿವರ್ತನೆ ಮಾಡಿಕೊಂಡು ಬಡ್ಡಿಯ ಭಾರವನ್ನು ಕಡಮೆ ಮಾಡಿದುದು ಸರಕಾರದ ನೀತಿಯನ್ನು ಸ್ಪಷ್ಟಪಡಿಸುತ್ತದೆ.

ಒಟ್ಟಿನಲ್ಲಿ ಮೈಸೂರಿನ ಸಾರ್ವಜನಿಕ ಸಾಲದ ಮೊತ್ತ ಮಿತಿಯನ್ನು ಮೀರಿಲ್ಲವೆಂದೂ, ಸಾಲತೀರ್ವೆನಿಧಿಗೆ ತಕ್ಕ ಶಿಸ್ತಿನ ಕ್ರಮಗಳನ್ನು ಅನುಸರಿಸಿದೆಯೆಂದೂ, ಸಾಲದ ಹೊರೆಯನ್ನು ಹತೋಟಿಯಲ್ಲಿಟ್ಟು ಆದಷ್ಟು ತಗ್ಗಿಸಲು ಸಮಯುವರಿತು ಸರಕಾರ ಕಾರ್ಯಕ್ರಮ ನಡಸಿದೆಯೆಂದೂ ನಾವು ಹೇಳಬಹುದು.

ಸಾಲದ ಹಣ ಪೋಲಾಗದೆ ದೇಶದ ಆರ್ಥಿಕಾಭಿವೃದ್ಧಿಗೆ ಮತ್ತು ಜನತೆಯ ಹಿತವನ್ನು ಸಾಧಿಸುವ ಲಾಭದಾಯಕವಾದ ಉದ್ಯಮಗಳನ್ನು ರೂಢಿಸಲು ವಿನಿಯೋಗಿಸಲ್ಪಟ್ಟಿದೆಯೆಂದೂ ಗೊತ್ತಾಗುತ್ತದೆ. ಸಾರ್ವಜನಿಕ ಆಯವ್ಯಯ ನಿಯಮಬದ್ಧವಾಗಿದೆ ಎಂದೂ ಹೇಳಬಹುದು.

---

# ಪ್ರಕರಣ ೭

## ಆಯುವ್ಯಯದ ಹತೋಟಿ

ಸರಕಾರ ಬೇರೆ ಬೇರೆ ವಿಧದಲ್ಲಿ ಶೇಖರಿಸಿದ ಹಣವನ್ನು ಮನಸ್ವಿ ದುಂದು ಮಾಡುವಂತಿಲ್ಲ. ನಿರ್ಧರವಾದ ವೆಚ್ಚಕ್ಕೆ ಬೇಕಾಗುವ ಹಣವನ್ನು ಮಾತ್ರ ಕೊಡಬೇಕು. ಸಾರ್ವಜನಿಕ ಆಯವ್ಯಯ ಕ್ರಮಬದ್ಧವಾಗಿರಬೇಕು. ಸರಕಾರ ಅನುಸರಿಸಬೇಕಾದ ಒಂದೊಂದು ನಿಯಮವೂ ಪ್ರಜಾವರ್ಗದ ಹಿತವನ್ನು ಸಾಧಿಸುವಂತಿರಬೇಕು. ಸರಕಾರ ವಿಧಿಸುವ ತೆರಿಗೆಗಳು, ಅನುಸರಿಸುವ ಹುಟ್ಟುವಳಿ ಮಾರ್ಗಗಳು, ವೆಚ್ಚದ ರೀತಿ ಮತ್ತು ಬಾಬುಗಳು ಪ್ರಜಾಪ್ರತಿನಿಧಿಗಳ ಒಪ್ಪಿಗೆ ಪಡೆಯಬೇಕು. ವಸೂಲಾದ ಹಣ ಪೋಲಾಗದಂತೆ ನೋಡಲು ಸರಿಯಾದ ಆಡಳಿತದ ಶಿಸ್ತಿರಬೇಕು. ಇದಕ್ಕಾಗಿಯೇ ಸಗಕಾರದ ಹಣಕಾಸಿನ ಆಡಳಿತದ ಪ್ರತಿಯೊಂದು ವಿಷಯದಲ್ಲೂ ದಾಖಲೆಗಳನ್ನಿಡಬೇಕಾದ ಅವಶ್ಯಕತೆಗೆ ಹೆಚ್ಚಿನ ಗಮನ ಕೊಡುವುದು. ಯಾವ ಖರ್ಚು ಮಾಡಬೇಕಾದರೂ ಅದಕ್ಕಾಗಿ ಗೊತ್ತಾಗಿರುವ ಹಲವಾರು ಹತೋಟಿಕ್ರಮಗಳನ್ನು ತಿಳಿದು ಬೇಕಾದ ಸಮಾಧಾನಗಳನ್ನು ಕೊಟ್ಟು ಹಣವನ್ನು ಪಡೆಯಬೇಕು. ಇದರಿಂದ ಅನೇಕವೇಳೆ ಕಾಲ ವಿಳಂಬವಾಗುವುದೇನೋ ನಿಜ. ಜವಾಬ್ದಾರಿ ಸರಕಾರ ಆಚರಣೆಯಲ್ಲಿರುವಾಗ ಸಾರ್ವಜನಿಕ ಆಯವ್ಯಯ, ಪ್ರಜೆಗಳ ಆಶೆ ಆಕಾಂಕ್ಷೆಗಳಿಗೆ ತಕ್ಕಂತೆ ಪ್ರತಿನಿಧಿಗಳ ಒಪ್ಪಿಗೆಗೆ ಅನುಸಾರವಾಗಿ ನಡೆಯುವುದು. ಆದರೆ ಬೇರೆ ವಿಧದ ರಾಜ್ಯಾಂಗ ಪದ್ಧತಿಯಲ್ಲಿ ಮಾತ್ರ ಸಾರ್ವಜನಿಕ ಆದಾಯ ವೆಚ್ಚಗಳು ಪ್ರಜಾಹಿತ ಸಮ್ಮತವಾಗಲು ಸಾಧ್ಯವಲ್ಲವೆಂದು ಹೇಳಲಾಗುವುದಿಲ್ಲ. ಆಡಳಿತದಲ್ಲಿನ ವಿಚಕ್ಷಣೆಯಿಂದಲೇ ಪ್ರಜೆಗಳ ಪ್ರತಿನಿಧಿಗಳ ಅಭಿಪ್ರಾಯಕ್ಕೆ ಮನ್ನಣೆ ಸಿಗುವಂತೆ ಹಣಕಾಸಿನ ವ್ಯವಹಾರವನ್ನು ನಡಸಲು ಸಾಧ್ಯವೆಂಬ ವಿಷಯವನ್ನು ನಾವು ಜ್ಞಾಪಕದಲ್ಲಿಟ್ಟು ಮೈಸೂರಿನಲ್ಲಿ ಆಚರಣೆಯಲ್ಲಿರುವ ಹತೋಟಿಕ್ರಮದ ಪರಿಚಯವನ್ನು ಪಡೆಯಬೇಕು.

೧೯೪೦ರಲ್ಲಿ ಆಚರಣೆಗೆ ಬಂದ ರಾಜ್ಯಾಂಗ ಸುಧಾರಣೆಗಳಿಗನುಸಾರವಾಗಿ ಮೈಸೂರಿನ ಶಾಸನ ಸಭೆಗಳಿಗೆ ಸಾರ್ವಜನಿಕ ಹಣಕಾಸಿನ ವ್ಯವಹಾರಕ್ಕೆ ಸಂಬಂಧಪಟ್ಟಂತೆ ಚರ್ಚೆಗೂ ಅಭಿಪ್ರಾಯಗಳನ್ನು ಖಚಿತವಾಗಿ ತಿಳಿಸಲೂ ಹೆಚ್ಚಿನ ಅವಕಾಶ ದೊರೆಯಿತು. ವರ್ಷದ ಜುಲೈ ೧ನೆಯ ತಾರೀಖಿನಿಂದ ಮುಂದಿನ ವರ್ಷದ ಜೂನ್‌ತಿಂಗಳಿನ ೩೦ನೆಯ ತಾರೀಖು ಪೂರ್ತಾ ಮೈಸೂರ ಸರಕಾರದ ಹಣಕಾಸಿನ

ವರ್ಷವೆಂದು ಗಣಿಸುವುದು ವಾಡಿಕೆಯಲ್ಲಿದೆ. ವರ್ಷ ಪ್ರಾರಂಭವಾಗುವುದಕ್ಕೆ ಮುಂಚಿತವಾಗಿ ಸರಕಾರದ ಬೇರೆ ಬೇರೆ ಶಾಖೆಗಳು ತಮ್ಮ ಶಾಖೆಯ ಆಯವ್ಯಯಗಳ ತಪಶೀಲು ಅಂದಾಜು ಪಟ್ಟಿಗಳನ್ನು ತಯಾರುಮಾಡಿ ಇವುಗಳನ್ನು ಒಟ್ಟುಗೂಡಿಸಿ ಆ ವರ್ಷದ ಬಡ್ಜೆಟ್ ಅಂದಾಜುಗಳೆಂದು ಪ್ರಕಟಿಸುತ್ತಾರೆ. ಮುಂದಿನ ವರ್ಷದ ಅಂದಾಜ ಅಂಕಿಗಳಲ್ಲದೆ, ಕಳೆದ ವರ್ಷದ ೧೦ ತಿಂಗಳಿಗೆ ಸಂಬಂಧಪಟ್ಟ ಅಂಕಿಗಳನ್ನನುಸರಿಸಿ ತಯಾರಾದ ತಿದ್ದುಪಾಟಾದ ಅಂದಾಜ ಆಯವ್ಯಯಗಳೂ ಅದಕ್ಕೆ ಹಿಂದಿನ ವರ್ಷದ ಕರಾರು ಲೆಕ್ಕದಂತೆ ತೇಲಿದ ಆಯವ್ಯಯಗಳೂ ಬಡ್ಜೆಟ್ ಅಂದಾಜಗಳಲ್ಲಿ ಸೇರಿಸಲ್ಪಡುತ್ತವೆ. ಹೀಗೆ ಮುಂದಿನ ವರ್ಷಕ್ಕೆ ನಿರೀಕ್ಷಿಸಲ್ಪಡುವ ವರಮಾನವೂ ಮತ್ತು ಅಂದಾಜ ಮಾಡಲ್ಪಟ್ಟ ವೆಚ್ಚದ ಹಂಚಿಕೆಯೂ ಪ್ರಜಾಪ್ರತಿನಿಧಿಗಳ ಅವಗಾಹನೆಗೆ ತರಲ್ಪಡುವುದು. ಸಾಮಾನ್ಯವಾಗಿ ಹೊಸ ತೆರಿಗೆಗಳನ್ನು ಸೂಚಿಸುವುದೂ, ಇರುವ ತೆರಿಗೆಗಳ ದರವನ್ನು ಹೆಚ್ಚಿಸುವುದೂ ಈ ವಿಷಯಗಳ ಮೇಲಿನ ಹತೋಟಿ ಪ್ರಜಾಪ್ರತಿನಿಧಿ ಸಭೆ ಮೊದಲಾದ ಶಾಸನ ಸಭೆಗಳಿಗುಂಟು. ಪ್ರಕೃತಸ್ಥಿತಿಯಲ್ಲಿ ಸರಕಾರದ ಆಯವ್ಯಯ ತೀರ್ಮಾನಗಳಲ್ಲಿ ನ್ಯಾಯವಿಧಾಯಕ ಸಭೆಗೆ ಹೆಚ್ಚಿನ ಅಧಿಕಾರವಿರುತ್ತದೆ.

ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ, ಈ ಎರಡು ಪ್ರಜಾಪ್ರತಿನಿಧಿ ಸಂಸ್ಥೆಗಳೂ ಬಡ್ಜೆಟ್ಟಿನ ವಿಷಯದಲ್ಲಿ ಸಾಮಾನ್ಯ ಚರ್ಚೆ ನಡೆಸಬಹುದು. ಪ್ರತಿ ವರ್ಷವೂ ಜೂನ್ ತಿಂಗಳಿನಲ್ಲಿ ಎಂದರೆ ಮುಂದಿನ ವರ್ಷವು ಆರಂಭವಾಗುವುದಕ್ಕೆ ಮುಂಚಿತವಾಗಿ ಪ್ರಜಾಪ್ರತಿನಿಧಿ ಸಭೆ ಸೇರುವುದು. ಆ ಸಭೆಯ ಮುಂದಿರುವ ಬಡ್ಜೆಟ್ಟಿನ ಸಾಮಾನ್ಯ ಚರ್ಚೆಯಿಂದ ಸಭೆಯ ಸದಸ್ಯರು ಸರಕಾರದ ಹಣಕಾಸಿನ ಸ್ಥಿತಿಯನ್ನು ಸಮಗ್ರದೃಷ್ಟಿಯಿಂದ ಪರಿಶೀಲಿಸಲು ಅವಕಾಶ ದೊರೆಯುವುದು. ಆದಾಯ ಮತ್ತು ವೆಚ್ಚದ ವಿಂಗಡಣೆಗಳಲ್ಲಿ ಅಡಗಿರುವ ತತ್ವ ಮತ್ತು ನೀತಿಯನ್ನು ಕುರಿತು ವಿಮರ್ಶಿಸುವುದಕ್ಕೆ ಇದೊಂದು ಸಾಧನ. ಸಾಮಾನ್ಯ ಚರ್ಚೆಮಾಡುವುದಲ್ಲದೆ ಬಡ್ಜೆಟ್ಟಿಗೆ ಸಂಬಂಧಪಟ್ಟಂತೆ ಗೊತ್ತಾದ ಠರಾವುಗಳನ್ನೂ ಸೂಚಿಸಬಹುದು. ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಸೂಚಿಸುವ ಠರಾವುಗಳು ಬಡ್ಜೆಟ್ ಅಂದಾಜುಗಳಿಗೆ ಅನ್ವಯಿಸುವ ಸಾಮಾನ್ಯ ನೀತಿನಿಯಮಗಳಿಗೆ ಸಂಬಂಧಪಟ್ಟಿರಬೇಕು. ಸರಕಾರದ ಆದಾಯ ಮತ್ತು ವೆಚ್ಚದ ಬಾಬುಗಳ ವಿಂಗಡಣೆಯಲ್ಲಿ ಒಳತಪಶೀಲುಗಳಲ್ಲಿ ಪ್ರವೇಶಿಸಿ ಅವುಗಳನ್ನು ವಿಮರ್ಶಿಸಿ ಪ್ರತ್ಯೇಕವಾದ ಸೂಚನೆಗಳನ್ನು ಸರಕಾರಕ್ಕೆ ಕೊಡಲು ಸಾಧ್ಯವಿಲ್ಲ. ಪ್ರಜಾಪ್ರತಿನಿಧಿ ಸಭೆಯ ಅಧಿವೇಶನ ಮುಗಿದ ಕೆಲವು ದಿವಸಗಳಾದ ಮೇಲೆ ಎಂದರೆ ಜೂನ್ ತಿಂಗಳಿನಲ್ಲಿಯೇ ನ್ಯಾಯವಿಧಾಯಕ ಸಭೆಯ ಮುಂದೆ ಅದೇ ಬಡ್ಜೆಟ್ ಅಂದಾಜುಗಳು ಬರಬೇಕೆಂಬ ನಿಯಮವುಂಟು. ಪ್ರಜಾಪ್ರತಿನಿಧಿ ಸಭೆಯ ಅಭಿಪ್ರಾಯವನ್ನು ಶಾಸನ ಸಭೆಯ ಸದಸ್ಯರು ತಿಳಿದುಕೊಳ್ಳಬಹುದು. ಬಡ್ಜೆಟ್ಟಿನಲ್ಲಿ ನಮೂದಿಸಿರುವ ವೆಚ್ಚದ ಬಾಬುಗಳನ್ನು ಎರಡು ಬಗೆಯಾಗಿ ವಿಂಗಡಿಸಿ, ವೋಟಿಗೆ ಬಾರದ ಬಾಬುಗಳನ್ನು ಬಿಟ್ಟು ಉಳಿದ ಬಾಬುಗಳ ವೆಚ್ಚದ ಪರಿಮಿತಿಗೆ ಈ ಸಭೆಯ ಒಪ್ಪಿಗೆಯನ್ನು ಪಡೆಯುವುದು ರೂಢಿಯಲ್ಲಿದೆ. ಸಾಲ ತೀರ್ವೆನಿಧಿ ಅರಮನೆ

ಬಾಬಿನ ವೆಚ್ಚ, ಪೆನ್‌ಷನ್ ಮತ್ತು ಪ್ರೊಗದಿ, ಈ ಬಾಬಿನ ವೆಚ್ಚಗಳ ವಿಷಯದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಶಾಸನ ಸಭೆಯು ಒಪ್ಪಿಗೆ ಪಡೆಯಬೇಕಾಗಿಲ್ಲ. *

ಸರಕಾರ ಬಡ್ಜೆಟ್ ಅಂದಾಜುಗಳಲ್ಲಿ ಬೇರೆ ಬೇರೆ ಖಾತೆಗಳಿಗಾಗಿ ನಿರ್ಧರಿಸುವ ವೆಚ್ಚದ ಪರಿಮಿತಿಗೆ ಒಪ್ಪಿಗೆ ಕೊಡುವ ಸಂದರ್ಭದಲ್ಲಿ, ಆ ಕೇಳಿಕೆಗೆ ಅನ್ವಯಿಸುವ ಚರ್ಚೆ ನಡಸಿ ತೀರ್ಮಾನ ಮಾಡಬಹುದು. ಆದರೆ ಈ ಬಾಬುಗಳಲ್ಲಿ ವೆಚ್ಚದ ಪರಿಮಿತಿಯನ್ನು ಹೆಚ್ಚುಮಾಡಲು ಸ್ವತಂತ್ರವಾಗಿ ಸೂಚನೆಮಾಡುವ ಅವಕಾಶ ಶಾಸನ ಸಭೆಗಿರುವುದಿಲ್ಲ. ಸರಕಾರದ ಅಂದಾಜುಗಳಲ್ಲಿರುವಂತೆ ಆಯಾ ಬಾಬಿನ ಕೇಳಿಕೆಗಳನ್ನು ನ್ಯಾಯವಿಧಾಯಕ ಸಭೆ ನಿರಾಕರಿಸಬಹುದು ಅಥವಾ ಕಡಮೆಮಾಡಬಹುದು. ಹೆಸರಿಗೆ ಮಾತ್ರ ಕಡಮೆಮಾಡುವ ಖೋತಾನಿರ್ಣಯ (ಕತ್ತರಿ ಪ್ರಯೋಗ) ಗಳನ್ನು ಸಭೆಯು ಮುಂದೆ ತಂದು, ಆ ವೆಚ್ಚದ ಬಾಬಿಗೆ ಸಂಬಂಧಪಟ್ಟ ಖಾತೆಯ ಆಡಳಿತದ ಲೋಪದೋಷಗಳನ್ನು ಸರಕಾರದ ಅಧಿಕಾರ ವರ್ಗಕ್ಕೆ ಸದಸ್ಯರು ಸೂಚಿಸಬಹುದು. ನಿರಾಕರಿಸುವ ಮತ್ತು ಕಡಮೆಮಾಡುವ ನಿರ್ಣಯಗಳನ್ನು ಈ ಸಭೆ ಮಾಡಿದರೂ, ಆ ನಿರ್ಣಯದಂತೆಯೇ ವೆಚ್ಚವನ್ನು ಬಿಡಬೇಕೆಂದಾಗಲಿ, ಕಡಮೆ ಹಾಕಬೇಕೆಂದಾಗಲಿ ಸರಕಾರವನ್ನು ಕಡ್ಡಾಯವಾಗಿ ಬಂಧಿಸಲು ಅವಕಾಶವಿರುವುದಿಲ್ಲ. ಕಡಮೆಯಾದ ಅಥವಾ ತಿರಸ್ಕೃತವಾದ ಖರ್ಚು ಕೇಳಿಕೆ ಸರಕಾರದ ಆಡಳಿತದ ಜವಾಬ್ದಾರಿಯನ್ನು ನಿರ್ವಹಿಸಲು ಆವಶ್ಯಕವೆಂದು ತೋರಿದಾಗಲೂ, ಕೇಳಿಕೆಗೆ ಸಂಬಂಧಪಟ್ಟ ಇಲಾಖೆಯು ಕಾರ್ಯನಿರ್ವಹಣೆಗೆ ಕುಂದುಂಟುಮಾಡುವುದೆಂದು ಅಭಿಪ್ರಾಯ ಬಂದಾಗಲೂ ದಿವಾನರು ಆ ವೆಚ್ಚವನ್ನು ಒಪ್ಪಲು ಅವಕಾಶವಿರುತ್ತದೆ. ಈ ರೀತಿಯ ಬಿಕ್ಕಟ್ಟಿನ ಪ್ರಸಂಗಗಳು ನಮ್ಮ ಸಂಸ್ಥಾನದಲ್ಲಿ ತೀರ ವಿರಳ. ನ್ಯಾಯವಿಧಾಯಕ ಸಭೆಯು ಒಪ್ಪಿಗೆಯನ್ನು ಪಡೆದ ವೆಚ್ಚದ ಮಿತಿಗಿಂತಲೂ ಯಾವುದಾದರೊಂದು ಬಾಬಿಗೆ ಹೆಚ್ಚಿನ ಹಣ ಬೇಕಾಗಿ ಬಂದರೆ, ಧನ ವೆಚ್ಚವಾಗಿದ್ದರೆ ನ್ಯಾಯವಿಧಾಯಕ ಸಭೆಯು ಮುಂದಣ ಅಧಿವೇಶನಗಳಲ್ಲಿ ಆ ಹೆಚ್ಚಿನ ವೆಚ್ಚಕ್ಕೆ ಸದಸ್ಯರ ಒಪ್ಪಿಗೆಯನ್ನು ಪಡೆಯಬೇಕೆಂಬ ನಿಯಮವೂ ಒಂದು ಹತೋಟಿಯ ನಿಯಮ. ಆಡಳಿತಕ್ರಮ, ಆಯವ್ಯಯಗಳನ್ನು ಸೂಕ್ಷ್ಮವಾಗಿ ವಿಮರ್ಶಿಸಲು ಸಾಧ್ಯವಾಗುವಂತೆ ಮಾಡಲು ಕೆಲವು ಸಮಿತಿಗಳು ಕೆಲಸಮಾಡುತ್ತವೆ. ಈ ಸಮಿತಿಗಳಲ್ಲಿ ಮೇಲೆ ಹೇಳಿರುವ ಸಭೆಯ ಸದಸ್ಯರುಗಳಲ್ಲಿ ಕೆಲವರಿರುತ್ತಾರೆ. ಹಣಕಾಸಿನ ಸಮಿತಿ, ರೈಲ್ವೆ ಮತ್ತು ವಿದ್ಯುಚ್ಛಕ್ತಿ ಖಾತೆ ಸಮಿತಿ ಮತ್ತು ಸ್ಥಳಸರ್ಕಾರ, ವೈದ್ಯ ಮತ್ತು ಆರೋಗ್ಯಖಾತೆ ಸಮಿತಿ ಎಂದು ಮೂರು ಸಮಿತಿಗಳಿವೆ. ಸಮಿತಿಯ ಸದಸ್ಯರಿಗೆ ಅದಕ್ಕೆ ಸಂಬಂಧಪಟ್ಟ ಸರಕಾರದ ಇಲಾಖೆಯ ವೆಚ್ಚದ ವಿವರಗಳನ್ನು ಪರಿಶೀಲಿಸಲು ಮತ್ತು ಸಾರ್ವಜನಿಕ ಹಿತದ ದೃಷ್ಟಿಯಿಂದ ಆಯಾ ಇಲಾಖೆಗಳ ಆಡಳಿತಕ್ರಮ

* ಈಚಿನ ರಾಜಕೀಯ ಸುಧಾರಣೆಗಳಿಂದ ಈ ಕ್ರಮವು ಬದಲಾವಣೆ ಹೊಂದಿದೆ. ೧೯೪೭ರಲ್ಲಿನ ಇಂಡಿಯ ಸ್ವತಂತ್ರ ರಾಜ್ಯಾಂಗ ವ್ಯವಸ್ಥೆಗೆ ಅನುಗುಣವಾಗಿ ದೊರೆತ ರಾಜಕೀಯ ಸುಧಾರಣೆಗಳಿಂದ ಮೈಸೂರು ಸರಕಾರದ ಆಯವ್ಯಯದ ಹತೋಟಿಯು ಪೂರ್ಣವಾಗಿ ಶಾಸನಸಭೆಗೆ ಸೇರಿರುತ್ತದೆ.

ವನ್ನು ರೂಪಗೊಳಿಸಲು ಹೆಚ್ಚಿನ ಅವಕಾಶವಿರುತ್ತದೆ. ಖರ್ಚಿನ ವಿತರಣೆಗೂ ಹತೋಟಿಗೂ ಈ ಸಮಿತಿಗಳಿಂದ ಹೆಚ್ಚಿನ ಸಹಾಯವುಂಟು.

ಸರಕಾರದ ಆಯವ್ಯಯದ ತಪಶೀಲು ಕಾನೂನುಬದ್ಧವಾಗಿ ನಡೆಯು ವುದೋ ಇಲ್ಲವೋ ಎಂಬ ದೃಷ್ಟಿಯಿಂದ ಪರೀಕ್ಷೆ ನಡೆಸಿಕೊಂಡು ಹಣಕಾಸಿನ ಆಡಳಿತವನ್ನು ಕ್ರಮಪಡಿಸಿ ಸಹಾಯಮಾಡಲು ನಿರ್ಮಾಣವಾಗಿರುವ ಶಾಖೆ ಅಂದರೆ ಆಡಿಟ್ ಖಾತೆ ಸರಕಾರದ ಕಂಟ್ರೋಲರವರ ಮೇಲ್ವಿಚಾರಣೆಯಲ್ಲಿ ಕೆಲಸ ಮಾಡುತ್ತದೆ. ಪ್ರಜೆಗಳ ಪ್ರತಿನಿಧಿಗಳಿಗೆ ಇದರಲ್ಲೂ ಒಂದು ಸ್ಥಾನವನ್ನು ಕಲ್ಪಿಸುವ ಉದ್ದೇಶದಿಂದ ಸಾರ್ವಜನಿಕ ಲೆಕ್ಕಾಚಾರ ಸಮಿತಿ ಏರ್ಪಾಡಾಗಿದೆ. ಇದರಲ್ಲಿ ನ್ಯಾಯವಿಧಾಯಕ ಸಭೆಯ ಸದಸ್ಯರಿಂದ ಚುನಾಯಿತರಾದವರೂ ಸರಕಾರದಿಂದ ನಾಮಕರಣಮಾಡಲ್ಪಟ್ಟವರೂ ಸೇರಿ ಸರಕಾರದ ಲೆಕ್ಕಗಳನ್ನು ತನಿಖೆಮಾಡುವರು. ವರ್ಷದ ಲೆಕ್ಕಗಳನ್ನೂ ಸರಕಾರದ ತನಿಖೆ ವರದಿಯನ್ನೂ ಈ ಸಮಿತಿಯ ಸದಸ್ಯರು ಪರ್ಯಾಲೋಚಿಸಿ ಆದಾಯ ವೆಚ್ಚದ ಆಡಳಿತಕ್ಕೆ ಸಂಬಂಧಪಟ್ಟ ಲೋಪದೋಷಗಳನ್ನು ಸರಕಾರದ ಮತ್ತು ಶಾಸನ ಸಭೆಗಳ ಸದಸ್ಯರ ಗಮನಕ್ಕೆ ತರುವರು. ಈ ಸಮಿತಿಯ ಕಾರ್ಯಕ್ಷೇತ್ರ ಸರಕಾರದ ಎಲ್ಲಾ ಶಾಖೆಗಳಿಗೂ ಅನ್ವಯಿಸುವುದು. ಸಮಿತಿಯ ಸೂಚನೆಗಳಿಗೆ ಸರಕಾರದಲ್ಲೂ ಶಾಸನ ಸಭೆಗಳಲ್ಲೂ ಹೆಚ್ಚಿನ ಪ್ರಾಶಸ್ತ್ಯವುಂಟು.

ಸಾರ್ವಜನಿಕ ಆದಾಯ ವೆಚ್ಚಗಳಿಂದ ಪ್ರಜಾಸಮುದಾಯದ ಪ್ರಗತಿಯನ್ನು ಸಾಧಿಸಲು ಸಹಾಯಮಾಡುವಂತೆ ನಮ್ಮ ಸರಕಾರದಲ್ಲಿ ನಿರ್ಮಿಸಲ್ಪಟ್ಟಿರುವ ಹತೋಟಿ ಶಿಸ್ತು ಈಗ ಮುಂದುವರಿದ ದೇಶಗಳಲ್ಲಿರುವ ಕ್ರಮಗಳಿಗೆ ಅನುಗುಣವಾಗಿದೆ. ಪ್ರಜೆಗಳ ಪ್ರತಿನಿಧಿಗಳ ಸಲಹೆ ಮತ್ತು ಸಮ್ಮತಿಗಳಿಗೊಳಪಟ್ಟು ಹಣಕಾಸಿನ ಆಡಳಿತ ನಡೆಯುವುದಕ್ಕೂ ಅವಕಾಶವಿರುತ್ತದೆ.

---

# ಪ್ರಕರಣ ೮

## ಸ್ಥಳೀಯ ಸರಕಾರದ ಹಣಕಾಸು

ಹಳ್ಳಿಗಳು, ಸಣ್ಣ ಸಣ್ಣ ಊರುಗಳು ಮತ್ತು ಪಟ್ಟಣಗಳಲ್ಲಿ ರಸ್ತೆ, ಚರಂಡಿಗಳು, ಗ್ರಾಮ ನೈರ್ಮಲ್ಯ ಮತ್ತು ಆರೋಗ್ಯ, ದೀಪ ಮತ್ತು ನೀರು ಸರಬರಾಜು ಇವೇ ಮೊದಲಾದ ಸೌಕರ್ಯಗಳನ್ನು ಆಯಾ ಸ್ಥಳದವರು ಏರ್ಪಡಿಸಿಕೊಳ್ಳುವುದು ಎಲ್ಲಾ ದೇಶಗಳಲ್ಲೂ ಸಾಮಾನ್ಯ ಪದ್ಧತಿ. ಖರ್ಚಿನ ದೃಷ್ಟಿಯಿಂದಲೂ ಸೌಕರ್ಯಗಳು ಸಮರ್ಪಕವಾಗಿ ಒದಗುವುದಕ್ಕೂ ಸ್ಥಳೀಯ ಸಂಸ್ಥೆಗಳು ಈ ಜವಾಬ್ದಾರಿಯನ್ನು ವಹಿಸುವುದು ಉತ್ತಮ. ಗ್ರಾಮ ಪಂಚಾಯಿತಿಗಳು, ನಗರ ಮತ್ತು ಪಟ್ಟಣಗಳ ಮುನಿಸಿಪಾಲಿಟಿ, ಇವೇ ಮೊದಲಾದ ಸ್ಥಳಸಂಸ್ಥೆಗಳು ಈ ಉದ್ದೇಶಕ್ಕಾಗಿ ನಿರ್ಮಾಣವಾಗುತ್ತವೆ. ದೇಶದ ಪ್ರತಿಯೊಂದು ಭಾಗದಲ್ಲಿಯೂ ಹಳ್ಳಿಯಿಂದ ಹಳ್ಳಿಗೆ ರಸ್ತೆಗಳು, ಸೇತುವೆಗಳು, ಆಸ್ಪತ್ರೆ, ವಿಶ್ರಾಂತಿ ಗೃಹಗಳು ಇವೇ ಮೊದಲಾದ ಒಳಸೌಕರ್ಯಗಳನ್ನು ಅಭಿವೃದ್ಧಿಗೊಳಿಸಲು ಡಿಸ್ಟ್ರಿಕ್ಟ್ ಬೋರ್ಡ್ ಎಂಬ ಸಂಸ್ಥೆ ಕೆಲಸ ಮಾಡುತ್ತದೆ.

ಮೈಸೂರು ಸಂಸ್ಥಾನದಲ್ಲಿ ೧೯೨೬ಕ್ಕೆ ಮುಂಚೆ ಗ್ರಾಮ ಪಂಚಾಯಿತಿ ಮತ್ತು ಡಿಸ್ಟ್ರಿಕ್ಟ್ ಬೋರ್ಡ್‌ಗಳ ಆಯವ್ಯಯಗಳು ಪ್ರತ್ಯೇಕವಾಗಿರಲಿಲ್ಲ. ೧೯೨೬ ರಲ್ಲಿ ಗ್ರಾಮಪಂಚಾಯಿತಿಗಳನ್ನು ವ್ಯವಸ್ಥೆಗೊಳಿಸಿದಾಗ ಈ ಸಂಸ್ಥೆಗಳ ವರಮಾನ ಮತ್ತು ವೆಚ್ಚಗಳ ಬಾಬುಗಳನ್ನು ಪ್ರತ್ಯೇಕಿಸಲಾಯಿತು. ಹಳ್ಳಿಗಳಲ್ಲಿರುವ ಕಾಡು, ಕೆರೆ, ತೋಪು, ಅಕ್ಕಪಕ್ಕದ ರಸ್ತೆಗಳು, ಚರಂಡಿ ಇವುಗಳ ಆದಳಿತ ನಡೆಸುವುದು, ಸೆತ್ತೆ ಸದೆಗಳನ್ನು ತೆಗೆದುಹಾಕುವುದು, ಗ್ರಾಮ ಪಾಕೀಜು, ಪುಸ್ತಕ ಭಂಡಾರ ಮತ್ತು ವಾಚನಾಲಯಗಳನ್ನು ನಡೆಸಿಕೊಂಡು ಬರುವುದು, ಗ್ರಾಮದ ಜನಗಳಿಗೆ ವೈದ್ಯ ಚಿಕಿತ್ಸೆ, ದೀಪ ಮೊದಲಾದ ಸೌಕರ್ಯಗಳನ್ನು ಒದಗಿಸುವುದು, ಇವೇ ಮೊದಲಾದ ಜವಾಬ್ದಾರಿಯನ್ನು ಗ್ರಾಮಪಂಚಾಯಿತಿಗಳು ವಹಿಸಬೇಕಾಯಿತು. ನಮ್ಮ ದೇಶದಲ್ಲಿ ಗ್ರಾಮಪಂಚಾಯಿತಿ ಅನೂಚಾನವಾಗಿ ನಡೆದು ಬಂದಿರುವ ಸಂಸ್ಥೆ. ದೊಡ್ಡ ದೊಡ್ಡ ಊರುಗಳಿಗೆ ಮುನಿಸಿಪಾಲಿಟಿ ಎಂಬ ನಗರ ವ್ಯವಸ್ಥೆ ಈ ಶತಮಾನದ ಆದಿಭಾಗದಿಂದಲೂ ಏರ್ಪಟ್ಟಿದೆ. ಕಾಲಾನುಗುಣವಾಗಿ ಈ ಸಂಸ್ಥೆಗಳ ಹಕ್ಕು ಬಾಧ್ಯತೆಗಳೂ, ಹಣಕಾಸಿನ ವ್ಯವಸ್ಥೆಯೂ ಬದಲಾವಣೆ ಹೊಂದುತ್ತಾ ಬಂದಿವೆ.

ಸ್ಥಳೀಯ ಸರ್ಕಾರ ಸಂಸ್ಥೆಗಳ ಒಟ್ಟು ವೆಚ್ಚ ೧೯೧೦–೧೧ ರಲ್ಲಿ ಸುಮಾರು ೧೬·೭೨ ಲಕ್ಷ ರೂ.ಗಳು; ೧೯೩೯–೪೦ರಲ್ಲಿ ಈ ಸಂಸ್ಥೆಗಳ ವೆಚ್ಚ ೯೧ ಲಕ್ಷ ರೂ.

ಗಳನ್ನು ಮೀರಿತ್ತು. ಒಟ್ಟಿನಲ್ಲಿ ಮೂವತ್ತು ವರ್ಷಗಳಲ್ಲಿಯೂ ಹೀಗೆ ಐದರಷ್ಟು ಹೆಚ್ಚಿದ ವೆಚ್ಚದ ಮೊತ್ತ ಸ್ಥಳೀಯ ಸರಕಾರಿ ಸಾಂಸ್ಥೆಗಳ ಕಾರ್ಯಕ್ಷೇತ್ರದ ಬೆಳವಣಿಗೆಯನ್ನು ಸೂಚಿಸುತ್ತದೆ. ಈ ವೆಚ್ಚದ ಬಹುಭಾಗ (೧೯೩೯-೪೦ರಲ್ಲಿ ಶೇ. ೬೭·೩ರಷ್ಟು) ಮುನಿಸಿಪಾಲಿಟಿಗಳಿಗೆ ಸಂಬಂಧಪಟ್ಟದ್ದು. ಸಂಸ್ಥಾನದ ಮುನಿಸಿಪಾಲಿಟಿಗಳ ವರಮಾನ ಮತ್ತು ವೆಚ್ಚ ಸುಮಾರು ೬೧·೫ ಲಕ್ಷ ರೂ. ಗಳಾಗುವುದು. ಮುನಿಸಿಪಾಲಿಟಿ, ಡಿಸ್ಟ್ರಿಕ್ಟ್ ಬೋರ್ಡ್, ಮತ್ತು ಗ್ರಾಮ ಪಂಚಾಯಿತಿ, ಈ ಮೂರು ಬಗೆಯ ಸ್ಥಳಸಂಸ್ಥೆಗಳ ಹಣಕಾಸಿನ ವಿಷಯವನ್ನು ಸೂಕ್ಷ್ಮವಾಗಿ ಬೇರೆ ಬೇರೆ ವಿಮರ್ಶಿಸೋಣ.

ಮುನಿಸಿಪಾಲಿಟಿಗಳ ಮುಖ್ಯ ವರಮಾನದ ಬಾಬುಗಳು ಯಾವುವೆಂದರೆ: ಆಕ್ಟ್ರಾಯಿ ಸುಂಕ, ಮನೆಗಂದಾಯ, ಮುನಿಸಿಪಲ್ ಮಾರ್ಕೆಟ್ ಮತ್ತು ಕಟ್ಟಡಗಳಿಂದ ಬರುವ ಬಾಡಿಗೆ, ಟೋಲು ಮತ್ತು ವಾಹನಗಳ ಮೇಲಿನ ತೆರಿಗೆ. ನಮ್ಮ ಸಂಸ್ಥಾನದ ಮುನಿಸಿಪಾಲಿಟಿಗಳ ವರಮಾನದಲ್ಲಿ ಅರ್ಧಕ್ಕೆ ಹೆಚ್ಚಿನ ಭಾಗ ಆಕ್ಟ್ರಾಯಿ ಸುಂಕದಿಂದ ದೊರೆಯುತ್ತದೆ. ಸುಮಾರು ಐದನೆಯ ಒಂದು ಭಾಗ ಮನೆಗಂದಾಯ ಮತ್ತು ಮುನಿಸಿಪಲ್ ಆಸ್ತಿ ಸ್ವತ್ತುಗಳಿಂದ ವರಮಾನದ ರೂಪದಲ್ಲಿ ಬರುತ್ತದೆ. ಇಂಡಿಯಾದೇಶದ ಇತರ ಪ್ರಾಂತಗಳಲ್ಲಿನ ಮುನಿಸಿಪಾಲಿಟಿಗಳಲ್ಲಿ ಒಟ್ಟು ವರಮಾನದ ಸುಮಾರು ೧/೨ ಭಾಗದಷ್ಟು ಆಕ್ಟ್ರಾಯಿ ಸುಂಕದಿಂದಲೂ, ಕಾಲುಭಾಗ ಮನೆಗಂದಾಯದಿಂದಲೂ, ಮುನಿಸಿಪಲ್ ಮಾರ್ಕೆಟ್ ಮೊದಲಾದ ಆಸ್ತಿ ಸ್ವತ್ತುಗಳಿಂದ ಸುಮಾರು ಶೇ. ೫ ರಷ್ಟು ವರಮಾನ ಬರುತ್ತದೆ. ಸಂಸ್ಥಾನದ ಮುನಿಸಿಪಾಲಿಟಿಗಳ ಖರ್ಚಿನಲ್ಲಿ ಸುಮಾರು ಶೇ. ೧೦ ಭಾಗ ಆಡಳಿತದ ವೆಚ್ಚಕ್ಕೂ, ಶೇ. ೨೦ ಭಾಗ ರಸ್ತೆ ಮೊದಲಾದ ಸಾರ್ವಜನಿಕ ಕಾಮಗಾರಿಗಳಿಗೂ, ಶೇ. ೪೩ ರಷ್ಟು ನಗರ ನೈರ್ಮಲ್ಯ ಮತ್ತು ಆರೋಗ್ಯ ಬಾಬುಗಳಿಗೂ ವಿನಿಯೋಗವಾಗುತ್ತದೆ. ಇಂಡಿಯಾದ ಪ್ರಾಂತಗಳಲ್ಲಿ ಮುನಿಸಿಪಾಲಿಟಿಗಳ ಖರ್ಚಿನಲ್ಲಿ ಸುಮಾರು ಶೇ. ೧೨ ರಷ್ಟು ಆಡಳಿತದ ವೆಚ್ಚಕ್ಕೂ, ಶೇ. ೧೭ ರಷ್ಟು ಸಾರ್ವಜನಿಕ ಕಾಮಗಾರಿಗಳಿಗೂ, ಶೇ. ೫೪ ರಷ್ಟು ನಗರ ನೈರ್ಮಲ್ಯ ಮತ್ತು ಆರೋಗ್ಯ ಬಾಬುಗಳಿಗೂ ಖರ್ಚಾಗುವುದು.

ಮೈಸೂರು ದೇಶದ ಡಿಸ್ಟ್ರಿಕ್ಟ್ ಬೋರ್ಡ್ ಸಂಸ್ಥೆಗಳ ವರಮಾನ ಮತ್ತು ಖರ್ಚು ೧೯೧೦-೧೧ರಲ್ಲಿ ಕ್ರಮವಾಗಿ ೮.೫೫ ಲಕ್ಷ ರೂ.ಗಳು, ಮತ್ತು ೭·೬೧ ಲಕ್ಷ ರೂ.ಗಳು ಇದ್ದು ೧೯೩೯-೪೦ರಲ್ಲಿ ಈ ಸಂಸ್ಥೆಗಳ ವರಮಾನ ೧೬·೩೩ ಲಕ್ಷ ರೂಪಾಯಿಗಳಿಗೂ, ವೆಚ್ಚ ೧೭.೩೩ ಲಕ್ಷ ರೂಪಾಯಿಗಳಿಗೂ ಏರಿತು. ಈ ಸಂಸ್ಥೆಗಳ ವರಮಾನದ ಬಾಬು, ಮುಖ್ಯವಾದ ಸೆಸ್ಸಿನ ಹುಟ್ಟುವಳಿ, ಸರಕಾರದಿಂದ ವಸೂಲಾಗಿ ಈ ಸಂಸ್ಥೆಗಳಿಗೆ ಪಾವತಿಯಾಗುವುದು. ಸರಕಾರದವರು ಭೂಕಂದಾಯ, ಕಾಡುಗಳಿಂದ ಬರುವ ವರಮಾನ ಮತ್ತು ಅಬ್ಕಾರಿ ತೆರಿಗೆ ಇವುಗಳ ಮೇಲೆ ರೂಪಾಯಿಗೆ ಒಂದಾಣೆಯಂತೆ ಲೋಕಲ್ ಸೆಸ್ ತೆರಿಗೆಯನ್ನು ಈ ಸಂಸ್ಥೆಗಳ ಉಪಯೋಗಕ್ಕಾಗಿ ವಿಧಿಸುತ್ತಾರೆ. ಹೀಗೆ ವಸೂಲಾದ

ಮೊಬಲಗಿನಲ್ಲಿ ಶೇ. ೨೪ ರಷ್ಟು ಭಾಗವನ್ನು ಸರಕಾರದವರು ವಸೂಲಿ ಖರ್ಚಿಗಾಗೆಂದು ಹಿಡಿದು ಉಳಿದ ಹಣವನ್ನು ಆಯಾ ಡಿಸ್ಟ್ರಿಕ್ಟ್ ಬೋರ್ಡಿನವರಿಗೆ ಕೊಡುತ್ತಾರೆ. ಡಿಸ್ಟ್ರಿಕ್ಟ್ ಬೋರ್ಡುಗಳ ವರಮಾನದ ಸುಮಾರು ⅓ ಭಾಗ (೧೯೩೬–೪೦ರಲ್ಲಿ ೮೦.೧೯ ಲಕ್ಷ ರೂಪಾಯಿಗಳು) ಲೋಕಲ್ ಸೆಸ್ಸಿನಿಂದ ವಸೂಲಾಗುವುದು. ಡಿಸ್ಟ್ರಿಕ್ಟ್ ಬೋರ್ಡುಗಳು ತಮ್ಮ ಆಡಳಿತಕ್ಕೆ ಒಳಪಟ್ಟಿರುವ ರಸ್ತೆ ಮತ್ತು ಸೇತುವೆಗಳ ಮೇಲೆ ಹಾಕುವ ಟೋಲು ಸುಂಕದಿಂದ ಡಿಸ್ಟ್ರಿಕ್ಟ್ ಬೋರ್ಡ್‍ಗಳ ಒಟ್ಟು ವರಮಾನದ ಶೇ. ೯ರಷ್ಟು ಮೊಬಲಗು ವಸೂಲಾಗುತ್ತದೆ (೧೯೩೯–೪೦ರಲ್ಲಿ ೧.೪೬ ಲಕ್ಷ ರೂಪಾಯಿಗಳು). ಆಯಾ ಡಿಸ್ಟ್ರಿಕ್ಟ್‍ನಲ್ಲಿ ನಡೆಯುವ ಸಂತೆಗಳ ಮೇಲೆ ಬೋರ್ಡಿನವರು ಸುಂಕಹಾಕಿ ಒಟ್ಟು ವರಮಾನದಲ್ಲಿ ಶೇ. ೮.೩ರಷ್ಟು (೧೯೩೯–೪೦ರಲ್ಲಿ ೧.೩೬ ಲಕ್ಷ ರೂಪಾಯಿಗಳು) ಹಣವನ್ನು ಸಂಗ್ರಹಿಸುವರು. ಲೋಕಲ್ ಸೆಸ್ಸಲ್ಲದೆ ಪ್ರತ್ಯೇಕವಾಗಿ ರೂಪಾಯಿಗೆ ೩ ಕಾಸಿನಂತೆ (ಇತ್ತೀಚೆಗೆ ೬ ಕಾಸಿನಂತೆ) ವಿದ್ಯಾಭ್ಯಾಸದ ಸೆಸ್ಸು ವಸೂಲಾಗುತ್ತಿದೆ. ಕೆಲವು ಡಿಸ್ಟ್ರಿಕ್ಟ್ ಬೋರ್ಡುಗಳು ರೈಲ್ವೆ ಸೆಸ್ಸನ್ನು ವಸೂಲುಮಾಡಿ, ಬಂದ ಹಣದಿಂದ ಸರಕಾರದ ಅನುಮತಿ ಪಡೆದು ರಸ್ತೆ ಮತ್ತು ಸೇತುವೆ ಕೆಲಸಗಳಿಗೆ ಖರ್ಚುಮಾಡುತ್ತವೆ.

ಡಿಸ್ಟ್ರಿಕ್ಟ್ ಬೋರ್ಡ್ ಸಂಸ್ಥೆಗಳ ಮುಖ್ಯವಾದ ವೆಚ್ಚದ ಬಾಬುಗಳು : ರಸ್ತೆ, ಸೇತುವೆ, ಕಟ್ಟಡಗಳ ಕಾಮಗಾರಿ, ಡಿಸ್ಟ್ರಿಕ್ಟ್‍ಗಳಲ್ಲಿ ಆರೋಗ್ಯ ಸಂರಕ್ಷಣೆ ಮತ್ತು ಸಾಂಕ್ರಾಮಿಕ ರೋಗಗಳ ನಿವಾರಣೆ. ೧೯೩೯–೪೦ನೆಯ ವರ್ಷದ ಒಟ್ಟು ಖರ್ಚಿನ ಶೇ. ೩೬ ಭಾಗದಷ್ಟು (೬.೨೭ ಲಕ್ಷ ರೂಪಾಯಿಗಳು) ರಸ್ತೆ, ಸೇತುವೆ, ಕಟ್ಟಡ ಮೊದಲಾದ ಕಾಮಗಾರಿ ಕೆಲಸಗಳಿಗೂ, ೩೦.೫ ಭಾಗದಷ್ಟು (೫.೨೬ ಲಕ್ಷ ರೂಪಾಯಿಗಳು) ಡಿಸ್ಟ್ರಿಕ್ಟಿನ ಆರೋಗ್ಯ ಮತ್ತು ನೈರ್ಮಲ್ಯಕ್ಕೂ, ಶೇ. ೯ ರಷ್ಟು (೧.೫೫ ಲಕ್ಷ ರೂಪಾಯಿಗಳು) ಆಡಳಿತ ವರ್ಗಕ್ಕೂ ಖರ್ಚಾಯಿತು. ಪ್ರಾಥಮಿಕ ವಿದ್ಯಾಭ್ಯಾಸದ ನಿರ್ವಹಣೆಯನ್ನು ಸ್ಥಳೀಯ ಸಂಸ್ಥೆಗಳಿಗೇ ವಹಿಸಿದರೆ ಆ ದರ್ಜೆಯ ವಿದ್ಯಾಭ್ಯಾಸ ಅಭಿವೃದ್ಧಿ ಹೊಂದುವುದೆಂಬ ನಂಬಿಕೆಯಿಂದ ಪ್ರಾಥಮಿಕ ವಿದ್ಯಾಭ್ಯಾಸದ ಹತೋಟಿಯನ್ನು ೧೯೩೧ನೆಯ ಜುಲೈ ಲಾಗಾಯಿತು ಸ್ಥಳೀಯ ಸಂಸ್ಥೆಗಳಿಗೇ ವಹಿಸಲಾಯಿತು. ಆದರೆ ಈ ನಂಬಿಕೆ ಹತ್ತು ವರ್ಷಗಳಾದರೂ ಕಾರ್ಯಗತವಾಗಲಿಲ್ಲ. ವಿದ್ಯಾರ್ಥಿಗಳ ಮತ್ತು ಪ್ರಾಥಮಿಕ ವಿದ್ಯಾಸಂಸ್ಥೆಗಳ ಸಂಖ್ಯೆ ತೋರಿಬರುವಷ್ಟು ಬೆಳೆಯಲಿಲ್ಲ. ಆದಕಾರಣ ಪ್ರಾಥಮಿಕ ವಿದ್ಯಾಭ್ಯಾಸದ ಮೇಲೆ ಹತೋಟಿಯನ್ನು ೧೯೪೧ನೆಯ ಜುಲೈ ಲಾಗಾಯಿತು ಸರಕಾರದವರೇ ವಹಿಸಿಕೊಂಡರು. ಮುಂದಿನ ಐದು ವರ್ಷಗಳಲ್ಲಿ ೧,೦೦೦ ಪ್ರಾಥಮಿಕ ವಿದ್ಯಾಶಾಲೆಗಳನ್ನಾದರೂ ಪ್ರಾರಂಭಿಸಬೇಕೆಂಬುದು ಸರಕಾರದ ಉದ್ದೇಶ. ಡಿಸ್ಟ್ರಿಕ್ಟ್ ಬೋರ್ಡ್ ಸಂಸ್ಥೆಗಳ ಹಣಕಾಸಿನ ಸ್ಥಿತಿ ಸುಲಲಿತವಾದ ವಿದ್ಯಾಪ್ರಚಾರಕ್ಕೆ ಸಾಕಷ್ಟು ಉತ್ತಮವಾಗಿಲ್ಲ. ಇತ್ತೀಚಿನ ವರ್ಷಗಳಲ್ಲಂತೂ ಈ ಸಂಸ್ಥೆಗಳ ಹುಟ್ಟುವಳಿ ಸ್ಥಾಯಿಯಾಗಿ ನಿಂತು ಖರ್ಚು ಮಾತ್ರ ಹೆಚ್ಚಾಗಿರುವುದು ಕಂಡುಬರುವುದು. ಡಿಸ್ಟ್ರಿಕ್ಟ್ ಬೋರ್ಡ್ ಸಂಸ್ಥೆಗಳ ಹಣಕಾಸಿನ ಸ್ಥಿತಿಯನ್ನು ಉತ್ತಮ

ಗೊಳಿಸುವಂತೆ ಸಲಹೆ ಕೊಡಲು ೧೯೪೦ರಲ್ಲಿ ನಿಯಮಿಸಲ್ಪಟ್ಟಿದ್ದ "ಹಿರಿಯಣ್ಣಯ್ಯ ಸಮಿತಿಯವರು" ಲೋಕಲ್ ಸೆಸ್ಸನ್ನು ಆರು ಕಾಸಿನಷ್ಟು ಹೆಚ್ಚಿಸುವುದು ಉತ್ತಮ ವೆಂದು ಸಲಹೆ ಕೊಟ್ಟರು. ಪ್ರಾಥಮಿಕ ವಿದ್ಯಾಭ್ಯಾಸದ ಮೇಲಿನ ಹತೋಟಿಯನ್ನು ಸರಕಾರದವರು ವಹಿಸಿಕೊಂಡಕಾರಣ ವಿದ್ಯಾಭ್ಯಾಸದ ಸೆಸ್ಸು ಗ್ರಾಮಾಂತರ ಗಳಲ್ಲಿ ಮೂರು ಕಾಸಿನಷ್ಟು ಹೆಚ್ಚಿಸಿರುವುದಲ್ಲದೆ ಮುನಿಸಿಪಲ್ ಸರಹದ್ದು ಗಳಲ್ಲಿ ಮನೆಗಂದಾಯ ಮತ್ತು ವೃತ್ತಿ ಕಂದಾಯಗಳ ಮೇಲೆ ರೂಪಾಯಿಗೆ ೨ ಅಣೆ ಯಂತೆ ಸೆಸ್ಸು ವಸೂಲು ಮಾಡುತ್ತಾರೆ. ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಸ್ಥಳೀಯ ಸಂಸ್ಥೆಗಳೇ ನಿಜವಾದ ಜವಾಬ್ದಾರರು. ಮೂಲಭೂತವಾದ ವಿದ್ಯಾಸೌಕರ್ಯ ವನ್ನು ಒದಗಿಸುವುದು ಆ ಸ್ಥಳದ ಜನರ ಹಿತದೃಷ್ಟಿಯಿಂದ ಅವಶ್ಯಕ. ಸ್ಥಳ ಸನ್ನಿವೇಶಗಳಿಗೆ ತಕ್ಕಂತೆ ವಿದ್ಯಾಸೌಲಭ್ಯಗಳನ್ನು ಬೆಳೆಯಿಸಲು ಸ್ಥಳೀಯ ಸಂಸ್ಥೆ ಗಳಿಗಿರುವ ಅನುಕೂಲ ಸರಕಾರಕ್ಕಿಲ್ಲ. ಈ ಜವಾಬ್ದಾರಿ ನ್ಯಾಯವಾಗಿ ಸ್ಥಳೀಯ ಸಂಸ್ಥೆಗಳಿಗೇ ಸೇರಿದುದು. ಸರ್ಕಾರದವರು ಈಗ ಕೈಕೊಂಡಿರುವ ಪ್ರಾಥಮಿಕ ವಿದ್ಯಾಭ್ಯಾಸದ ಬೆಳೆವಣಿಗೆಯ ಕಾರ್ಯಕ್ರಮ, ಈ ಉದ್ದೇಶ ಸಾಧನೆಗೆ ಬೇಕಾ ಗುವ ವೆಚ್ಚಕ್ಕಾಗಿ ಸ್ಥಳೀಯ ಸಂಸ್ಥೆಗಳು ಒಟ್ಟಿನಲ್ಲಿ ಕೂಡಿಸುವ ಹೆಚ್ಚು ಹಣಕ್ಕೆ ತಕ್ಕಂತೆ ಸರಕಾರ ಹೆಚ್ಚುಹೆಚ್ಚಾಗಿ ಸಹಾಯ ದ್ರವ್ಯರೂಪದಲ್ಲಿ ಹಣವನ್ನು ಒದಗಿಸಿ ವಿದ್ಯಾಪ್ರಚಾರ ಕಾರ್ಯವು ನಡೆಯಬೇಕೆಂಬ ನಿಯಮವನ್ನು ಅನುಸರಿಸಿದೆ.

## ಗ್ರಾಮಪಂಚಾಯಿತಿಗಳು

೧೯೨೭ ರಲ್ಲಿ ಜಾರಿಗೆ ಬಂದ ಗ್ರಾಮಪಂಚಾಯಿತಿ ಕಾನೂನು ಪ್ರಕಾರ ಪ್ರತಿ ಹಳ್ಳಿಯಲ್ಲಿಯೂ ಗ್ರಾಮಪಂಚಾಯಿತಿ ಸಂಸ್ಥೆ ಸ್ಥಾಪಿಸಲ್ಪಟ್ಟಿತು. ಆ ವರ್ಷಕ್ಕೆ ಮೊದಲು ಹಲವಾರು ಗ್ರಾಮಗಳನ್ನು ಒಟ್ಟುಗೂಡಿಸಿ ಡಿಸ್ಟ್ರಿಕ್ಟ್ ಬೋರ್ಡಿನ ಮೇಲ್ವಿಚಾರಣೆಗೆ ಒಳಪಟ್ಟು ಕಾರ್ಯಾಚರಣೆ ನಡೆಸುತ್ತಿದ್ದ ಯೂನಿಯನ್ ಎಂಬ ಸಂಸ್ಥೆಗಳು ಕೆಲವುಕಾಲ ಕೆಲಸ ಮಾಡಿದುವು. ನಮ್ಮ ದೇಶದ ಪರಿಸ್ಥಿತಿಯಲ್ಲಿ ಪ್ರತಿಯೊಂದು ಗ್ರಾಮವೂ ಎಷ್ಟು ಚಿಕ್ಕದಾಗಲಿ ತನ್ನತನ್ನ ಅನುಕೂಲಗಳನ್ನು ತಾನೇ ಏರ್ಪಡಿಸುವುದೇ ಉತ್ತಮವಾದುದರಿಂದಲೂ, ಯೂನಿಯನ್ ಏರ್ಪಾಟಿ ನಂತೆ ಒಂದು ಗ್ರಾಮದ ಜನರು ಮತ್ತೊಂದು ಗ್ರಾಮದ ಜನರಮೇಲೆ ತಪ್ಪು ಹಾಕಿ ಯೂನಿಯನ್ನಿನ ಗ್ರಾಮಗಳೆಲ್ಲವೂ ಹಿಂದುಬೀಳಲು ಅವಕಾಶವಿದ್ದುದ ರಿಂದಲೂ ಈ ಏರ್ಪಾಟು ಅಷ್ಟು ಉತ್ತಮವಾಗಿರಲಿಲ್ಲ. ಅಲ್ಲದೆ ಯೂನಿಯನ್ ಏರ್ಪಾಟು ಸಂಸ್ಥಾನದ ಎಲ್ಲಾ ಹಳ್ಳಿಗಳಿಗೂ ಅನ್ವಯಿಸುತ್ತಿರಲಿಲ್ಲ. ದೊಡ್ಡ ದೊಡ್ಡ ಗ್ರಾಮಗಳಿಗೆ ಮಾತ್ರ ಅವುಗಳ ಸುತ್ತಿನ ಕೆಲವು ಗ್ರಾಮಗಳು ಸೇರಿ ಯೂನಿಯನ್ ಸಂಸ್ಥೆಗಳು ಕೆಲಸಮಾಡುತ್ತಿದ್ದುವು. ೧೯೧೦-೧೧ನೆಯ ವರ್ಷದಲ್ಲಿ ಕೇವಲ ೧೬೭ ಯೂನಿಯನ್ನುಗಳು ಮಾತ್ರ ಇದ್ದುವು. ೧೯೨೭ರಲ್ಲಿ ಜಾರಿಗೆ ಬಂದ ಗ್ರಾಮಪಂಚಾಯಿತಿ ಕಾನೂನು ಪ್ರಕಾರ ೧೯೩೦-೩೧ನೆಯ ವರ್ಷದಲ್ಲಿ

೧೦,೩೦೧ ಪಂಚಾಯಿತಿಗಳು ಇದ್ದು, ೧೯೪೦-೪೧ನೆಯ ಸಾಲಿನಲ್ಲಿ ೧೨,೦೭೬ ಪಂಚಾಯಿತಿಗಳು ಕೆಲಸಮಾಡುತ್ತಿದ್ದುವು.

ಗ್ರಾಮಪಂಚಾಯಿತಿಗಳ ಖರ್ಚಿಗೆ ಬೇಕಾದ ವರಮಾನವನ್ನು, ಪಂಚಾಯಿತಿಯವರು ಕಡ್ಡಾಯವಾಗಿ ವಿಧಿಸಿ ವಸೂಲು ಮಾಡಬೇಕಾದ ತೆರಿಗೆಗಳಿಂದ ಸಂಗ್ರಹಿಸಬೇಕೆಂದು ಸರಕಾರದವರು ಗೊತ್ತುಮಾಡಿರುತ್ತಾರೆ. ಮನೆಗಂಡಾಯ, ಅಂಗಡಿಗಳು, ಗಾಡಿಗಳು ಮತ್ತು ಪ್ರಾಣಿಸಪೋಷಣಗಳ ಮೇಲೆ ವಿಧಿಸುವ ಕಂದಾಯಗಳು, ಕಡ್ಡಾಯವಾಗಿ ವಸೂಲಾಗಬೇಕಾದ ತೆರಿಗೆಗಳು. ಪರಿಸಮವಾದ ಪಂಚಾಯಿತಿ ಆಡಳಿತ ಸೌಕರ್ಯಗಳು ಎಲ್ಲಾ ಗ್ರಾಮಗಳಿಗೂ ದೊರೆಯುವಂತೆ ಮಾಡುವ ಉದ್ದೇಶದಿಂದ ಸರಕಾರದವರು ಹೀಗೆ ಕಡ್ಡಾಯವಾಗಿ ತೆರಿಗೆಗಳನ್ನು ವಿಧಿಸಬೇಕೆಂದು ನಿಯಮ ಮಾಡಿದಂತೆ ತೋರುತ್ತದೆ. ಪಂಚಾಯಿತಿಗಳ ವರಮಾನವೆಲ್ಲವೂ ಹೆಚ್ಚುಕಮ್ಮಿ ಈ ಕಡ್ಡಾಯವಾಗಿ ಹಾಕುವ ತೆರಿಗೆಯ ರೂಪವಾಗಿ ವಸೂಲಾಗುವುದು. ನಿರ್ಬಂಧವಾಗಿ ಹಾಕಿರುವ ತೆರಿಗೆಗಳಲ್ಲದೆ ಪಂಚಾಯಿತಿಗಳು ತಮ್ಮ ಇಷ್ಟಾನುಸಾರ ನಿರ್ದಿಷ್ಟ ಕೆಲಸಗಳಿಗೆ ಕೆಲವು ತೆರಿಗೆಗಳನ್ನು ಹಾಕಬಹುದು. ಮುಳ್ಳುಪೊದೆ ಕಿತ್ತುಹಾಕುವುದು, ಶಾಲೆಕಟ್ಟುವುದು ಮತ್ತು ರಿಪೇರಿ, ನೀರುಗಂಟಿಗಳಿಗೆ ಕೊಡಬೇಕಾದ ಮಿರಾಸೆ ಅಥವ ಇನ್ನಾವ ನಿರ್ದಿಷ್ಟ ಕಾರಣಕ್ಕಾದರೂ ಪ್ರತ್ಯೇಕ ತೆರಿಗೆ ಹಾಕಬಹುದು. ೧೯೪೦-೪೧ನೆಯ ವರ್ಷದಲ್ಲಿ ೬೪ ಗ್ರಾಮಪಂಚಾಯಿತಿಗಳು ವಿದ್ಯುದ್ದೀಪಗಳಿಗೋಸ್ಕರ ಬೇಕಾಗುವ ಖರ್ಚು ನಿಮಿತ್ತ, ನೀರು ಸರಬರಾಯಿ ಮೊದಲಾದ ಸ್ಥಳ ಸೌಕರ್ಯಗಳನ್ನು ಒದಗಿಸುವ ನಿಮಿತ್ತ, ಸರಕಾರದ ಅಪ್ಪಣೆಪಡೆದು ಈ ಐಚ್ಛಿಕ ವರ್ಗದ ತೆರಿಗೆಗಳನ್ನು ಹಾಕಿದುವು. ಪಂಚಾಯಿತಿಗಳು ಹಾಕುವ ತೆರಿಗೆಯ ಜೊತೆಗೆ ೧೯೪೦-೪೧ನೆಯ ವರ್ಷದಲ್ಲಿ ಸರಕಾರ ಗ್ರಾಮಪಂಚಾಯಿತಿಗಳಿಗೆ ೧೩ ಲಕ್ಷ ರೂಪಾಯಿಗಳಷ್ಟು ಸಹಾಯಧನ ನೀಡಿತು. ಈ ಸಹಾಯಧನವಲ್ಲದೆ ಗ್ರಾಮಾಂತರಗಳಲ್ಲಿ ಕುಡಿಯುವ ನೀರಿನ ಭಾವಿ ತೆಗೆಯಲು ೩ ಲಕ್ಷ ರೂಪಾಯಿಗಳನ್ನು ಸರಕಾರ ಖರ್ಚುಮಾಡಿತು. ಒಟ್ಟಿನಲ್ಲಿ ಪಂಚಾಯಿತಿಗಳು ಎಷ್ಟು ಖರ್ಚುಮಾಡುತ್ತವೋ, ಆ ಮೊಬಲಗಿನ ಶೇ. ೪೦ ಪ್ರಮಾಣ ಹಣವನ್ನು ಸರಕಾರ ನೇರವಾಗಿ ಪಂಚಾಯಿತಿಗಳ ಉದ್ದೇಶಕ್ಕೆ ಸಹಾಯವಾಗಿ ಖರ್ಚುಮಾಡಿತು.

ಮೇಲೆಹೇಳಿದ ಕಡ್ಡಾಯವಾದ ಮತ್ತು ಐಚ್ಛಿಕ ತೆರಿಗೆಗಳಲ್ಲದೆ, ಗ್ರಾಮಪಂಚಾಯಿತಿಗಳು ವಾರಕ್ಕೆ ಒಂದುದಿನ ಮನೆಗೊಂದು ಆಳಿನಂತೆ ಜನಸಹಾಯ ಪಡೆದು ಗ್ರಾಮರಕ್ಷಣೆ, ಬೇಲಿಹಾಕುವುದು ಇವೇ ಮೊದಲಾದ ಕೆಲಸಗಳನ್ನು ಕೈಗೊಳ್ಳಬಹುದು. ೧೯೩೯-೪೦ನೆಯ ವರ್ಷದಲ್ಲಿ ಈ ರೀತಿ ಜನಸಹಾಯ ಪಡೆದು ಮಾಡಲ್ಪಟ್ಟ ಕೆಲಸಗಳ ಬೆಲೆ ವರ್ಷಕ್ಕೆ ೧೩ ಲಕ್ಷ ರೂಪಾಯಿಗಳಷ್ಟೆಂದು ಅಂದಾಜು ಮಾಡಲ್ಪಟ್ಟಿದೆ.

ನಮ್ಮ ಗ್ರಾಮಪಂಚಾಯಿತಿಗಳ ಆಡಳಿತದಲ್ಲಿ ಮುಖ್ಯ ಕೊರತೆ ಗ್ರಾಮದಲ್ಲಿ ವಸೂಲಾಗದೆ ನಿಂತ ಬಾಕಿಗಳು. ಹೊಸ ಗ್ರಾಮಪಂಚಾಯಿತಿ ವ್ಯವಸ್ಥೆ

೧೯೨೮ನೆಯ ಇಸವಿಯಲ್ಲಿ ಜಾರಿಗೆ ಬಂದಾಗಿನಿಂದಲೂ ವರ್ಷೇವರ್ಷೇ ಬಾಕಿ ಉಳಿದುಹೋಗುತ್ತಿದೆ. ತೀರ ಹಳೆಯ ಬಾಕಿಗಳನ್ನು ಸೋಡಿಬಿಟ್ಟು, ಈಚಿನ ಬಾಕಿಗಳಿಗೆ ರಿಯಾಯಿತಿ ತೋರಿಸಿದರೂ, ಒಟ್ಟಿನಲ್ಲಿ ೧೯೪೦-೪೧ನೆಯ ಸಾಲಿನ ಪ್ರಾರಂಭದಲ್ಲಿ ೪೭·೩೭ ಲಕ್ಷ ರೂಪಾಯಿಗಳ ಬಾಕಿ ಉಳಿದಿತ್ತು. ಧನ ಸಹಾಯ ವಿಲ್ಲದೆ ಪಂಚಾಯಿತಿಗಳು ಉಪಯೋಗವಾದ ಹೆಚ್ಚಿನ ಕಾರ್ಯಕ್ರಮಗಳನ್ನು ಕೈಗೊಳ್ಳಲಾರವು. ಆದಕಾರಣ ಸರಕಾರದವರು ಗ್ರಾಮಪಂಚಾಯಿತಿಗಳ ಬಾಕಿ ಗಳನ್ನು ವಸೂಲು ಮಾಡಲು ಸ್ಪೆಷಲ್ ರೆವಿನ್ಯೂ ಇನ್‌ಸ್ಪೆಕ್ಟರುಗಳನ್ನು ನೇಮಿಸಿ ಅನುಕೂಲಮಾಡಿಕೊಟ್ಟಿರುತ್ತಾರೆ. ಗ್ರಾಮಪಂಚಾಯಿತಿಗಳು ಕೈಗೊಳ್ಳುವ ಕಾಮ ಗಾರಿಗಳು ಸಮರ್ಪಕವಾಗಿ ನಡೆಯಲು ಹಲವಾರು ಪಂಚಾಯಿತಿಗಳಿಗೆ ಒಬ್ಬ ಅಧಿಕಾರಿಯಂತೆ (P.W.D.) ಮರಾಮತ್ತು ಇಲಾಖೆಯ ಅಧಿಕಾರಿಗಳ ಸಹಾಯವನ್ನು ಸರಕಾರದವರು ಎರವಲು ಕೊಡುತ್ತಾರೆ. ೧೯೪೦-೪೧ನೆಯ ವರ್ಷದಲ್ಲಿ ೫೩ ಜನ ಅಧಿಕಾರಿಗಳು ಸಂಸ್ಥಾನದ ಬೇರೆ ಬೇರೆ ಡಿಸ್ಟ್ರಿಕ್ಟುಗಳಲ್ಲಿ ಗ್ರಾಮಪಂಚಾಯಿತಿ ಕಾಮಗಾರಿಗಾಗಿ ನೇಮಿಸಲ್ಪಟ್ಟಿದ್ದರು. ೧೯೪೦-೪೧ನೆಯ ವರ್ಷದಲ್ಲಿ ಹಿಂದಿನ ಬಾಕಿ ೪೭·೩೭ ಲಕ್ಷ ರೂಪಾಯಿಗಳೂ, ಆ ವರ್ಷ ವಸೂಲಾಗ ಬೇಕಾದ ತೆರಿಗೆ ಬಾಬ್ತು ೧೨·೯೪ ಲಕ್ಷ ರೂಪಾಯಿಗಳೂ ಸೇರಿ ಒಟ್ಟು ೬೦·೩೧ ಲಕ್ಷ ರೂಪಾಯಿಗಳು ಬಾಕಿ ಉಳಿಯಿತು. ಗ್ರಾಮಪಂಚಾಯಿತಿಗಳ ವರಮಾನ ವನ್ನು ಪರೀಕ್ಷಿಸಿದಲ್ಲಿ ಇತ್ತೀಚಿನ ವರ್ಷಗಳಲ್ಲಿ ವಸೂಲಿ ಕ್ರಮೇಣ ಉತ್ತಮಗೊಳ್ಳು ತ್ತಿದೆ ಎಂದು ಹೇಳಬಹುದು. ಗ್ರಾಮಪಂಚಾಯಿತಿಗಳ ವಸೂಲಿ ೧೯೩೮-೩೯ರಲ್ಲಿ ೯·೯೨ ಲಕ್ಷ ರೂ. ; ೧೯೩೯-೪೦ರಲ್ಲಿ ೧೦·೯೭ ಲಕ್ಷ ರೂ. ; ೧೯೪೦-೪೧ ರಲ್ಲಿ ೧೪·೬೧ ಲಕ್ಷ ರೂಪಾಯಿಗಳು. ಪಂಚಾಯಿತಿಗಳ ಒಟ್ಟು ಖರ್ಚಿನಲ್ಲಿ ಶೇ. ೪·೪ ಭಾಗ ಕಾಮಗಾರಿಗಳಿಗೂ, ಸುಮಾರು ಶೇ. ೩೦ ಭಾಗ ನೀರು ಸರಬರಾಜಿಗೂ ಖರ್ಚಾಗುತ್ತದೆ.

## ಕೇಂದ್ರ ಸರಕಾರ ಮತ್ತು ಸ್ಥಳೀಯ ಸರಕಾರಿ ಸಂಸ್ಥೆಗಳು

ಸ್ಥಳದಲ್ಲಿ ಬೇಕಾದ ಅನುಕೂಲಗಳನ್ನು ಕಾಲವಿಳಂಬವಿಲ್ಲದೆ ಒದಗಿಸಿಕೊಳ್ಳುವ ಅನುಕೂಲ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚು. ಎಲ್ಲಕ್ಕೂ ಸರಕಾರವನ್ನೇ ಕಾದರೆ ಅನುಕೂಲಗಳು ಸುಲಭವಾಗಿ ಬೇಗನೆ ದೊರೆಯಲಾರವು. ಸ್ಥಳೀಯ ಸರಕಾರಿ ಸಂಸ್ಥೆಗಳು ಜನರನ್ನು ಸಾರ್ವಜನಿಕ ಮತ್ತು ರಾಜಕೀಯ ಜೀವನಕ್ಕೆ ತರಪೇತು ಮಾಡುವ ಮಾರ್ಗಗಳಲ್ಲಿ ಉತ್ತಮ ಸಾಧನವೆಂದು ಅಭಿಪ್ರಾಯ ಉಂಟು. ಸ್ಥಳೀಯ ಸಂಸ್ಥೆಗಳು ಸ್ವತಂತ್ರವಾಗಿ ಕೆಲಸಮಾಡಿದಷ್ಟೂ ಜನರಿಗೆ ಹೆಚ್ಚಿನ ಪ್ರಯೋ ಜನ ಉಂಟು. ಆದರೆ ನಮ್ಮ ಹಳ್ಳಿಗಾಡಿನಲ್ಲಿ ಜನ ಹಿಂದುಳಿದಿರುವುದರಿಂದಲೂ, ಮತ್ತು ಅವರ ಕಡು ಬಡತನ, ಇವೇ ಮೊದಲಾದ ಕಾರಣಗಳಿಂದಲೂ ಸ್ಥಳೀಯ ಸಂಸ್ಥೆಗಳ ಹಣಕಾಸಿನ ಸ್ಥಿತಿ ಇತರ ದೇಶಗಳಲ್ಲಿರುವಷ್ಟು ಉತ್ತಮವಾಗಿರುವುದಿಲ್ಲ.

ಈ ಸಂಸ್ಥೆಗಳಿಗೆ ಹೆಚ್ಚಿನ ಧನಸಹಾಯವನ್ನು ಕೇಂದ್ರಸರಕಾರ ಒದಗಿಸಬೇಕಾಗಿದೆ. ನಮ್ಮ ಸರಕಾರ ಸ್ಥಳೀಯ ಸಂಸ್ಥೆಗಳಿಗೆ ಬೇರೆ ಬೇರೆ ರೀತಿಯಲ್ಲಿ ಹೆಚ್ಚಿನ ಸಹಾಯ ನೀಡುತ್ತದೆ. ಪ್ರತ್ಯಕ್ಷರೂಪದಲ್ಲಿ ಕೊಡುವ ಧನಸಹಾಯವು ೧೯೧೦-೧೧ ರಲ್ಲಿ ೩·೬೦ ಲಕ್ಷ ರೂ. ಗಳಿದ್ದು ೧೯೨೦-೨೧ ರಲ್ಲಿ ೫·೫೧ ಲಕ್ಷ ರೂಪಾಯಿಗಳಿಗೂ, ೧೯೩೦-೩೧ ರಲ್ಲಿ ೫·೮೫ ಲಕ್ಷ ರೂಪಾಯಿಗಳಿಗೂ, ೧೯೪೦-೪೧ ರಲ್ಲಿ ೧೫·೬೯ ಲಕ್ಷ ರೂಪಾಯಿಗಳಿಗೂ ಹೆಚ್ಚಿತು. ೧೯೪೦-೪೧ರಲ್ಲಿ ಬೆಂಗಳೂರು ಮತ್ತು ಮೈಸೂರು ಪಟ್ಟಣಗಳ ಅಭಿವೃದ್ಧಿಗಾಗಿ ೪·೮೯ ಲಕ್ಷ ರೂಪಾಯಿಗಳೂ, ಇತರ ಮುನಿಸಿಪಾಲಿಟಿಗಳಿಗಾಗಿ ೪·೭೩ ಲಕ್ಷ ರೂಪಾಯಿಗಳೂ, ಗ್ರಾಮಾಭಿವೃದ್ಧಿ, ಕುಡಿಯುವ ನೀರಿನ ಬಾವಿಗಳನ್ನು ತೋಡುವುದು, ಮತ್ತು ಮಲೆನಾಡಿನ ಯೋಗಕ್ಷೇಮದ ಕೆಲಸಗಳಿಗಾಗಿ ೫·೮೮ ಲಕ್ಷ ರೂಪಾಯಿಗಳೂ, ಹೀಗೆ ಒಟ್ಟು ೧೫·೬೯ ಲಕ್ಷ ರೂಪಾಯಿಗಳ ಸಹಾಯದ್ರವ್ಯವನ್ನು ಕೇಂದ್ರ ಸರಕಾರ ಸ್ಥಳೀಯ ಸಂಸ್ಥೆಗಳಿಗಾಗಿ ಒದಗಿಸಿತು.

ಸಾಮಾನ್ಯವಾಗಿ ಅನೇಕ ದೇಶಗಳಲ್ಲಿ ವೈದ್ಯ ಮತ್ತು ವಿದ್ಯಾ ಸೌಲಭ್ಯಗಳಿಗಾಗುವ ವೆಚ್ಚದ ಬಹುಭಾಗವನ್ನು ಸ್ಥಳೀಯ ಸಂಸ್ಥೆಗಳು ವಹಿಸುತ್ತವೆ. ನಮ್ಮ ಸಂಸ್ಥಾನದ ಈ ವೆಚ್ಚದ ಅತ್ಯಲ್ಪ ಭಾಗಮಾತ್ರ ಸ್ಥಳೀಯ ಸಂಸ್ಥೆಗಳಿಂದ ಒದಗುತ್ತದೆ. ಒಟ್ಟು ಖರ್ಚನ್ನು ವಹಿಸುವ ಶಕ್ತಿ ನಮ್ಮ ಸ್ಥಳೀಯ ಸಂಸ್ಥೆಗಳಿಗಿಲ್ಲ. ೧೯೪೦-೪೧ರಲ್ಲಿ, ಸಂಸ್ಥಾನದಲ್ಲಿ ಒಟ್ಟು ವಿದ್ಯಾಭ್ಯಾಸಕ್ಕೆ ತಗಲಿದ ಖರ್ಚಿನ ಶೇ. ೯·೪೩ ಭಾಗ ಮಾತ್ರ ಸ್ಥಳೀಯ ಸಂಸ್ಥೆಗಳಿಂದ ಒದಗಿತು. ಯೂರೋಪು ಮತ್ತು ಇತರ ದೇಶಗಳಲ್ಲಿ ಸರಕಾರವು ಹಾಕುವ ತೆರಿಗೆಗಳ ಒಂದು ನಿಶ್ಚಿತ ಭಾಗವನ್ನು ಸ್ಥಳೀಯ ಸಂಸ್ಥೆಗಳಿಗೆ ಕೊಡುವ ಪದ್ಧತಿಯುಂಟು. ಇದರಿಂದ ಸ್ಥಳೀಯ ಸಂಸ್ಥೆಗಳಿಗೆ ಕೆಲವು ಬಗೆಯ ಪ್ರಜಾಸೌಕರ್ಯಗಳನ್ನು ಒದಗಿಸುವ ಜವಾಬ್ದಾರಿಯನ್ನು ವಹಿಸಲು ಸಾಧ್ಯವಾಗುವುದು.

ಪ್ರಜಾವರ್ಗದಮೇಲೆ ಬೀಳುವ ತೆರಿಗೆಯ ಹೊರೆಯನ್ನು ಲೆಕ್ಕಹಾಕುವಾಗ ಸ್ಥಳೀಯ ಸರಕಾರೀ ಸಂಸ್ಥೆಗಳು ವಿಧಿಸುವ ತೆರಿಗೆಗಳನ್ನೂ ಎಣಿಸಬೇಕು. ಹಾಗೆಯೇ ಸಾರ್ವಜನಿಕ ವೆಚ್ಚದಿಂದ ಪ್ರಜಾಹಿತಸಾಧನೆ ಯಾವರೀತಿ ಕೈಗೂಡುವುದೆಂಬುದನ್ನು ಪರೀಕ್ಷಿಸುವಾಗ ಸ್ಥಳೀಯ ಸರಕಾರಿ ಸಂಸ್ಥೆಗಳಿಂದ ಒದಗುವ ಅನುಕೂಲಗಳನ್ನೂ ಗಮನದಲ್ಲಿಡಬೇಕು. ಆದರೆ ಸ್ಥಳೀಯ ಸರಕಾರಿ ಸಂಸ್ಥೆಗಳು ವಿಧಿಸುವ ತೆರಿಗೆ ಮತ್ತು ಮಾಡುವ ವೆಚ್ಚಗಳಲ್ಲಿ ಒಂದು ವೈಶಿಷ್ಟ್ಯವಿದೆ. ತಮ್ಮ ಜವಾಬ್ದಾರಿಯನ್ನು ತಾವೇ ನಿರ್ವಹಿಸಲು ಕೊಡಬೇಕಾದ ಸ್ಥಳೀಯ ತೆರಿಗೆಯ ಹೊರೆ ಅಲ್ಲಿಯ ನಿವಾಸಿಗಳಿಗೆ ಹಗುರವಾಗಿ ಕಾಣುವುದು. ಈ ಸಂಸ್ಥೆಗಳ ವೆಚ್ಚದಿಂದ ಆಗುವ ಸೌಕರ್ಯಗಳು, ಅಲ್ಲಿ ವಾಸಿಸುವ ಪ್ರಜೆಗೆ ಕಣ್ಣಿಗೆ ಕಟ್ಟಿ ಕಾಣುವಂತೆ ಅವನ ನಿತ್ಯಜೀವನಕ್ಕೆ ಬಹುಗಾಢವಾಗಿ ಅನುವನ್ನುಂಟುಮಾಡುತ್ತವೆ. ಸಾರ್ವಜನಿಕ ವೆಚ್ಚದಿಂದ ಸಾಧಿಸುವ ಹಿತಸೌಲಭ್ಯವು ತಂಪಾಗಿ ಬೀಸುವ ಗಾಳಿಯಂತೆ ಜನಸಾಮಾನ್ಯಕ್ಕೆಲ್ಲಾ ಹಿತಕರವಾದುದು. ಸ್ಥಳೀಯ ಸಂಸ್ಥೆಗಳು

ಕಲ್ಪಿಸುವ ಸೌಕರ್ಯಗಳು, ಗಾಳಿಬೆಳಕಿದ್ದು ಅನುಕೂಲವಾಗಿ, ಅಂದವಾಗಿರುವ ಸಣ್ಣ ಮನೆಯಂತೆ ವ್ಯಕ್ತಿಶಃ ಸುಖವನ್ನುಂಟುಮಾಡಬಲ್ಲುದು. ಸಂಪಾದನೆ ಮಾಡುವವನಿಗೆ ತನ್ನ ಮನೆಯ ಮುಂದಿನ ರಸ್ತೆ ಚೆನ್ನಾಗಿ ಚೊಕ್ಕಟವಾಗಿದ್ದರೆ, ಮನೆಯ ಮಕ್ಕಳಿಗ ಆಟಪಾಟಗಳಿಗೆ ಅನುಕೂಲವಾದ ಉದ್ಯಾನವನ, ವಾಚನಾಲಯಗಳು ಹತ್ತಿರವಿದ್ದು, ತಾನಿರುವ ಊರು ಆರೋಗ್ಯವಾಗಿದ್ದರೆ ಅವನಿಗೆ ಅದಕ್ಕಿಂತ ಮಿಗಿಲಾದ ಅನುಕೂಲತೆಗಳಿಲ್ಲ. ಸಾರ್ವಜನಿಕ ವೆಚ್ಚಕ್ಕಿಂತಲೂ ಸ್ಥಳೀಯ ಸಂಸ್ಥೆಗಳ ವೆಚ್ಚದ ಮೊತ್ತ ಅತಿಶಯವಾಗಿ ಬೆಳೆಯುವುದರಿಂದ ಪ್ರಜಾಸಮುದಾಯಕ್ಕೆ ಹೆಚ್ಚಿನ ಹಿತವಾಗುವುದಕ್ಕೆ ಅವಕಾಶವಿರುತ್ತದೆ. ನಮ್ಮ ಸ್ಥಳೀಯ ಸರ್ಕಾರಿ ಸಂಸ್ಥೆಗಳು ಈ ರೀತಿಯಲ್ಲಿ ವೆಚ್ಚಮಾಡಲು ಸಾಧ್ಯವಿಲ್ಲವೆಂಬ ಅಂಶವನ್ನು ನಾವು ಗಮನದಲ್ಲಿಡಬೇಕು.

ಸಂಸ್ಥಾನದ ಪ್ರಜಾವರ್ಗದ ಐಶ್ವರ್ಯ ಬೆಳೆದು, ನಮ್ಮ ಸರಕಾರದ ಆದಾಯ ಹೆಚ್ಚಿ, ಜನರು ವಿದ್ಯಾವಂತರಾದಂತೆಲ್ಲಾ ನಮ್ಮ ಸಾರ್ವಜನಿಕ ಹಣಕಾಸಿನ ನೀತಿಯಲ್ಲಿ ಒಂದು ಮಾರ್ಪಾಟು ಸಾಧ್ಯವಾದೀತು. ಆಗ ಸರಕಾರಕ್ಕೆ ಒದಗುವ ಹುಟ್ಟುವಳಿಯಲ್ಲಿ, ಒಂದು ನಿಗದಿಯಾದ ಭಾಗವನ್ನು, ಸ್ಥಳದ ಜನರ ಸಮ್ಮತಿ, ಅಭೀಷ್ಟದಂತೆ, ಅವರ ಉಪಯೋಗಕ್ಕಾಗಿಯೇ ಕಾದಿಟ್ಟರೆ ಸಾರ್ವಜನಿಕ ಹಣಕಾಸಿನಿಂದ ಹೆಚ್ಚಿನ ಪ್ರಜಾಹಿತ ಸಾಧಿಸಲಾಗಬಹುದು. ಆಗ ಸಮಾಜದ ಹಿತತತ್ವವನ್ನು ಸರಕಾರದ ಆಯವ್ಯಯದಿಂದ ಇಮ್ಮಡಿಯಾಗಿ ಸಾಧಿಸಲು ಸಾಧ್ಯವಾಗುವುದು.

---

WD 2385—GBPM—1,000—30-3-54